# ತ.ರಾ.ಸು. ಕಾದಂಬರಿಗಳು : ಚರಿತ್ರೆಯ ವಿನ್ಯಾಸಗಳು

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪರಿಷ್ಕೃತ ಮಹಾಪ್ರಬಂಧ)

ಸಂಶೋಧಕರು

ಸಂಗಯ್ಯ ಎಸ್. ಶಿವಪ್ಪಯ್ಯನಮಠ

ಮಾರ್ಗದರ್ಶಕರು

ಡಾ. ಶಿವಾನಂದ ಈ. ಕಳಕಣ್ಣವರ

ಸಹಪ್ರಾಧ್ಯಾಪಕರು



ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩೨೭೬

೨೦೧೭

# ತ.ರಾ.ಸು. ಕಾದಂಬರಿಗಳು : ಚರಿತ್ರೆಯ ವಿನ್ಯಾಸಗಳು

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪರಿಷ್ಕೃತ ಮಹಾಪ್ರಬಂಧ)



ಸಂಶೋಧಕರು
ಸಂಗಯ್ಯ ಎಸ್. ಶಿವಪ್ಪಯ್ಯನಮಠ

ಮಾರ್ಗದರ್ಶಕರು
ಡಾ. ಶಿವಾನಂದ ಈ. ಕಳಕಣ್ಣವರ
ಸಹಪ್ರಾಧ್ಯಾಪಕರು




ಭಾಷಾ ನಿಕಾಯ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬

೨೦೧೭

## ಪ್ರಮಾಣ ಪತ್ರ

ತ.ರಾ.ಸು. ಕಾದಂಬರಿಗಳು : ಚರಿತ್ರೆಯ ವಿನ್ಯಾಸಗಳು ಕುರಿತಾದ ಪಿಎಚ್.ಡಿ. ಸಂಶೋಧನ ಮಹಾಪ್ರಬಂಧವನ್ನು ಶ್ರೀ ಸಂಗಯ್ಯ ಎಸ್. ಶಿವಪ್ಪಯನಮಠ ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಮಹಾಪ್ರಬಂಧವು ಇದಕ್ಕೂ ಮೊದಲು ಯಾವುದೇ ಪದವಿಗಾಗಿ ಎಲ್ಲಿಯೂ ಸಾದರಪಡಿಸಿಲ್ಲವೆಂದು ಹಾಗೂ ಈ ಮೊದಲು ಇಡಿಯಾಗಿ ಇಲ್ಲವೆ ಬಿಡಿಯಾಗಿ ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲ್ಪಟ್ಟಿಲ್ಲವೆಂದು ಮತ್ತು ಪ್ರಕಟವಾಗಿಲ್ಲವೆಂದು ಪ್ರಮಾಣಿಕರಿಸಿದ್ದೇನೆ.

ಸ್ಥಳ : ಹುಬ್ಬಳ್ಳಿ
ದಿನಾಂಕ : 09-02-2017

ಡಾ. ಶಿವಾನಂದ ಈ. ಕಳಕಣ್ಣವರ
(ಮಾರ್ಗದರ್ಶಕರು)
ಜೆ.ಎಸ್.ಎಸ್. ಡಾ. ಡಿ.ವೀರೇಂದ್ರ ಹೆಗ್ಗಡೆ
ಸಂಶೋಧನ ಕೇಂದ್ರ, ವಿದ್ಯಾಗಿರಿ,
ಧಾರವಾಡ-೦೪

## ಘೋಷಣಾ ಪ್ರಮಾಣ ಪತ್ರ

ತ.ರಾ.ಸು. ಕಾದಂಬರಿಗಳು : ಚರಿತ್ರೆಯ ವಿನ್ಯಾಸಗಳು ಕುರಿತಾದ ಪಿಎಚ್.ಡಿ. ಸಂಶೋಧನ ಮಹಾಪ್ರಬಂಧವನ್ನು ನಾನು ಡಾ. ಶಿವಾನಂದ ಈ. ಕಳಕಣ್ಣವರ, ಸಹಪ್ರಾಧ್ಯಾಪಕರು, ನೆಹರು ಕಲಾ, ವಿಜ್ಞಾನ ಹಾಗೂ ವಾಣಿಜ್ಯ ಮಹಾವಿದ್ಯಾಲಯ, ಹುಬ್ಬಳ್ಳಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಈ ಮಹಾಪ್ರಬಂಧವು ಇದಕ್ಕೂ ಮೊದಲು ಯಾವುದೇ ಪದವಿಗಾಗಿ ಎಲ್ಲಿಯೂ ಸಾದರಪಡಿಸಿಲ್ಲವೆಂದು ಹಾಗೂ ಈ ಮೊದಲು ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲ್ಪಟ್ಟಿಲ್ಲವೆಂದು ಮತ್ತು ಇಡಿಯಾಗಿ ಇಲ್ಲವೆ ಬಿಡಿಯಾಗಿ ಪ್ರಕಟವಾಗಿಲ್ಲವೆಂದು ಪ್ರಮಾಣಿಕರಿಸಿದ್ದೇನೆ.

ಸ್ಥಳ : ಧಾರವಾಡ

ದಿನಾಂಕ : 08/02/2017

ಸಂಗಯ್ಯ ಎಸ್. ಶಿವಪ್ಪಯ್ಯನಮಠ
(ಸಂಶೋಧನ ವಿದ್ಯಾರ್ಥಿ)
ಜೆ.ಎಸ್.ಎಸ್. ಡಾ. ಡಿ.ವೀರೇಂದ್ರ ಹೆಗ್ಗಡೆ
ಸಂಶೋಧನ ಕೇಂದ್ರ, ವಿದ್ಯಾಗಿರಿ,
ಧಾರವಾಡ-೦೪

# ಪರಿವಿಡಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ ಮತ್ತು ಸ್ವರೂಪ

ಆಧುನಿಕ ಕನ್ನಡ ಸಾಹಿತ್ಯದ ಸಿದ್ಧಿ ಆಗಾಧವಾದುದು. ಕಾವ್ಯ, ಕಥೆ, ಕಾದಂಬರಿ, ನಾಟಕ, ವಿಮರ್ಶೆಗಳಂಥ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಅದು ತನ್ನ ಹರವನ್ನು ಪಡೆದಿದೆ. ಈ ಸಾಹಿತ್ಯಕ ಬೆಳವಣಿಗೆಯಲ್ಲಿ ಕಾದಂಬರಿ ಸಾಹಿತ್ಯಕ್ಕೂ ಅದರದೇ ಆದ ಮಹತ್ವವಿದೆ. ಇದೊಂದು ಲೋಕಪ್ರಿಯವಾದ ಸಾಹಿತ್ಯ ಆದರ್ಶ ಮತ್ತು ವಾಸ್ತವಗಳನ್ನು ತನ್ನ ಅಂತರಂಗದಲ್ಲಿರಿಸಿಕೊಂಡು ಜನರ ಆಶೋತ್ತರಗಳಿಗೆ ಸ್ಪಂದಿಸುತ್ತ ಸಾಂಸ್ಕೃತಿಕ ನೆಲೆಗಟ್ಟನ್ನು ಇದು ಪಡೆದುಕೊಂಡಿದೆ. ಮೊದ ಮೊದಲು ಪಾಶ್ಚಾತ್ಯ ಹಾಗೂ ಭಾರತೀಯ ಸಾಹಿತ್ಯದ ಪ್ರಭಾವದೊಂದಿಗೆ ಕನ್ನಡದಲ್ಲಿ ಕಾಲಿಸಿದ ಈ ಸಾಹಿತ್ಯವು ನಂತರದ ದಿನಗಳಲ್ಲಿ ಪ್ರಾದೇಶಿಕ ಸತ್ವದೊಂದಿಗೆ ತನ್ನ ಬೆಳವಣಿಗೆಯನ್ನು ಕಂಡುಕೊಂಡಿತು. ನವೋದಯ, ಪ್ರಗತಿಶೀಲ, ನವ್ಯ ಹಾಗೂ ದಲಿತ-ಬಂಡಾಯ ಎಂಬ ಚಾರಿತ್ರಿಕ ಕಾಲಘಟ್ಟಗಳಲ್ಲಿ ಇದರ ಬೆಳವಣಿಗೆ ಕಂಡುಬರುತ್ತದೆ.

ನವೋದಯ ಸಾಹಿತ್ಯದ ಕಾಲಘಟ್ಟದ ಸಂದರ್ಭದಲ್ಲಿ ಪಾಶ್ಚಾತ್ಯ ಸಾಹಿತ್ಯ ಪ್ರೇರಣೆಯೊಂದಿಗೆ ಕಾದಂಬರಿ ಸಾಹಿತ್ಯ ಕನ್ನಡದಲ್ಲಿ ಕಾಣಿಸಿಕೊಂಡಿತು. ೧೮೭೫ ರಿಂದ ೧೯೩೦ರ ವರೆಗಿನ ಕಾಲವನ್ನು ಕನ್ನಡ ಕಾದಂಬರಿಯ ಉದಯಕಾಲವೆಂದು ಗುರುತಿಸಲಾಗಿದೆ. ಈ ಘಟನೆಯ ಹಿಂದಿನ ಮುಖ್ಯ ಪ್ರೇರಣೆ ಇಂಗ್ಲೀಷ್ ಶಿಕ್ಷಣದಿಂದ ನೇರವಾಗಿ, ಬಂಗಾಲಿ ಹಾಗೂ ಮರಾಠಿಗಳಂಥ ಭಾರತೀಯ ಭಾಷೆಗಳಿಂದ ಸುತ್ತಾಗಿ ಹರಿದು ಬಂದ ಪಾಶ್ಚಾತ್ಯ ಪ್ರಭಾವವೆಂಬುದು ಸಾಹಿತ್ಯ ಚರಿತ್ರೆಯಲ್ಲಿ ಅನೇಕ ಸಲ ದಾಖಲಾದ ಮಾತು. ಆದರೆ ಈ ಪ್ರಭಾವದ ಸ್ವರೂಪ ಮಾತ್ರ ಇನ್ನೂ ನಮಗೆ ಸ್ಪಷ್ಟವಾಗಿಲ್ಲ. ಯಾಕೆಂದರೆ, ಇದು ಸಾಹಿತ್ಯಕ್ಕಷ್ಟೇ ಸೀಮಿತವಾದ ಪ್ರಶ್ನೆಯಾಗಿರದೆ, ರಾಜಕೀಯ ಹಾಗೂ ಸಾಂಸ್ಕೃತಿಕ ಮುಖಾಮುಖಿಯ ಸಮಸ್ಯೆಯೂ ಆಗಿದೆ"[೧] ಎಂಬ ಜಿ.ಎಸ್. ಆಮೂರರ ಮಾತು ಕಾದಂಬರಿಯ ಹುಟ್ಟು ಮತ್ತು ಸ್ವರೂಪದ ಹಿನ್ನೆಲೆಯಲ್ಲಿ ಗಮನಾರ್ಹವಾಗಿದೆ. ಅದೇನೆ ಇರಲಿ, ಕನ್ನಡದಲ್ಲಿ ಕಾದಂಬರಿ ಸಾಹಿತ್ಯವು ಉಳಿದ ಸಾಹಿತ್ಯ ಪ್ರಕಾರಗಳಿಗಿಂತ ವಿಭಿನ್ನವಾಗಿದ್ದು, ಇದೊಂದು ಜನಪ್ರಿಯ ಸಾಹಿತ್ಯ ಮಾಧ್ಯಮವಾಗಿರುವುದಂತೂ ಸತ್ಯ.

ಬಂಕಿಮಚಂದ್ರ ಹಾಗೂ ಹರಿನಾರಾಯಣ ಆಪ್ಟೆಯವರ ಪ್ರಭಾವದಿಂದ ಕನ್ನಡದಲ್ಲಿ ಕಾಣಿಸಿಕೊಂಡ ಕಾದಂಬರಿಯ ಮೊದಮೊದಲು ಸಂಪ್ರದಾಯಬದ್ಧ ವಸ್ತುವನ್ನೇ ನಂಬಿಕೊಂಡಿತ್ತು. ಇದಕ್ಕೆ ಪೂರಕವಾಗಿ ಕಾಲದಲ್ಲಿ ಬಂದ ಬಿ.ವೆಂಕಟಾಚಾರ್ಯ ಹಾಗೂ ಗಳಗನಾಥರ ಕಾದಂಬರಿಗಳು ನಿದರ್ಶನ. 'ಆನಂದಮಠ', 'ಕುಮುದಿನಿ', 'ವಿಷವೃಕ್ಷ'ಗಳಂಥ

ಕಾದಂಬರಿಗಳಲ್ಲಿ ಪ್ರಕೃತಿ ವರ್ಣನೆ ಮತ್ತು ಸ್ತ್ರೀವರ್ಣನೆಗಳಂಥ ಚಿತ್ರಣಗಳನ್ನೇ ಕಾಣುತ್ತೇವೆ. ಸನಾತನ ಧರ್ಮವನ್ನು ಬಲವಾಗಿ ನಂಬಿದ್ದ ಈ ಕಾಲದ ಲೇಖಕರು ಸಾಂಪ್ರದಾಯಿಕ ವಸ್ತು ಮತ್ತು ರಚನಾ ಕ್ರಮಗಳಿಗೆ ಮಾರುಹೋಗಿದ್ದರು. ಈ ಒಂದು ಗುಣಧರ್ಮ ಹತ್ತೊಂಬತ್ತನೆಯ ಶತಮಾನದವರೆಗೂ ಮುಂದುವರೆಯಿತು.

ಮುಂದೆ ನವೋದಯ ಸಾಹಿತ್ಯ ಚಳುವಳಿಯಿಂದಾಗಿ ಹತ್ತು ಹಲವು ಹೊಸ ವಿಚಾರಗಳು ಹಾಗೂ ಆವಿಷ್ಕಾರಗಳು ಕಾಣಿಸಿಕೊಳ್ಳುವಂತಾಯಿತು. ಈ ಸಂದರ್ಭದಲ್ಲಿ ರಾಷ್ಟ್ರೀಯ ಪ್ರಜ್ಞೆ, ನಾಡಾಭಿಮಾನ, ನಿಸರ್ಗದ ಜೀವಂತಿಕೆ, ವಿವಿಧ ಸ್ತರದ ಜನರ ಬದುಕನ್ನು ಕುರಿತಾದ ಕಾಳಜಿ, ಪಾಶ್ಚಾತ್ಯ ಸಾಹಿತ್ಯಕ್ಕನುಗುಣವಾದ ಪ್ರತಿಕ್ರಿಯೆಗಳಂಥ ಗುಣಗಳು ಸಾಹಿತ್ಯದಲ್ಲಿ ಕಾಣಿಸಿಕೊಂಡವು. ಆ ಕಾಲದಲ್ಲಿ ಬಂದ ಕಾದಂಬರಿಕಾರರು ವಾಸ್ತವ ಮಾರ್ಗವನ್ನು ಆಯ್ದುಕೊಂಡರು. ಇದಕ್ಕೆ ಕಾರಣ ಇವರಿಗೆ ತಮ್ಮ ಪರಿಸರದ ಬಗೆಗಿನ ಆಸಕ್ತಿಯಾಗಿತ್ತು. ಬದಲಾವಣೆಯ ತುಡಿತದಲ್ಲಿದ್ದ ಸಮಾಜವನ್ನೇ ಇವರು ತಮ್ಮ ಕಾದಂಬರಿಗಳಿಗೆ ವಸ್ತುವನ್ನಾಗಿಸಿಕೊಂಡರು. ಈ ಕಾರಣದಿಂದಾಗಿ ಪ್ರಾದೇಶಿಕ ಜನಜೀವನದ ಚಿತ್ರಣವು ಕಾದಂಬರಿಗಳಲ್ಲಿ ಕಾಣಿಸಿಕೊಳ್ಳುವಂತಾಯಿತು. ಈ ಹಿನ್ನೆಲೆಯಲ್ಲಿ ಶಿವರಾಮಕಾರಂತರ 'ಮರಳಿಮಣ್ಣಿಗೆ', ಕುವೆಂಪುರವರ 'ಕಾನೂರು ಹೆಗ್ಗಡಿತಿ', ವಿನಾಯಕ ಕೃಷ್ಣಗೋಕಾಕರ 'ಇಜ್ಜೋಡು'ವಿನಂಥ ಕಾದಂಬರಿಗಳು ಗಮನಾರ್ಹ ರಚನೆಗಳಾಗಿ ಕಂಡವು. ಆದರೆ ಈ ಮಾತು ಆ ಕಾಲದ ಎಲ್ಲ ಕಾದಂಬರಿಗಳಿಗೂ ಅನ್ವಯಿಸುವಂಥಹದ್ದಲ್ಲ. "ವಾಸ್ತವ ಮಾರ್ಗದ ಕಾದಂಬರಿಕಾರರು ಪ್ರಜ್ಞೆ, ಪರಿಸರಗಳ ಸಂಬಂಧವನ್ನು ಅರಿತಿದ್ದರು. ಆದರೆ ಈ ಸಂಬಂಧದ ಅನಿವಾರ್ಯತೆಯನ್ನು ಕಲಾತ್ಮಕವಾಗಿ ಪ್ರಸ್ತಾಪಿಸಲು, ಕೆಲವೊಂದು ಅಪವಾದಗಳನ್ನು ಬಿಟ್ಟರೆ, ಶಕ್ತರಾಗಲಿಲ್ಲ. ಇದ ಪರಿಣಾಮವೆಂದರೆ, ಈ ಮಾರ್ಗದ ಮಹತ್ವದ ಕಾದಂಬರಿಗಳೆಲ್ಲವೂ ಉತ್ತಮ ಕಲಾಕೃತಿಗಳಾಗಲಿಲ್ಲ."[೨] ಎಂಬ ಜಿ.ಎಸ್. ಆಮೂರರ ಅಭಿಪ್ರಾಯದಲ್ಲಿ ಹುರುಳಿದೆ. ಹೀಗಿರುವಾಗಲೂ ಆ ಮಾರ್ಗದಲ್ಲಿ ಕೆಲವಾದರೂ ಉತ್ತಮ ಕಾದಂಬರಿಗಳು ಹೊರಬರಲು ಸಾಧ್ಯವಾಯಿತು. ಎನ್ನುವುದು ಸಮಾಧಾನದ ಸಂಗತಿಯಾಗಿದೆ.

ನವೋದಯ ಸಾಹಿತ್ಯ ಚಳುವಳಿ ಪ್ರವರ್ಧಮಾನದಲ್ಲಿದ್ದಾಗ ಹೊಸ ಬಗೆಯ ಸಾಹಿತ್ಯ ಧೋರಣೆಗಳು ಕಾಣಿಸಿಕೊಂಡವು. ಈ ಪ್ರವೃತ್ತಿಯಿಂದಾಗಿ ನವೋದಯ ಸಾಹಿತ್ಯಕ್ಕೆ ಪ್ರತಿಯೆಂಬಂತೆ ಕನ್ನಡದಲ್ಲಿ 'ಪ್ರಗತಿಶೀಲ' ಸಾಹಿತ್ಯ ಚಳುವಳಿಯೊಂದು ಹುಟ್ಟುಕೊಂಡಿತು. ಈ ಧೋರಣೆಯ ಲೇಖಕರು ನವೋದಯದ ವಾಸ್ತವ ಮಾರ್ಗವನ್ನು ತಿರಸ್ಕರಿಸಿ, ಸಮಾಜದಲ್ಲಿನ ಪ್ರಗತಿಪರ ವಿಚಾರಕ್ಕೆ ಹೆಚ್ಚು ಒತ್ತುಕೊಟ್ಟು ಸಾಹಿತ್ಯ ರಚಿಸಲು ಮುಂದಾದರು. ಅ.ನ.ಕೃಷ್ಣರಾಯ, ನಿರಂಜನ, ತ.ರಾ.ಸು. ಹಾಗೂ ಬಸವರಾಜ ಕಟ್ಟೀಮನಿಯವರಂತಹ ಕಾದಂಬರಿಕಾರರು ಈ ಹೊಸಗಾಳಿಯ ಆಕರ್ಷಣೆಗೆ ಒಳಗಾದರು. "ಅದೇನಿದ್ದರೂ

ನವೋದಯ ಕಾಲದ ಸೃಜನಾತ್ಮಕ ಪ್ರಯತ್ನಗಳನ್ನಂತೂ ಮರೆಯುವಂತಿಲ್ಲ. ಮುಂದಿನ ಕಾದಂಬರಿಗಳಿಗಾಗಿಯೇ ಎನ್ನುವಂತೆ, ಈ ಪ್ರಯೋಗಗಳು ಕನ್ನಡ ಗದ್ಯವನ್ನು ಅದರ ನೈಜಕಾಂತಿಗೆ ಕುಂದು ಬರದಂತೆ ಕಾಯ್ದುಕೊಂಡು ಬಂದಿವೆ. ಆದ್ದರಿಂದಲೇ ಹೊಸ ಕಾದಂಬರಿ ಒಮ್ಮೆಲೇ ಹೊಸ ಸೃಷ್ಟಿಯಾಗಿ ಅವತರಿಸಲು ಅನುವು ದೊರೆತಂತಾಯಿತು."[5] ಎಂಬ ಕೀರ್ತಿನಾಥ ಕುರ್ತಕೋಟಿಯವರ ಮಾತು ಗಮನಾರ್ಹವಾದುದು. ನವೋದಯ ಕಾಲದ ಪ್ರಯತ್ನದ ಫಲವಾಗಿಯೇ ಮುಂದೆ ಕನ್ನಡದ ಕಾದಂಬರಿಯಲ್ಲಿ ಹೊಸ ಹೊಸ ಪ್ರಯೋಗಗಳು ನಡೆಯಲು ಪ್ರೇರಣೆಯುಂಟಾಯಿತೆಂಬುದು ಗಮನಿಸಬೇಕಾದ ವಿಚಾರವಾಗಿದೆ.

'ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಕಂಡುಬರುವ ವಿವಿಧ ಸಾಹಿತ್ಯಿಕ ಚಳುವಳಿಗಳ ಹುಟ್ಟು, ಬೆಳವಣಿಗೆ ಅವುಗಳ ಮಹತ್ವ, ಪ್ರಭಾವ ಪರಿಣಾಮಗಳ ಹಿನ್ನೆಲೆಯಲ್ಲಿ ಈಗಾಗಲೇ ಕನ್ನಡ ಸಾಹಿತ್ಯದಲ್ಲಿ ಸಾಕಷ್ಟು ಚರ್ಚೆ ಹಾಗೂ ಚಿಂತನಾತ್ಮಕ ಅಧ್ಯಯನಗಳು ನಡೆದಿವೆ. ಆ ಕಾರಣಕ್ಕಾಗಿ ಅದರ ಹೆಚ್ಚಿನ ವಿಶ್ಲೇಷಣೆ ಇಲ್ಲಿ ಅಪ್ರಸ್ತುತವೆಂದು ಭಾವಿಸಲಾಗಿದೆ. ಮುಖ್ಯವಾಗಿ (ಪ್ರಗತಿಶೀಲ ಸಾಹಿತ್ಯದ ಹಿನ್ನೆಲೆಯೊಂದಿಗೆ ತ.ರಾ.ಸು. ಸಾಹಿತ್ಯದ ಸತ್ವದ ಕಡೆಗೆ ಲಕ್ಷಹರಿಸಲಾಗಿದೆ. ಅದರಲ್ಲೂ ಮುಖ್ಯವಾಗಿ ಈ ಸಂದರ್ಭದಲ್ಲಿ ರಚನೆಗೊಂಡ ಐತಿಹಾಸಿಕ ಕಾದಂಬರಿಗಳ ವಸ್ತು ಮತ್ತು ಚಾರಿತ್ರಿಕ ವಿನ್ಯಾಸಗಳ ಮಹತ್ವವನ್ನು ಶೋಧಿಸುವುದೇ ಈ ಸಂಶೋಧನ ಅಧ್ಯಯನದ ಮೂಲ ಉದ್ದೇಶವಾಗಿದೆ. ಯಾವುದೇ ಸಾಹಿತ್ಯ ಚಳುವಳಿಯ ಹುಟ್ಟಿಗೆ ಅದರ ಸೈದ್ಧಾಂತಿಕ ಹಾಗೂ ತಾತ್ವಿಕ ಅಂಶಗಳು ಕಾರಣವಾಗಿರುತ್ತವೆ. ಇದಕ್ಕೆ ಕನ್ನಡದ ಪ್ರಗತಿಶೀಲ ಸಾಹಿತ್ಯ ಚಳುವಳಿಯು ಹೊರತಾಗಿಲ್ಲ. ಬಾಹ್ಯ ಹಾಗೂ ಆಂತರಿಕ ಒತ್ತಡದಿಂದಾಗಿ ಆ ಚಳುವಳಿಯ ಸೈದ್ಧಾಂತಿಕ ನಿಲುವುಗಳು ಗೋಚರಿಸುತ್ತವೆ. "ರಷ್ಯಾ ಮತ್ತು ಫ್ರಾನ್ಸನ ಪ್ರಗತಿಪರ ಬರಹಗಾರರ ಚಿಂತನೆಗಳು ಪ್ರಗತಿಶೀಲ ಚಳುವಳಿಯ ಸಿದ್ಧಾಂತಗಳ ರಚನೆಯಲ್ಲಿ ಮುಖ್ಯವಾದ ಪಾತ್ರವನ್ನುವಹಿಸಿದವು. ಯೂರೋಪಿನಲ್ಲಿ 'ರೋಮ್ಯಾಂಟಿಕ್' ಚಳುವಳಿಗೆ ಪ್ರತಿಕ್ರಿಯೆಯಾಗಿ ಮೂಡಿಬಂದಿದ್ದ ವಾಸ್ತವವಾದ ಕನ್ನಡ ಪ್ರಗತಿಶೀಲ ಚಳುವಳಿ ಹಾಗೂ ಲೇಖಕರ ಮೇಲೆ ಗಂಭೀರ ಪರಿಣಾಮ ಬೀರಿತು"[6] ಇದರ ಜೊತೆಗೆ ಕಾರ್ಲಮಾರ್ಕ್ಸ್ ಸಮತಾದವು ಸಹ ಮುಖ್ಯ ಪ್ರೇರಣೆಯನ್ನು ನೀಡಿತು. ಹೀಗೆ ಪ್ರಗತಿಶೀಲ ಸಾಹಿತ್ಯವು ಬಾಹ್ಯ ಒತ್ತಡಕ್ಕೆ ಒಳಗಾಗಿ ಪ್ರಚಲಿತದಲ್ಲಿದ್ದ ನವೋದಯದ ಮಿತಿಗಳನ್ನು ಗುರುತಿಸಿ, ಅದಕ್ಕೆ ಪ್ರತಿಯಾಗಿ ಪ್ರಗತಿಶೀಲ ಸಾಹಿತ್ಯವು ಬಾಹ್ಯ ಒತ್ತಡಕ್ಕೆ ಒಳಗಾಗಿ ಪ್ರಚಲಿತದಲ್ಲಿದ್ದ ನವೋದಯದ ಮಿತಿಗಳನ್ನು ಗುರುತಿಸಿ, ಅದಕ್ಕೆ ಪ್ರತಿಯಾಗಿ ಪ್ರಗತಿಶೀಲ ಸಾಹಿತ್ಯ ಕನ್ನಡದಲ್ಲಿ ಹುಟ್ಟಿಕೊಂಡಿತು. ಕಣ್ಣಿಗೆ ಕಾಣದ ಬದುಕಿನ ಸೌಂದರ್ಯವನ್ನು ಅಲ್ಲಗಳೆದು, ಮನುಷ್ಯ ಬದುಕಿನ ನಿಜವಾದ ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸುವ ಧ್ಯೇಯದೊಂದಿಗೆ ಪ್ರಗತಿಶೀಲ ಸಾಹಿತ್ಯ ಕನ್ನಡದಲ್ಲಿ ವಿಜೃಂಭಿಸಿತು. ಹಾಗೆಯೇ ವಾಸ್ತವವಾದದ ನೆಲೆಗಟ್ಟಿನಲ್ಲಿ ತನ್ನ ತಾತ್ವಿಕ ಅರ್ಥವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಿತು. ಅನಕೃ, ತ.ರಾ.ಸು. ನಿರಂಜನ ಹಾಗೂ ಬಸವರಾಜ

ಕಟ್ಟೀಮನಿಯವರಂಥ ಕಾದಂಬರಿಕಾರರು ಈ ಕಾಲಘಟ್ಟದಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿದರು. ವಿಶೇಷವೆಂದರೆ ಇವರೆಲ್ಲ ಕಾದಂಬರಿ ಪ್ರಕಾರದ ರಚನೆಯ ಮುಖಾಂತರವೇ ಹೆಸರು ಮಾಡಿದರು. ಇವರು ಬೇರೆ ಬೇರೆ ಸಾಹಿತ್ಯ ಪ್ರಕಾರಗಳಲ್ಲಿ ಆದ ಕೊಡುಗೆ ನೀಡಿದ್ದರೂ ಇವರಿಗೆ ವಿಶೇಷವಾಗಿ ಹೆಸರು ತಂದುಕೊಟ್ಟ ಮಾಧ್ಯಮವೆಂದರೆ 'ಕಾದಂಬರಿ' ಎಂದೇ ಹೇಳಬೇಕು. ಕಾದಂಬರಿ ರಚನೆಯಲ್ಲಿ ಅವರು ಅನುಸರಿಸಿದ್ದು ವಾಸ್ತವವಾದವನ್ನಾದರೂ ಅದರಲ್ಲಿ ಅವರವರ ವೈಯುಕ್ತಿಕ ಸಂಸ್ಕಾರ ಮತ್ತು ಮನೋಧರ್ಮಗಳಿಗನುಗುಣವಾಗಿ ವಸ್ತು ಮತ್ತು ಶೈಲಿಯಲ್ಲಿ ಹಲವು ಬಗೆಯ ಮಾರ್ಪಾಡುಗಳು ಕಾಣಿಸಿಕೊಂಡಿದ್ದು ಮಾತ್ರ ಗಮನಾರ್ಹ ಸಂಗತಿಯಾಗಿದೆ.

'ಪ್ರಗತಿಶೀಲ' ಪಂಥದಲ್ಲಿ ತ.ರಾ.ಸುಬ್ಬರಾಯರಿಗೆ ವಿಶೇಷ ಸ್ಥಾನಮಾನವಿದೆ. ಈ ಪಂಥದ ಹರಿಕಾರ ಅ.ನ.ಕೃಷ್ಣರಾಯರು. ಅದೇ ಜಾಡಿನಲ್ಲಿ ಬೆಳೆದು ಬಂದ ತ.ರಾ.ಸು. ಅವರು ಮೊದಮೊದಲು ಅ.ನ.ಕೃ. ಅವರ ಕಾದಂಬರಿಗಳಿಂದ ಪ್ರಭಾವಿತರಾಗಿ ಸಾಹಿತ್ಯ ರಚನೆಗೆ ತಮ್ಮನ್ನು ತೊಡಗಿಸಿಕೊಳ್ಳುವುದರ ಜೊತೆಗೆ ಪ್ರಗತಿಶೀಲ ಸಾಹಿತ್ಯದ ಪ್ರವರ್ತಕರಲ್ಲಿ ಒಬ್ಬರೆನಿಸಿದರು. ಆದರೆ ಪ್ರಗತಿಶೀಲ ಚಳುವಳಿಯ ಹಲವು ಗೊಂದಲಗಳಿಂದಾಗಿ ನಂತರದ ದಿನಗಳಲ್ಲಿ ತ.ರಾ.ಸು. ಅವರು ಅದರಿಂದ ವಿಮುಖರಾಗಿ, ಸಾಹಿತ್ಯ ಕೃಷಿಯಲ್ಲಿ ತಮ್ಮದೇ ಆದ ದಾರಿಯನ್ನು ಕಂಡುಕೊಂಡರು. "ಅ.ನ.ಕೃ. ನಿರಂಜನ ಮೊದಲಾದ ಲೇಖಕರ ಜೊತೆ ತ.ರಾ.ಸು. ಅವರು ಪ್ರಗತಿಶೀಲ ಚಳುವಳಿಯಲ್ಲಿ ಪಾಲ್ಗೊಂಡರು. ಅವರ 'ಮಸಣದ ಹೂವು' ಕಾದಂಬರಿ ಈ ಚಳುವಳಿಯ ಫಲ. ಚಳುವಳಿ ತಣ್ಣಗಾಗುತ್ತಿದ್ದಂತೆ ತ.ರಾ.ಸು. ಸಾಹಿತ್ಯ ಕೃಷಿಗೆ ತಮ್ಮದೇ ಆದ ದಾರಿಯನ್ನು ಕಂಡುಕೊಂಡಕೊಳ್ಳಲು ಪ್ರಯತ್ನಿಸಿದರು. ಐತಿಹಾಸಿಕ ಕಾದಂಬರಿಗಳನ್ನು ಪ್ರಾರಂಭಿಸಿದ್ದು ಆಗಲೆ"[೫] ಎಂಬ ಮಾತುಗಳು ಗಮನಾರ್ಹವಾಗಿವೆ. ಪ್ರಗತಿಶೀಲ ಚಳುವಳಿಯ ಕಾವು ಇಳಿಯುತ್ತಿದ್ದಂತೆ ತ.ರಾ.ಸು. ಅವರು ಆ ಮನೋಧರ್ಮದಿಂದ ದೂರ ಸರಿಯಲು ಪ್ರಯತ್ನ ಮಾಡಿದ್ದಂತೂ ಸ್ಪಷ್ಟವಾಗಿ ಗೋಚರಿಸುತ್ತದೆ.

ಅದೇನಿದ್ದರೂ ಪ್ರಗತಿಶೀಲ ಪಂಥದ ಗದ್ಯ ಕೊಡುಗೆಯನ್ನು ಮರೆಯುವಂತಿಲ್ಲ. ಈ ಕಾಲದ ಲೇಖಕರು ತಮ್ಮೆಲ್ಲ ಇತಿಮಿತಿಗಳ ನಡುವೆಯೂ ಕೆಲವೊಂದು ಮಹತ್ತರವಾದ ಕೊಡುಗೆಯನ್ನು ನೀಡಿದ್ದಾರೆ. ಈ ಪಂಥವು ಸಾಂಪ್ರದಾಯಿಕತೆಯಿಂದ ತಪ್ಪಿಸಿಕೊಂಡು ಕನ್ನಡದಲ್ಲಿ ತನ್ನದೇ ಆದ ಅಸ್ತಿತ್ವವನ್ನು ಕಂಡುಕೊಂಡಿತು. ಭಾಷಾ ಬಳಕೆಯಲ್ಲಿ ಹೊಸ ಹೊಸ ಪ್ರಯೋಗ ಸಾಧ್ಯತೆಗಳನ್ನು ಹುಟ್ಟುಹಾಕಿತು. ಇದಕ್ಕೆ ವಿಶೇಷವಾಗಿ ಸಣ್ಣಕತೆ ಹಾಗೂ ಕಾದಂಬರಿಗಳು ಈ ಕಾಲದ ಲೇಖಕರಿಗೆ ಹೆಚ್ಚು ಪ್ರೇರಣೆಯನ್ನು ಒದಗಿಸಿದವು. ಈ ಅವಧಿಯಲ್ಲಿ ವಿವಿಧ ಲೇಖಕರಿಂದ ರಚಿಸಲ್ಪಟ್ಟಂತಹ ಕಾದಂಬರಿ ಸಣ್ಣಕತೆಗಳು ಇದಕ್ಕೆ

ನಿದರ್ಶನವಾಗಬಲ್ಲವು. ಸಾಮಾಜಿಕ ಕಳಕಳಿಯಿಂದ ಕೂಡಿದ ವಸ್ತು, ಸನ್ನಿವೇಶ, ವರ್ಣನೆ ಹಾಗೂ ನಿರೂಪಣೆಗೆ ಈ ಹಂತದಲ್ಲಿ ಹೆಚ್ಚು ಇಂಬು ದೊರೆಯುವಂತಾಯಿತು. ಆದರೆ ಅತೀವೇಗವಾಗಿ ಬೆಳೆದ ಈ ಸಾಹಿತ್ಯ ಅಷ್ಟೇ ವೇಗದಲ್ಲಿ ಕ್ಷೀಣಿಸುವಂತಾದದ್ದೊಂದು ವಿಪರ್ಯಾಸವೇ ಸರಿ.

ತ.ರಾ.ಸು. ಅವರ ಕಾದಂಬರಿ ಕ್ಷೇತ್ರ ಬಹು ವಿಸ್ತೃತವಾದುದು. ವಸ್ತು ವೈವಿಧ್ಯತೆಯಿಂದ ಕೂಡಿದ ಸುಮಾರು ೭೦ಕ್ಕೂ ಹೆಚ್ಚು ಕಾದಂಬರಿಗಳನ್ನು ಅವರು ರಚಿಸಿದ್ದಾರೆ. ಜೊತೆಗೆ ನಾಲ್ಕು ಕಥಾಸಂಕಲನಗಳನ್ನು ಪ್ರಕಟಿಸಿ ಕನ್ನಡ ಸಾರಸ್ವತ ಲೋಕಕ್ಕೆ ತಮ್ಮದೇ ಆದ ಕೊಡುಗೆ ಕೊಟ್ಟಿದ್ದಾರೆ. ಆ ಕಾರಣದಿಂದಾಗಿ ಅವರ ಹೆಸರು ಕನ್ನಡ ಸಾರಸ್ವತ ಲೋಕದಲ್ಲಿ ಚಿರಸ್ಥಾಯಿಯಾಗಿದೆ. "ಹೊಸಗನ್ನಡದ ಗದ್ಯಶಿಲ್ಪಿಗಳಲ್ಲಿ ತ.ರಾ.ಸು. ಒಬ್ಬರು. ಇದು ತ.ರಾ.ಸು. ಅವರದೇ ಬರವಣಿಗೆ ಎಂದು ಖಚಿತವಾಗಿ ಗುರುತಿಸಲು ಸಾಧ್ಯವಾಗುವಷ್ಟರ ಮಟ್ಟಿಗೆ ಅವರ ವಿಶಿಷ್ಟತೆಯಿದೆ. ಕಥೆಯ ಕುತೂಹಲ, ಪಾತ್ರ ಸೃಷ್ಟಿಯಲ್ಲಿನ ಖಚಿತತೆ, ಸನ್ನಿವೇಶಗಳ ಜ್ವಲಂತತೆಗಳನ್ನು ಅವರು ಅದ್ಭುತವಾಗಿ ನಿರ್ವಹಿಸಬಲ್ಲರು. ಬದುಕಿನ ಹೃದಯ ಸ್ಪಂದನವನ್ನು ಅವರು ಯಶಸ್ವಿಯಾಗಿ ಕೇಳಿಸಬಲ್ಲರು. ಹೊರ ಜೀವನದ ಸಮಸ್ಯೆಗಳನ್ನು ಬಲ್ಲ ತ.ರಾ.ಸು. ಮನಸ್ಸಿನ ಒಳ ಪದರಗಳನ್ನು ಸಮರ್ಥವಾಗಿ ಬಿಚ್ಚಿ ತೋರಿಸಬಲ್ಲರು"[೬] ಎಂದು ಹಾ.ಮಾ.ನಾಯಕ ಅವರು ತ.ರಾ.ಸು. ಅವರ ಸಾಹಿತ್ಯದ ಸಾತ್ವಿಕ ಸ್ವರೂಪವನ್ನು ಸರಿಯಾಗಿಯೇ ಗುರುತಿಸಿದ್ದಾರೆ.,

ಕಾದಂಬರಿ, ಸಣ್ಣಕತೆ, ನಾಟಕ, ಅನುವಾದ, ಜೀವನ ಚರಿತ್ರೆ ಹೀಗೆ ಹೊಸಗನ್ನಡದ ಹತ್ತುಹಲವು ಸಾಹಿತ್ಯ ಪ್ರಕಾರಗಳಲ್ಲಿ ತ.ರಾ.ಸು. ಅವರು ಸಾಹಿತ್ಯ ಕೃಷಿ ಮಾಡಿದ್ದಾರೆ. ಆದರೆ ಅವರಿಗೆ ವಿಶೇಷವಾಗಿ ಒಗ್ಗಿದ್ದು ಕಾದಂಬರಿ ಮಾಧ್ಯಮ. ಅವರ ವಿಶೇಷ ಸಾಧನೆಸಿದ್ಧಿಯೂ ಇದರಲ್ಲಿಯೇ ಎಂದರೆ ತಪ್ಪಾಗಲಿಕ್ಕಿಲ್ಲ. ಅವರು ಬರೆದ ಸಾಮಾಜಿಕ, ಐತಿಹಾಸಿಕ ಹಾಗೂ ಪೌರಾಣಿಕ ಕಾದಂಬರಿಗಳಲ್ಲಿ ಐತಿಹಾಸಿಕ ಕಾದಂಬರಿಗಳಿಗೆ ನಾಡು–ನುಡಿಯ ದೃಷ್ಟಿಯಿಂದ ವಿಶೇಷ ಸ್ಥಾನಮಾನವಿರುವುದು ಗೋಚರಿಸುತ್ತದೆ. ಈ ನಿಟ್ಟಿನಲ್ಲಿ ಅವರ ಐತಿಹಾಸಿಕ ಕಾದಂಬರಿಗಳನ್ನು ಆಕರವಾರಿಸಿಕೊಂಡು, ಅವುಗಳ ವಸ್ತು, ವಿನ್ಯಾಸ ಹಾಗೂ ಆಶಯದ ಮೇಲೆ ಬೆಳಕು ಚೆಲ್ಲುವ ಪ್ರಾಮಾಣಿಕ ಪ್ರಯತ್ನವೇ ಈ ಸಂಶೋಧನ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ. ಈ ಕುರಿತು ವಿಶೇಷವಾಗಿ ಸಮಗ್ರ ಅಧ್ಯಯನಗಳು ನಡೆದಿಲ್ಲ. ಆ ಕೊರತೆಯನ್ನು ಮನಗಂಡು ಈ ಸಂಶೋಧನ ಅಧ್ಯಯನ ಕೈಗೊಳ್ಳಲಾಗಿದೆ.

ಈಗಾಗಲೇ ಉಲ್ಲೇಖಿಸಿದಂತೆ ತ.ರಾ.ಸು. ಅವರ ಬರೆಹ ಬಹುಮುಖದ್ದಾಗಿದೆ. ಹಾಗಾಗಿ ಅದು ಬಹುಮುಖದ ಅಧ್ಯಯನವನ್ನು ಬಯಸುವಂತಹದು. ಈ ದೃಷ್ಟಿಕೋನದ ಹಿನ್ನೆಲೆಯಲ್ಲಿ ಇಲ್ಲಿ ಅವರ ಐತಿಹಾಸಿಕ ಕಾದಂಬರಿಗಳನ್ನು ಮಾತ್ರ ಅಧ್ಯಯನದ ತೆಕ್ಕೆಗೆ ಒಳಪಡಿಸಲಾಗಿದೆ. ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳಾದ ನೃಪತುಂಗ,

ಸಿಡಿಲಮೊಗ್ಗು, ಕೀರ್ತಿನಾರಾಯಣ, ಶಿಲ್ಪಶ್ರೀ, ಅಗ್ನಿರಥ-ಮುಕ್ತಿಪಥ, ಕಸ್ತೂರಿ ಕಂಕಣ, ಕಂಬನಿಯ ಕುಯಿಲು, ರಾಜ್ಯದಾಹ, ರಕ್ತರಾತ್ರಿ, ಹೊಸಹಗಲು, ವಿಜಯೋತ್ಸವ, ದುರ್ಗಾಸ್ತಮಾನ ಈ ಮುಂತಾದ ಕಾದಂಬರಿಗಳ ವಸ್ತು, ವಿನ್ಯಾಸಗಳ ಕಡೆಗೆ ವಿಶೇಷ ಗಮನ ಹರಿಸುವುದರ ಮೂಲಕ ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳ ಚಾರಿತ್ರಿಕ ಮಹತ್ವವನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

**ಅಧ್ಯಯನದ ಸ್ವರೂಪ:**

ಈ ಸಂಶೋಧನ ಅಧ್ಯಯನವು ಒಟ್ಟು ಏಳು ಅಧ್ಯಾಯಗಳಲ್ಲಿ ತನ್ನ ಹರವನ್ನು ಪಡೆದುಕೊಂಡಿದೆ. ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ ಮತ್ತು ಸ್ವರೂಪವನ್ನು ಒಳಗೊಂಡಿದೆ. ಕಾದಂಬರಿಯ ಹಿನ್ನೆಲೆ, ಪ್ರಗತಿಶೀಲತೆಯ ಪ್ರೇರಣೆ ಹಾಗೂ ತ.ರಾ.ಸು. ಅವರ ಧೋರಣೆ ಇತ್ಯಾದಿ ಅಂಶಗಳು ಇಲ್ಲಿ ಕಾಣಸಿಗುತ್ತವೆ. ತ.ರಾ.ಸು. ಸಾಹಿತ್ಯದ ತಾತ್ವಿಕ ವಿಚಾರಗಳ ಅಡಿಯಲ್ಲಿ ಎರಡನೆಯ ಅಧ್ಯಾಯವು ತ.ರಾ.ಸು. ಅವರ ಸಾಹಿತ್ಯ ಕುರಿತು ಇದುವರೆಗೂ ಬಂದಿರುವ ಲೇಖನ ಕೃತಿಗಳು ತಾತ್ತ್ವಿಕ ಸಮೀಕ್ಷೆ ದೃಷ್ಟಿಯಿಂದ ಪ್ರಮುಖವಾಗುತ್ತವೆ. ಒಟ್ಟಾರೆ ಆ ಲೇಖನ ಕೃತಿಗಳ ವಿಶೇಷ ಸಂಗತಿಗಳ ಕುರಿತು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಚಾರಿತ್ರಿಕ ಕಾದಂಬರಿಗಳ ಹಿನ್ನೆಲೆಯಲ್ಲಿ ಸಾಹಿತ್ಯ ಮತ್ತು ಚರಿತ್ರೆಯ ಅಂತ:ಸ್ಸಂಬಂಧ ಕುರಿತಾದ ಚರ್ಚೆಯಿದೆ. ಕನ್ನಡ ಸಾಹಿತ್ಯದ ವಿಷಯವಸ್ತುವಿನ ವಿಚಾರವಾಗಿ ಇದು ಗಮನ ಸೆಳೆಯುತ್ತದೆ. ಅನುಸಂಧಾನ ಪ್ರಕ್ರಿಯೆಯ ಮೂಲಕ ನಡೆಯುವಂತಹದ್ದಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ತ.ರಾ.ಸು. ಅವರ ಚಾರಿತ್ರಿಕ ಕಾದಂಬರಿಗಳ ವಿಷಯವಸ್ತುವಿನ ದೃಷ್ಟಿಯಿಂದ ಗಮನಾರ್ಹವಾಗುತ್ತದೆ. ಈ ಕಾದಂಬರಿಗಳ ವಸ್ತುವೈವಿಧ್ಯತೆಯೊಂದಿಗೆ ಅದರ ಮಹತ್ವ ತಿಳಿಯುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಇದು ಆ ಕಾದಂಬರಿಗಳ ರಚನಾ ಅನುಕ್ರಮದೊಂದಿಗೆ ನಡೆಯುವ ಕಾರ್ಯವಾಗಿದೆ.

ಐದನೆಯ ಅಧ್ಯಾಯದಲ್ಲಿ 'ತ.ರಾ.ಸು. ಕಾದಂಬರಿಗಳಲ್ಲಿ ಚರಿತ್ರೆಯ ವಿನ್ಯಾಸಗಳು' ಎಂಬಲ್ಲಿ ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳ ಕುರಿತಾದ ವಿಸ್ತೃತವಾದ ಚರ್ಚೆಯಿದೆ. ಆ ಕಾದಂಬರಿಗಳಲ್ಲಿನ ಮುಖ್ಯ ಸಂಗತಿಗಳು ಇಲ್ಲಿ ಗಮನಸೆಳೆಯುತ್ತವೆ. ಆಡಳಿತ ವ್ಯವಸ್ಥೆಯ ಪ್ರಮುಖ ಅಂಶಗಳಾದ ಪ್ರಭುತ್ವ ಮತ್ತು ಯುದ್ಧ ಕುರಿತಾದ ವಿವರಣೆ ಇಲ್ಲಿ ಕಾಣಸಿಗುತ್ತದೆ. ಜೊತೆಗೆ ಧಾರ್ಮಿಕ ಹಾಗೂ ಸಾಮಾಜಿಕ ವ್ಯವಸ್ಥೆಗಳಲ್ಲಿ ಪುರುಷ ಹಾಗೂ ಮಹಿಳೆಯರಿಗಿದ್ದಂತಹ ಸ್ಥಾನಮಾನಗಳ ವಿವೇಚನೆಯನ್ನು ಕಾಣುತ್ತೇವೆ.

ಆರನೆಯ ಅಧ್ಯಾಯದಲ್ಲಿ ತ.ರಾ.ಸು. ಅವರ ಚಾರಿತ್ರಿಕ ಕಾದಂಬರಿಗಳಲ್ಲಿ ಬಳಕೆಯಾಗಿರುವ ಕಾದಂಬರಿಯ ಶೈಲಿ ಮತ್ತು ಭಾಷೆಗಳ ಕಡೆಗೆ ದೃಷ್ಟಿಯನ್ನು ಹರಿಸಲಾಗಿದೆ.

ತ.ರಾ.ಸು. ಕಾದಂಬರಿ ಸಿದ್ಧಿಯಲ್ಲಿ ಇವುಗಳ ಮಹತ್ವ ಎಂಥದೆಂಬುದನ್ನು ಗುರುತಿಸಲು ಯತ್ನಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಇಡೀ ಸಂಶೋಧನ ಅಧ್ಯಯನದ ಆಗು–ಹೋಗುಗಳ ಹಿನ್ನೆಲೆಯಲ್ಲಿ ಒಟ್ಟಂದದ ಅಭಿಪ್ರಾಯವನ್ನು ವ್ಯಕ್ತಪಡಿಸಲಾಗಿದೆ. ಜೊತೆಗೆ 'ಅಧ್ಯಯನದ ಫಲಿತಗಳು' ಎಂಬ ತಲೆ ಬರಹದಡಿಯಲ್ಲಿ ಈ ಸಂಶೋಧನ ಸಂಪ್ರಬಂಧದ ಫಲಿತ ಅಂಶಗಳ ಮೇಲೆ ಬೆಳಕು ಚೆಲ್ಲಲಾಗಿದೆ. ಕೊನೆಯಲ್ಲಿ ಅಧ್ಯಯನಕ್ಕೆ ಬಳಸಲಾದ ಗ್ರಂಥ ಸೂಚಿಯನ್ನು ಕೊಡಲಾಗಿದೆ.

**ಕೊನೆಟಿಪ್ಪಣಿಗಳು**


೧. ಆಮೂರ ಜಿ.ಎಸ್. : ಕಥನ ಸಾಹಿತ್ಯ : ಕಾದಂಬರಿ : ೧೯೯೪, ಪುಟ ೧೯

೨. ಆಮೂರ ಜಿ.ಎಸ್. : ಕಥನ ಸಾಹಿತ್ಯ : ಕಾದಂಬರಿ : ೧೯೯೪, ಪುಟ ೫೭

೩. ಕೀರ್ತಿನಾಥ ಕುರ್ತಕೋಟಿ : ಯುಗಧರ್ಮ ಹಾಗೂ ಸಾಹಿತ್ಯ ದರ್ಶನ : ೨೦೦೫, ಪುಟ: ೧೮೯

೪. ಎಂ.ಎನ್. ಮಹೇಶ : ತ.ರಾ.ಸು ಸಾಹಿತ್ಯ : ಒಂದು ಅಧ್ಯಯನ, ೨೦೦೯, ಪುಟ : ೪೧

೫. ಶ್ರೀಶೈಲ ಆರಾಧ್ಯ (ಸಂ.): ಗಿರಿಮಲ್ಲಿಗೆ : ೧೯೮೫, ಪುಟ : ೩೫೦

೬. ಶಾ.ಮಂ. ಕೃಷ್ಣರಾಯ (ಸಂ) : ತ.ರಾ.ಸು. ಬದುಕು-ಬರೆಹ, ಮುನ್ನುಡಿ, ೨೦೦೮.




# ಅಧ್ಯಾಯ : ಎರಡು

# ತ.ರಾ.ಸು. ಸಾಹಿತ್ಯ: ಇದುವರೆಗಿನ ಅಧ್ಯಯನಗಳ ತಾತ್ವಿಕ ಸಮೀಕ್ಷೆ

# ಅಧ್ಯಾಯ : ಎರಡು

## ತ.ರಾ.ಸು. ಸಾಹಿತ್ಯ: ಇದುವರೆಗಿನ ಅಧ್ಯಯನಗಳ ತಾತ್ವಿಕ ಸಮೀಕ್ಷೆ

ತ.ರಾ.ಸುಬ್ಬರಾಯರ ಬದುಕು ಬರೆಹ ಬಹುವಿಸ್ತೃತವಾದುದು. ಅದು ಬಹುಮುಖದ ಓರಿಮೆಯಿಂದ ಕೂಡಿದ್ದಾಗಿದೆ. ತ.ರಾ.ಸು. ಅವರು ಬರೆಯಲು ಪ್ರಾರಂಭಿಸಿದ್ದು ನವೋದಯ ಕಾಲದಲ್ಲಾದರೂ ಅವರು ತಮ್ಮನ್ನು ಗುರುತಿಸಿಕೊಂಡದ್ದು ಪ್ರಗತಿಶೀಲ ಪಂಥದಲ್ಲಿಯೇ. ಇದಕ್ಕೆ ಕಾರಣ, ಅವರ ಮೇಲಾದ ಕಾರ್ಲ್‌ಮಾರ್ಕ್ಸ್‌ವಾದದ ಪ್ರಭಾವವೆಂದರೆ ತಪ್ಪಾಗಲಿಕ್ಕಿಲ್ಲ. ಇಷ್ಟಾದಾಗ್ಯೂ ಆಧುನಿಕ ಕನ್ನಡ ಸಾಹಿತ್ಯದ ಎಲ್ಲ ಕಾಲಘಟ್ಟಗಳ ಪ್ರಭಾವಕ್ಕೂ ತ.ರಾ.ಸು. ಅವರು ಒಳಗಾಗಿದ್ದು ಸಹಜವಾಗಿ ಗೋಚರಿಸುವ ಸಂಗತಿಯಾಗಿದೆ. ಆದರೆ ಚಾರಿತ್ರಿಕವಾಗಿ ಅವರನ್ನು 'ಪ್ರಗತಿಶೀಲ' ಸಾಹಿತಿಗಳೆಂದೇ ಕರೆಯಲಾಗುತ್ತದೆ. "ತ.ರಾ.ಸು. ಪ್ರಗತಿಶೀಲ ಚಳುವಳಿಯಲ್ಲಿ ಹಾಗೂ ಸಾಹಿತ್ಯ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. 'ಸಾಹಿತ್ಯ ಸೃಷ್ಟಿಯಲ್ಲಿ ಗುರುವನ್ನೂ ಮೀರಿಸುವ ಶಕ್ತಿ, ಪ್ರಬುದ್ಧತೆ ತ.ರಾ.ಸು. ಅವರಿಗಿತ್ತು. ಆ ಹೃದಯ ವೈಶಾಲ್ಯ, ಸ್ನೇಹ ಪರತೆ ತ.ರಾ.ಸು. ಅವರಲ್ಲಿ ಕಾಣಬಹುದು. ಅವರ ಬರವಣಿಗೆಯಲ್ಲಿ ಗಟ್ಟಿತನವಿದೆ, ಮೊನಚಿದೆ, ಶ್ರುತಿಯಿದೆ"[೧] ಎಂಬ ಮಾತಂತೂ ಸತ್ಯವಾಗಿದೆ. ಯಾಕೆಂದರೆ, ಅವರು ಬದುಕಿನಲ್ಲಿ ಬಡತನದ ನೋವನ್ನು ಅನುಭವಿಸಿದರೂ ಜ್ಞಾನದಲ್ಲಿ ಶ್ರೀಮಂತಿಕೆಯನ್ನು ಪಡೆದವರಾಗಿದ್ದರೆಂಬುದು ಗಮನಾರ್ಹ. ಇದಕ್ಕೆ ಅವರ ಸಾಹಿತ್ಯ ಸತ್ತ್ವವೇ ಜೀವಂತ ಸಾಕ್ಷಿಯಾಗಿ ನಿಲ್ಲುತ್ತದೆ.

ಆಧುನಿಕ ಕನ್ನಡ ಸಾಹಿತ್ಯದ ಎಲ್ಲ ವಿಧದ ಪ್ರಕಾರಗಳಲ್ಲೂ ತ.ರಾ.ಸು. ಅವರು ಸಾಹಿತ್ಯಕ ಕೃಷಿಯನ್ನು ಮಾಡಿದ್ದರೂ ಅವರ ಹೆಸರು ಚಿರಸ್ಥಾಯಿಯಾಗಿ ನಿಂತಿರುವುದು ಕಾದಂಬರಿ ಸಾಹಿತ್ಯದಲ್ಲಿಯೇ ಎನ್ನುವುದು ನಿರ್ವಿವಾದ. ಅವರು ಕೇವಲ ಸಾಮಾಜಿಕ ಕಾದಂಬರಿಗಳನ್ನು ಬರೆಯದೇ ಐತಿಹಾಸಿಕ ಕಾದಂಬರಿಗಳನ್ನು ರಚಿಸುವುದರ ಮೂಲಕ ಕನ್ನಡ ಸಾಹಿತ್ಯದಲ್ಲಿ ವಿಭಿನ್ನ ಹಾಗೂ ವಿಶಿಷ್ಟ ರೀತಿಯ ಬರೆಹಗಾರರೆಂದೇ ಗುರುತಿಸಲ್ಪಡುತ್ತಾರೆ. "೧೯೪೪ರಲ್ಲಿ 'ಮನೆಗೆ ಬಂದ ಮಹಾಲಕ್ಷ್ಮೀ' ಎಂಬ ಸಾಮಾಜಿಕ ಕಾದಂಬರಿಯನ್ನು ರಚಿಸುವುದರೊಂದಿಗೆ ಅವರು ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದರು. ಈ ಕೃತಿಗೆ ಮಾಸ್ತಿಯವರು ವಿಮರ್ಶೆ ಬರೆಯುತ್ತ ಕೃತಿ ಚೌರ್ಯದ ಅಪಾದನೆ ಹೊರಿಸಿದರು. ಅ.ನ.ಕೃ. 'ಕಿರಿಯ ಲೇಖಕರ ಮೇಲೆ ಹಿರಿಯರ ಕೊಡಲಿ' ಎಂಬ ಪ್ರತಿಕ್ರಿಯೆಯ ಲೇಖನ ಬರೆಯುವುದರ ಮೂಲಕ ತ.ರಾ.ಸು. ಅವರ ನೆರವಿಗೆ ಬಂದರು. ಹೀಗೆ ೧೯೪೪ ರಿಂದ ಬರವಣಿಗೆಯನ್ನು ಪ್ರಾರಂಭಿಸಿದ ಸುಬ್ಬರಾಯರು ೧೯೮೪ರವರೆಗೆ ಮುಂದುವರೆಸುತ್ತಾ ನಲವತ್ತು ವರ್ಷಗಳ ಸುಧೀರ್ಘ ಅವಧಿಯಲ್ಲಿ ೬೩ ಕೃತಿಗಳನ್ನು ಬರೆದಿದ್ದಾರೆ"[೨] ಎಂಬ ಸಂಗತಿ ಗಮನಾರ್ಹ.

ಆರಂಭದಲ್ಲಿ ಅ.ನ.ಕೃ. ಅವರ ಪ್ರಭಾವ ವಲಯದಲ್ಲಿ ಬೆಳೆದ ತ.ರಾ.ಸು. ಅವರು ಮುಂದೆ ತಮ್ಮದೇ ಆದ ಸ್ವತಂತ್ರ ಬರವಣಿಗೆಯ ಶೈಲಿಯನ್ನು ಅಳವಡಿಸಿಕೊಂಡು ಸಾಹಿತ್ಯ ಕೃಷಿ ನಡೆಸಿದರು.

ತ.ರಾ.ಸು. ಸಾಹಿತ್ಯ ಕುರಿತು ಈಗಾಗಲೇ ಸಾಕಷ್ಟು ವಿಮರ್ಶೆ ಬಂದಿದೆ. ಅವರು ಸಾಹಿತ್ಯ ಸತ್ವಕ್ಕಿಂತ ಕೃತಿಯ ಸಂಖ್ಯೆಗೆ ಹೆಚ್ಚು ಮಹತ್ವ ಕೊಟ್ಟರು ಎಂಬ ಆಪಾದನೆಯೂ ಕೇಳಿಬಂದಿದೆ. ಆದರೆ ಅವರ ಇಡೀಯಾದ ಸಾಹಿತ್ಯವನ್ನು ಗಮನಿಸಿದಾಗ ಈ ಅಪಾದನೆಗೆ ಅರ್ಥವಿಲ್ಲವೆಂದೇ ಹೇಳಬೇಕು. ಯಾಕೆಂದರೆ, ಅವರು ಬರವಣಿಗೆಯನ್ನೇ ಬದುಕನ್ನಾಗಿಸಿಕೊಂಡವರು. ಅವರು ಬರದದ್ದೆಲ್ಲ ಚಿನ್ನವಲ್ಲದೇ ಇರಬಹುದು. ಕೆಲವಾದರೂ ಉತ್ತಮ ಕಲಾಕೃತಿಗಳನ್ನು ಅವರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ನೀಡಿದ್ದಾರೆಂಬುದನ್ನು ಯಾರಿಂದಲೂ ಅಲ್ಲಗಳೆಯಲಿಕ್ಕೆ ಸಾಧ್ಯವಿಲ್ಲ.

ತ.ರಾ.ಸು. ಸಾಹಿತ್ಯದ ಹಿನ್ನೆಲೆಯಲ್ಲಿ ಈಗಾಗಲೇ ಕೆಲ ಸಂಶೋಧನಾತ್ಮಕ ಅಧ್ಯಯನಗಳು ನಡೆದಿವೆ. ಜೊತೆಗೆ ಅವರ ಸಾಹಿತ್ಯ ಕುರಿತಾದ ಬರಹವನ್ನು ಒಂದೆಡೆ ಸಂಗ್ರಹಿಸುವ ಕಾರ್ಯವು ನಡೆದಿದೆ. ಈ ಹಿನ್ನೆಲೆಯಲ್ಲಿ ಕೆಲ ಸಂಪಾದನಾ ಕೃತಿಗಳು ಪ್ರಕಟಗೊಂಡಿವೆ. ಆದ್ದರಿಂದ ಈ ಸಂಶೋಧನೆ ಅಧ್ಯಯನಕ್ಕೆ ಪೂರ್ವ ಸಮೀಕ್ಷೆಯೆಂಬಂತೆ ಈಗಾಗಲೇ ಪ್ರಕಟಗೊಂಡ ತ.ರಾ.ಸು. ಬರೆಹ ಕುರಿತ ಕೆಲ ಮಹತ್ವಯುತ ಕೃತಿಗಳ ತಾತ್ವಿಕ ಸಮೀಕ್ಷೆಯನ್ನು ಕೈಗೊಳ್ಳುವುದು ಈ ಸಂದರ್ಭದಲ್ಲಿ ಸೂಕ್ತವಾದ ಕ್ರಮವೆಂದು ಮನಗಾಣಲಾಗಿದೆ.

ತ.ರಾ.ಸು. ಅವರ ಬದುಕು ಮತ್ತು ಸಾಹಿತ್ಯ ಕುರಿತಂತೆ ಈಗಾಗಲೇ ಮೂರು ಮಹಾಪ್ರಬಂಧಗಳು ರಚನೆಗೊಂಡಿವೆ. ಡಾ. ಎಂ.ಎಸ್. ಪಾಟೀಲರ 'ತ.ರಾ.ಸು. ಅವರ ಕಾದಂಬರಿಗಳು–ಒಂದು ಅಧ್ಯಯನ', ಡಾ. ಹು. ರಾ. ಕೋಮಲವಲ್ಲಿ ಅವರು ರಚಿಸಿದ ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳು–ಒಂದು ಅಧ್ಯಯನ' ಡಾ. ಎಂ.ಎನ್.ಮಹೇಶ, ತ.ರಾ.ಸು. ಒಂದು ಅಧ್ಯಯನ ಎಂಬಿತ್ಯಾದಿ ಮಹಾಪ್ರಬಂಧಗಳು ರಚಿಸಲ್ಪಟ್ಟಿವೆ. ಇವು ಈಗಾಗಲೇ ಪ್ರಕಟಗೊಂಡು ಜನಮನ್ನಣೆಯನ್ನು ಪಡೆದುಕೊಂಡಿದ್ದೊಂದು ವಿಶೇಷವಾಗಿದೆ.

ಇವಲ್ಲದೆ 'ತ.ರಾ.ಸು. ಬದುಕು–ಬರೆಹ' ಎಂಬ ಅಭಿನಂದನ ಗ್ರಂಥವು ಬಂದಿದೆ. ಇದನ್ನು ಶಾ.ಮಂ.ಕೃಷ್ಣರಾಯರು ಸಂಪಾದಿಸಿಕೊಟ್ಟಿದ್ದಾರೆ. ಹಾಗೆಯೇ 'ತ.ರಾ.ಸು. ಅಂದು–ಇಂದು' ಎಂಬ ಲೇಖನಗಳ ಸಂಕಲನವನ್ನು ಜೆ.ಶೇಷಗಿರಿ ಆಚಾರ್ ಅವರು ಸಂಪಾದಿಸಿದ್ದಾರೆ. 'ಗಿರಿಮಲ್ಲಿಗೆ' ಎಂಬ ಸಂಸ್ಮರಣ ಸಂಪುಟವನ್ನು ಎಚ್.ಶ್ರೀಶೈಲ ಆರಾಧ್ಯರವರು ಸಂಪಾದನೆ ಮಾಡಿದ್ದಾರೆ. ನಾ. ಪ್ರಭಾಕರ್ ಅವರು ತ.ರಾ.ಸು. ಅವರ ಮಕ್ಕಳ ಸಾಹಿತ್ಯ ಕುರಿತು ಒಂದು ಕಿರುಹೊತ್ತಿಗೆಯನ್ನು ರಚಿಸಿದ್ದಾರೆ. ಅವರಂತೆಯೇ ಟಿ.ಎಸ್.ಛಾಯಾಪತಿ ಅವರು 'ವರಲೇಖಕ' ಎಂಬ ಮಕ್ಕಳ ಸಾಹಿತ್ಯಕ್ಕನುಗುಣವಾದ ಪುಸ್ತಕವನ್ನು ಬರೆದಿದ್ದಾರೆ. ಜೊತೆಗೆ

ತ.ರಾ.ಸು. ಅವರ ಒಡನಾಡಿಯಾದ ನಾ. ಪ್ರಭಾಕರ್ ಅವರು 'ತ.ರಾ.ಸು. ಕುರಿತು' ಎಂಬ ಕೃತಿಯೊಂದನ್ನು ಪ್ರಕಟಿಸಿದ್ದಾರೆ. ಇದರ ಜೊತೆಗೆ ನವಕರ್ನಾಟಕ ಸಾಹಿತ್ಯ ಸಂಪದದ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಲೇಖಕರ ಮಾಲೆಯಡಿಯಲ್ಲಿ ನಾ. ಪ್ರಭಾಕರ್ ಅವರು ತ.ರಾ.ಸು. ಬದುಕು ಸಾಹಿತ್ಯ ಕುರಿತು ಪುಸ್ತಕವೊಂದನ್ನು ರಚಿಸಿಕೊಟ್ಟಿದ್ದಾರೆ. ಈ ಹಿನ್ನೆಲೆಯಲ್ಲಿ ಈಗ ಲಭ್ಯವಿರುವ ಕೆಲ ಪ್ರಮುಖ ಕೃತಿಗಳ ಇತಿಮಿತಿಗಳ ಕಡೆಗೆ ಬೆಳಕು ಚೆಲ್ಲುವ ಕಾರ್ಯವನ್ನು ಮಾಡಬಹುದಾಗಿದೆ.

ತ.ರಾ.ಸು. ಸಾಹಿತ್ಯ ಕುರಿತು ಬಂದ ಪ್ರಮುಖ ಸಂಶೋಧನಾತ್ಮಕ ಗ್ರಂಥವೆಂದರೆ, ಡಾ. ಎಂ.ಎಸ್.ಪಾಟಿಲ ಅವರ ತ.ರಾ.ಸು. ಹಾಗೂ ಅವರ ಕಾದಂಬರಿಗಳು' ಎಂಬುದು ಪಾಟೀಲ ಅವರು ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಮಹಾಪ್ರಬಂಧ ಇದಾಗಿದೆ. ಇದು ೧೯೯೩ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟಗೊಂಡಿದೆ. ಅಧ್ಯಯನದ ಅನುಕೂಲಕ್ಕಾಗಿ ಒಟ್ಟು ಆರು ಅಧ್ಯಾಯಗಳನ್ನು ಮಾಡಿಕೊಂಡಿರುವ ಪಾಟೀಲರು ತ.ರಾ.ಸು. ಅವರ ಇಡೀ ಕಾದಂಬರಿ ಸಾಹಿತ್ಯವನ್ನು ಅವಲೋಕಿಸುವ ಪ್ರಯತ್ನ ಮಾಡಿದ್ದಾರೆ

ಮೊದಲ ಅಧ್ಯಾಯದಲ್ಲಿ ತ.ರಾ.ಸು. ಹಾಗೂ ಅವರ ಪರಿಸರ ಕುರಿತು ಹೇಳಿ, ನಂತರ ತ.ರಾ.ಸು. ಅವರ ಜೀವನ ಮತ್ತು ಸಾಧನೆಗೆ ಸಂಬಂಧಿಸಿದ ವಿವರಗಳನ್ನು ಕೊಡುತ್ತಾರೆ. ತ.ರಾ.ಸು. ರವರ ವಂಶ, ಪ್ರಗತಿಶೀಲ ಪಂಥದಲ್ಲಿ ಅವರ ಸ್ಥಾನ ಮತ್ತು ಅ.ನ.ಕೃ ಅವರ ಮಾರ್ಗದರ್ಶನದೊಂದಿಗೆ ಕಂಡುಕೊಂಡ ಸಾಹಿತ್ಯದ ಸಿದ್ಧಿ ಇತ್ಯಾದಿ ಅಂಶಗಳ ಕಡೆಗೆ ಗಮನಹರಿಸುವ ಪಾಟೀಲರು ತ.ರಾ.ಸು. ಅವರ ಬದುಕಿನ ಹಲವಾರು ಪ್ರಮುಖ ಘಟನೆಗಳನ್ನು ವಿವರಿಸುವಂತಹ ಕೆಲಸ ಮಾಡಿದ್ದಾರೆ. ಸ್ವತಃ ಪಾಟೀಲ ಅವರು ತ.ರಾ.ಸು. ಅವರ ಬದುಕಿನ ಘಟನೆಯ ಕುರಿತು 'ತ.ರಾ.ಸು. ಅವರ ಬದುಕು ಅನೇಕ ದ್ವಂದ್ವ ಹಾಗೂ ಸಂಘರ್ಷಗಳಿಂದ ಕೂಡಿದ್ದು, ಅದು ಅವರ ಸಾಹಿತ್ಯದಲ್ಲೂ ಇಣುಕಿದೆ. ಅವರ ವ್ಯಕ್ತಿತ್ವದ ಒಟ್ಟು ರೂಪ ಇಲ್ಲಿ ಕಾಣದು. ಕಾದಂಬರಿಕಾರರೆಂದು ಕರೆಯಿಸಿಕೊಳ್ಳುವ ಪೂರ್ವದಲ್ಲಿ ಅವರ ಬದುಕಿನ ವಿವಿಧ ಮಜಲುಗಳ ಒಂದು ಚಿತ್ರಣ ಪ್ರಸ್ತುತ ಅಧ್ಯಯನದ ಹಿನ್ನೆಲೆಯಲ್ಲಿ ಅತ್ಯಂತ ಅಗತ್ಯವೆಂದು ತಿಳಿದಿದ್ದೇನೆ' ಎಂದು ಲೇಖಕರು ತಮ್ಮ ಅಧ್ಯಯನದ ಉದ್ದೇಶವನ್ನು ಸ್ಪಷ್ಟಪಡಿಸಿದ್ದಾರೆ.

ಎರಡನೆಯ ಅಧ್ಯಾಯದಲ್ಲಿ ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳ ಕುರಿತು ವಿಶ್ಲೇಷಣೆಯಿದೆ. ಸಾಮಾಜಿಕ ಕಾದಂಬರಿಗಳನ್ನು ಕೂಡಾ ಸಾಹಿತಿ, ಸಮಾಜ ಮತ್ತು ಸಾಮಾಜಿಕ ಪ್ರಜ್ಞೆ; ತ.ರಾ.ಸು. ಹಾಗೂ ಸಾಮಾಜಿಕ ಪ್ರಜ್ಞೆ, ಮನೋವಿಶ್ಲೇಷಣಾತ್ಮಕ ಕಾದಂಬರಿಗಳು, ಗ್ರಾಮೀಣ ಬದುಕನ್ನು ಬಿಂಬಿಸುವ ಕಾದಂಬರಿಗಳು, ಧರ್ಮ-

ಧರ್ಮೋಪದೇಶಕರ ಕುರಿತಾದ ಕಾದಂಬರಿಗಳು, ವೇಶ್ಯಾ ಸಮಸ್ಯೆಯನ್ನು ಬಿಂಬಿಸುವ ಕಾದಂಬರಿಗಳು–ಈ ರೀತಿಯ ಶಿರೋನಾಮೆಯನ್ನು ನೀಡುತ್ತ ವಿವರಣೆಯನ್ನು ಮಾಡಿದ್ದಾರೆ.

ಮೂರನೆಯ ಅಧ್ಯಾಯದಲ್ಲಿ ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳಿಗೆ ಸಂಬಂಧಿಸಿದ್ದಾಗಿದೆ. ಐತಿಹಾಸಿಕ ಕಾದಂಬರಿಗಳ ರಚನೆಯಲ್ಲಿ ಕಾದಂಬರಿಕಾರರ ಐತಿಹಾಸಿಕ ಪ್ರಜ್ಞೆ, ವಿಷಯದ ಆಯ್ಕೆ, ಪಾತ್ರ ಚಿತ್ರಣದ ಮಹತ್ವ ಕುರಿತು ಪ್ರಾರಂಭದಲ್ಲಿ ಚರ್ಚಿಸುತ್ತಾ, ತ.ರಾ.ಸು.ರವರ ೧೯ ಐತಿಹಾಸಿಕ ಕಾದಂಬರಿಗಳ ಕುರಿತು ವಿವರಣೆಯನ್ನು ನೀಡುತ್ತಾರೆ. ಚಿತ್ರದುರ್ಗದ ಪಾಳೆಯಗಾರರ ಕುರಿತಾದ ಕಾದಂಬರಿಗಳು, ಚಿತ್ರದುರ್ಗದ ಪಾಳೆಯಗಾರರ ಮೂಲ, ಚಿತ್ರದುರ್ಗವನ್ನಾಳಿದ ಪಾಳೆಯಗಾರರ ಬಗ್ಗೆ ಮಾಹಿತಿ ನೀಡುತ್ತಾ ಒಂದೊಂದು ಐತಿಹಾಸಿಕ ಕಾದಂಬರಿಗಳನ್ನು ಪರಿಚಯಿಸುತ್ತಾ ಹೋಗಿದ್ದಾರೆ.

ನಾಲ್ಕನೆಯ ಅಧ್ಯಾಯದಲ್ಲಿ ತ.ರಾ.ಸು. ಅವರ ಪೌರಾಣಿಕ ಕಾದಂಬರಿಗಳ ಕುರಿತಾದ ಚರ್ಚೆಯಿದೆ. ಐದನೆಯ ಅಧ್ಯಾಯದಲ್ಲಿ ತ.ರಾ.ಸು. ಕಾದಂಬರಿಗಳಲ್ಲಿ ಬಳಕೆಯಾದ ತಂತ್ರ ಮತ್ತು ಶೈಲಿಯನ್ನು ಕುರಿತು ಹೇಳಿದರೆ, ಆರನೆಯ ಅಧ್ಯಾಯದಲ್ಲಿ ತ.ರಾ.ಸು. ರವರ ವ್ಯಕ್ತಿತ್ವದ ವಿವರಣೆಯನ್ನು ನಾನು ಕಾಣಬಹುದಾಗಿದೆ. ಅವರ ಜೀವನ ಹಲವು ಪ್ರಮುಖ ಘಟನೆಗಳ ಸ್ವಭಾವ, ಪರಿಸರ, ವ್ಯಕ್ತಿತ್ವದ ಕುರಿತು ಅನಾವರಣವಿದೆ.

ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳು ಒಂದು ಅಧ್ಯಯನ'ವೆಂಬುದು ಡಾ.ಹು.ರಾ.ಕೋಮಲವಲ್ಲಿ ಅವರ ಸಂಶೋಧನ ಮಹಾಪ್ರಬಂಧವಾಗಿದೆ. ಇದು ೨೦೦೮ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸಂಶೋಧನ ಮಾಲಿಕೆಯ ಅಡಿಯಲ್ಲಿ ಪ್ರಕಟಗೊಂಡಿದೆ. ಮೇಲೆ ಉಲ್ಲೇಖಿಸಿದಂತೆ ತ.ರಾ.ಸು. ಅವರ ಸಾಹಿತ್ಯದ ಹರವು ಬಹುವಿಸ್ತಾರವಾಗಿದೆ. ಆ ಕಾರಣದಿಂದ ಇಲ್ಲಿ ಕೋಮಲವಲ್ಲಿಯವರು ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳನ್ನು ಮಾತ್ರ ಸಂಶೋಧನ ಅಧ್ಯಯನಕ್ಕೆ ಒಳಪಡಿಸುವ ಕಾರ್ಯವನ್ನು ಮಾಡಿದ್ದಾರೆ. ಅವರು ಒಟ್ಟು ಆರು ಅಧ್ಯಾಯಗಳನ್ನು ಮಾಡಿಕೊಂಡು, ಮುಖ್ಯವಾಗಿ ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳ ವಸ್ತು–ವೈವಿಧ್ಯತೆಯ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಮಾಡಿದ್ದಾರೆ.

ಮೊದಲ ಅಧ್ಯಾಯದಲ್ಲಿ ತ.ರಾ.ಸು. ಅವರ ಜೀವನ, ವ್ಯಕ್ತಿತ್ವ ಮತ್ತು ಪರಿಸರ ಪ್ರಭಾವಕ್ಕೆ ಸಂಬಂಧಿಸಿದ ಸಂಗತಿಗಳನ್ನು ಕುರಿತು ಚರ್ಚಿಸಿದ್ದಾರೆ. "ಅಧ್ಯಯನದ ಆಕಾಂಕ್ಷೆಯೊಡನೆ ರಾಜಕೀಯ ಆಕರ್ಷಣೆಯೂ ತ.ರಾ.ಸು. ಅವರ ಯೋಜನಾ ಗತಿಯನ್ನು, ಜೀವನ ಧೋರಣೆಯನ್ನು ಬದಲಿಸಿತು. ಹೊಸ ಸಾಮಾಜಿಕ ಪ್ರೇರಣೆಗಳ ಪ್ರಭಾವಕ್ಕೊಳಗಾಗಿ 'ಹರಿಜನೋದ್ಧಾರ'ದ ಬಗ್ಗೆ ಮಾತನಾಡುವಾಗ ತ.ರಾ.ಸು. ಅವರಿಗೆ ಕೇವಲ ೧೯ ವರ್ಷ. ಇದಕ್ಕಾಗಿ ಸುತ್ತಲಿನವರ ಟೀಕೆಗೆ ಗುರಿಯಾದರೂ ಹೊಸದನ್ನು ಸಾಧಿಸಿದ ಹುಮ್ಮಸ್ಸು,

ಎಸ್. ನಿಜಲಿಂಗಪ್ಪನವರ ಪ್ರೋತ್ಸಾಹದಿಂದಾಗಿ (೧೯೩೭) ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸೇರಿ, ಜೈಲುವಾಸವನ್ನು ಅನುಭವಿಸಿದರು. ಒಂದುಕಡೆ ಸಾಹಿತ್ಯದತ್ತ ಒಲವು, ಮತ್ತೊಂದು ಕಡೆ ಸ್ವತಂತ್ರ ಸಂಗ್ರಾಮಕ್ಕಾಗಿ ಹೋರಾಟ ಈ ಎರಡರ ನಡುವೆ ಶಾಲೆಯ ಪಾಠ ರುಚಿಸಲಿಲ್ಲ. ಆದರೆ ಪಠ್ಯೇತರ ಕೃತಿಗಳು, ಕಥೆ–ಕಾದಂಬರಿಗಳು ಪ್ರಿಯವಾದವು. ಇದನ್ನು ತ.ರಾ.ಸು. ಅವರ ತಂದೆ ನಿರ್ಬಂಧಿಸುತ್ತಿದ್ದರು. ಈ ವೇಳೆಗಾಗಲೇ ಬರೆಯುವ ಸಾಹಸಕ್ಕೆ ಕೈಹಾಕಿ ಅದರಲ್ಲಿ ತಮ್ಮ ಮನಸ್ಸನ್ನು ತೊಡಗಿಸಿಕೊಂಡಿದ್ದರು."[೩] ಎಂಬಂತೆ ತ.ರಾ.ಸು. ಅವರ ಬಾಲ್ಯದ ಬದುಕು ಮತ್ತು ಸಾಹಿತ್ಯಾಸಕ್ತಿಯನ್ನು ಕುರಿತು ಹೇಳಿದ್ದಾರೆ.

ಎರಡನೆಯ ಅಧ್ಯಾಯದಲ್ಲಿ ಸಾಮಾಜಿಕ ಕಾದಂಬರಿಗಳ ಸ್ವರೂಪ ಮತ್ತು ಲಕ್ಷಣಗಳನ್ನು ಕುರಿತು ಚರ್ಚಿಸುವ ಕೋಮಲವಲ್ಲಿಯವರು ಇಲ್ಲಿ ಕನ್ನಡ ಕಾದಂಬರಿಯ ಹುಟ್ಟು ಮತ್ತು ಬೆಳವಣಿಗೆಯೊಂದಿಗೆ ಅದರ ಪ್ರಭಾವ ವಲಯದ ಸಂಗತಿಗಳನ್ನು ಬಿಚ್ಚಿಡುತ್ತಾ ಹೋಗುತ್ತಾರೆ. ಆ ಮೂಲಕ ಗದ್ಯ ಬರವಣಿಗೆಯಲ್ಲಿ ಕಾದಂಬರಿ ಸಾಹಿತ್ಯದ ಪ್ರಭಾವ ಪರಿಣಾಮಗಳನ್ನು ಕುರಿತು ಚಿಂತಿಸುತ್ತಾರೆ. ಆಧುನಿಕ ಕನ್ನಡ ಸಾಹಿತ್ಯದ ಕಾಲಘಟ್ಟಗಳ ಹಿನ್ನೆಲೆಯಲ್ಲಿ ಚಾರಿತ್ರಿಕವಾಗಿ ಅದರ ಮಹತ್ವವನ್ನು ಕುರಿತು ಸಕಾರಣವಾಗಿ ಶೋಧಿಸುತ್ತ ಹೋಗುತ್ತಾರೆ. ಮೂರನೆಯ ಅಧ್ಯಾಯದಲ್ಲಿ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪ್ರಗತಿಶೀಲ ಸಾಹಿತ್ಯದ ತಾತ್ವಿಕತೆ ಮತ್ತು ಆ ಸಾಹಿತ್ಯದ ಸಾತ್ತ್ವಿಕ ವಿವರವನ್ನು ಕೊಡುತ್ತಾರೆ.

ಈ ಸಂಪ್ರಬಂಧದ ಹೃದಯಭಾಗದಂತಿರುವ ನಾಲ್ಕನೆಯ ಅಧ್ಯಾಯವು ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳ ವಸ್ತು–ವೈವಿಧ್ಯತೆಯ ದೃಷ್ಟಿಯಿಂದ ಗಮನಸೆಳೆಯುತ್ತದೆ. ಸಾಮಾಜಿಕ ಪರಿಸರದಲ್ಲಿ ಲೈಂಗಿಕ ಸಮಸ್ಯೆ, ಸಂಸಾರಿಕ ಸಮಸ್ಯೆ, ಸ್ತ್ರೀಸ್ವಾತಂತ್ರ್ಯ, ಬಡತನ, ಗ್ರಾಮೀಣ ಪರಿಸರ, ಕಲಾಲೋಕ ಈ ಮುಂತಾದ ಅಂಶಗಳ ಹಿನ್ನಲೆಯಲ್ಲಿ ತ.ರಾ.ಸು. ಸಾಮಾಜಿಕ ಕಾದಂಬರಿಗಳು ಹೇಗೆ ಜನಮನ್ನಣೆಯನ್ನು ಪಡೆದುಕೊಳ್ಳುತ್ತವೆ ಎಂಬುದನ್ನು ಅವರ ಕಾದಂಬರಿಗಳ ಸಮೇತ ಸಾಧಾರವಾಗಿ ಶೋಧಿಸುತ್ತಾ ಹೋಗಿರುವ ಸಂಗತಿ ಇಲ್ಲಿ ಗೋಚರಿಸುತ್ತದೆ. ಜೊತೆಗೆ ರಾಜಕೀಯ ಪರಿಸರ, ನಾಗರಿಕ ಪರಿಸರ ಹಾಗೂ ಧಾರ್ಮಿಕ ಪರಿಸರಗಳ ಹಿನ್ನೆಲೆಯಲ್ಲಿ ತ.ರಾ.ಸು. ಕಾದಂಬರಿಗಳು ಪಡೆದುಕೊಳ್ಳಬಹುದಾದ ಮಹತ್ವವನ್ನು ಕುರಿತು ಚಿಂತಿಸಿದ್ದು ಕಂಡುಬರುತ್ತದೆ.

ಐದನೆಯ ಅಧ್ಯಾಯವು ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳ ಶೈಲಿ, ಭಾಷೆ ಮತ್ತು ತಂತ್ರದ ದೃಷ್ಟಿಯಿಂದ ಗಮನಾರ್ಹವಾಗುತ್ತದೆ. "ತ.ರಾ.ಸು, ಬರವಣಿಗೆಗೆ ಅವರದೇ ಆದ ವೈಶಿಷ್ಟ್ಯವಿದ್ದರೂ ಅವರ ಶೈಲಿಗೆ ಹಲವು ಮಿತಿಗಳಿವೆ. ಹಾಗಾಗಲು ಆಗಿನ ಸಾಹಿತ್ಯಕ ಪರಂಪರೆಯು ಸ್ವಲ್ಪ ಮಟ್ಟಿಗೆ ಕಾರಣ, ಪ್ರತಿಭಟನಾತ್ಮಕವಾಗಿ ರೂಪುಗೊಂಡ ಪ್ರಗತಿಶೀಲ ಸಾಹಿತ್ಯ ಪರಂಪರೆ ತನ್ನದೇ ಆದ ಕೆಲವಾರು ಕಟ್ಟುಪಾಡುಗಳಿಗೆ ಬದ್ಧವಾಗಿ

ಕೃತಿ ರಚನೆಗೆ ತೊಡಗಿತು. ಸಾಮಾಜಿಕ ಸಮಸ್ಯೆಗೆ ಇಂಬುಕೊಟ್ಟಂತೆ ಶ್ರೀಸಾಮಾನ್ಯನಿಗೂ ಕೃತಿ ತಲುಪಿಸುವ ಆಶಯವೇ ಅದರ ಮಿತಿಯೂ ಆಯಿತು"[೪] ಎಂಬ ಪ್ರಗತಿಶೀಲ ಪಂಥದ ಇತಿಮಿತಿಗಳೊಂದಿಗೆ ತ.ರಾ.ಸು. ಅವರು ತಮ್ಮ ಬರವಣಿಗೆ ಶೈಲಿಯನ್ನು ರೂಪಿಸಿಕೊಳ್ಳಬೇಕಾಯಿತೆಂದು ಶೋಧಿಸಿದ್ದಾರೆ. ಅವರ ಬರವಣಿಗೆಯಲ್ಲಿ ಸ್ತ್ರೀವರ್ಣನೆ, ಪ್ರಕೃತಿ ಚಿತ್ರಣ, ಕಲಾಭಿಮಾನ, ಸಂಗೀತ, ನಗರ ಚಿತ್ರಣ, ಸ್ವಭಾವ ಚಿತ್ರಣ, ಹಾಸ್ಯ ಚಿತ್ರಣ, ಭಾವತೀವ್ರತೆ, ಗಾದೆ–ನುಡಿಗಟ್ಟುಗಳ ಬಳಕೆ, ಆಡುನುಡಿ, ಉಕ್ತಿವೈಶಿಷ್ಟ್ಯ, ಉಪಮೆ, ರೂಪಕಗಳ ಬಳಕೆ ಹಾಗೂ ಭಾಷಾ ವೈವಿಧ್ಯತೆಯೊಂದಿಗೆ ತಂತ್ರದ ವೈಖರಿಯು ತ.ರಾ.ಸು ಕಾದಂಬರಿಗಳಿಗೆ ಮೆರಗು ನೀಡಿದ್ದನ್ನು ವಿವರಿಸಿದ್ದಾರೆ. ಕೊನೆಯ ಅಧ್ಯಾಯದಲ್ಲಿ ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳಲ್ಲಿ ಪ್ರಗತಿಶೀಲ ಧೋರಣೆ ವ್ಯಕ್ತವಾದ ಪರಿಯನ್ನು ಕೋಮಲವಲ್ಲಿಯವರು ಪತ್ತೆ ಹಚ್ಚಿದ್ದಾರೆ. ಜೊತೆಗೆ ಪ್ರಗತಿಶೀಲ ಪಂಥದಲ್ಲಿ ತ.ರಾ.ಸು. ಅವರ ಸ್ಥಾನಮಾನವನ್ನು ಕುರಿತು ಚಿಂತಿಸಿದ್ದಾರೆ. ಒಟ್ಟಾರೆ, ಈ ಸಂಪ್ರಬಂಧವು ಕೆಲಇತಿಮಿತಿಗಳೊಂದಿಗೆ ತನ್ನದೇ ಆದ ಒಂದು ಸುಂದರ ಚೌಕಟ್ಟನ್ನು ಪಡೆದುಕೊಂಡಿದೆಯಲ್ಲದೇ ತ.ರಾ.ಸು. ಸಾಮಾಜಿಕ ಕಾದಂಬರಿಗಳ ಭಾವಸ್ಪಂದನವನ್ನು ಸೆರೆಹಿಡಿದಿದೆ ಎಂದು ಹೇಳಬಹುದು.

ತ.ರಾ.ಸು. ಸಾಹಿತ್ಯ ಕುರಿತು ಬಂದ ಮತ್ತೊಂದು ಪ್ರಮುಖ ಸಂಶೋಧನಾತ್ಮಕ ಗ್ರಂಥವೆಂದರೆ ಡಾ. ಎಂ.ಎನ್. ಮಹೇಶ್ ಅವರ 'ತ.ರಾ.ಸು. ಸಾಹಿತ್ಯ–ಒಂದು ಅಧ್ಯಯನ' ಎಂಬುದು. ಮಹೇಶ ಅವರು ಮಧುರೈ ಕಾಮರಾಜ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಸಂಪ್ರಬಂಧ ಇದಾಗಿದೆ. ಇದು ೨೦೦೯ರಲ್ಲಿ ಪ್ರಕಟಗೊಂಡಿದೆ. ಅಧ್ಯಯನದ ಅನುಕೂಲಕ್ಕಾಗಿ ಒಟ್ಟು ಏಳು ಅಧ್ಯಾಯಗಳನ್ನು ಮಾಡಿಕೊಂಡಿರುವ ಮಹೇಶ ಅವರು ತ.ರಾ.ಸು. ಅವರ ಇಡೀ ಸಾಹಿತ್ಯವನ್ನು ಅವಲೋಕಿಸುವ ಪ್ರಯತ್ನಮಾಡಿದ್ದಾರೆ.

ಮೊದಲ ಅಧ್ಯಾಯದಲ್ಲಿ ಅಧ್ಯಯನದ ಸ್ವರೂಪ ಮತ್ತು ಉದ್ದೇಶದ ಇತಿಮಿತಿಗಳನ್ನು ಹೇಳಿ, ನಂತರ ತ.ರಾ.ಸು. ಅವರ ಜೀವನ ಮತ್ತು ಸಾಧನೆಗೆ ಸಂಬಂಧಿಸಿದ ವಿವರಗಳನ್ನು ಕೊಡುತ್ತಾರೆ. ಜೊತೆಗೆ ತ.ರಾ.ಸು. ಅವರ ವ್ಯಕ್ತಿತ್ವ ಚಿತ್ರಣವನ್ನು ಸಾಧಾರಣವಾಗಿ ಕೊಡುತ್ತಾ ಹೋಗುವುದು ಕಂಡುಬರುತ್ತದೆ. ಪ್ರಗತಿಶೀಲ ಪಂಥದ ಹಿನ್ನೆಲೆ, ಅದರ ಪ್ರಭಾವ ಮತ್ತು ಅನಕೃ ಅವರ ಮಾರ್ಗದರ್ಶನದೊಂದಿಗೆ ಕಂಡುಕೊಂಡ ಸಾಹಿತ್ಯದ ಸಿದ್ಧಿ ಇತ್ಯಾದಿ ಅಂಶಗಳ ಕಡೆಗೆ ಗಮನಹರಿಸುವ ಮಹೇಶ ಅವರು ತ.ರಾ.ಸು ಅವರ ಬದುಕನ್ನು ನಿಷ್ಪಕ್ಷಪಾತವಾಗಿ ಕಂಡರಿಸುವ ಪ್ರಯತ್ನ ಮಾಡಿದ್ದಾರೆನ್ನಬಹುದು, ಉದಾಹರಣೆಗೆ, "ಸುಬ್ಬರಾಯರ ಪ್ರಾರಂಭದ ಬರವಣಿಗೆಯಲ್ಲಿ ಆಸ್ತಿಕತೆಯ ಅತಿಯಾದ ಖಂಡನೆ ಇದೆ. ಅವರ ಐವತ್ತನೆಯ ವಯಸ್ಸಿನ ನಂತರದ ಬರವಣಿಗೆಯಲ್ಲಿ ಆಸ್ತಿಕತೆಯನ್ನು ವಿಪರೀತವಾಗಿ ವೈಭವೀಕರಿಸಿದ್ದಾರೆ. ಮನುಷ್ಯನ

ಬದುಕಿನಲ್ಲಿ ಧರ್ಮ, ದೇವರು ಹಾಗೂ ಧರ್ಮ ಸಂಬಂಧಿ ಆಚರಣೆಗಳು ವಹಿಸಬಹುದಾದ ಪಾತ್ರದ ಸ್ವರೂಪವನ್ನು ನಿಖರವಾಗಿ ಗುರುತಿಸುವಲ್ಲಿ ತ.ರಾ.ಸು. ವಿಫಲರಾಗಿದ್ದಾರೆ. ಒಂದು ಹಂತದವರೆಗೆ ದೇವರು ಮತ್ತು ಧರ್ಮ ವಿರೋಧಿ ಮನೋಭಾವವೇ ನಿಜವಾದ ವೈಚಾರಿಕತೆ ಎಂಬ ಭ್ರಮೆಯನ್ನು ಅವರಲ್ಲಿ ಕಾಣುತ್ತೇವೆ. ಪ್ರಗತಿಶೀಲ ಲೇಖಕನು ನಾಸ್ತಿಕನಾಗಿರಬೇಕು. ಹಾಗಿದ್ದಲ್ಲಿ ಮಾತ್ರ ಪ್ರಗತಿಪರ ಸಾಹಿತ್ಯದ ನಿರ್ಮಾಣವು ಸಾಧ್ಯ ಎಂಬ ನಿಲುವಿಗೆ ಅಂಟಿಕೊಂಡಂತಿದೆ. ಅವರ ಬದುಕಿನ ಪೂರ್ವಾರ್ಧದಲ್ಲಿ ಈ ಬಗೆಯ ಗೊಂದಲಗಳು ಕಂಡುಬಂದರೆ, ಉತ್ತರಾರ್ಧದಲ್ಲಿ ಇನ್ನೊಂದು ಬಗೆಯ ದ್ವಂದ್ವ ನಿಲುವನ್ನು ಗುರುತಿಸಬಹುದು" ಎಂದು ಹೇಳಿದ್ದು ಗಮನಾರ್ಹ ವಿಚಾರವಾಗಿದೆ.

ಮೂರನೆಯ ಅಧ್ಯಾಯದಲ್ಲಿ ಪ್ರಗತಿಶೀಲ ಸಾಹಿತ್ಯ ಚಳುವಳಿ ಮತ್ತು ತ.ರಾ.ಸು. ಅವರ ಪಾತ್ರ, ಸ್ಥಾನಮಾನದ ಬಗೆಗೆ ತಿಳಿಸುವ ಮಹೇಶ ಅವರು, ನಾಲ್ಕನೆಯ ಅಧ್ಯಾಯದಲ್ಲಿ ಸಣ್ಣಕಥಾ ಸಾಹಿತ್ಯಕ್ಕೆ ತ.ರಾ.ಸು. ಅವರ ಕೊಡುಗೆಯನ್ನು ಕುರಿತು ಸವಿಸ್ತಾರವಾಗಿ ವಿವರಿಸಿದ್ದಾರೆ. ತ.ರಾ.ಸು. ಅವರು ಬರೆದ ಕಥೆಗಳೆಲ್ಲವನ್ನೂ ಬಿಡಿಬಿಡಿಯಾಗಿ ನೋಡುತ್ತ, ಅವುಗಳ ಸತ್ಯಾಸತ್ಯತೆಯ ಮೇಲೆ ಬೆಳಕು ಚೆಲ್ಲುತ್ತಾರೆ. 'ನೈಜತೆಯ ಹೆಸರಿನಲ್ಲಿ ಪಾತ್ರಗಳು ಅತಿಯಾಗಿ ವೈಭವೀಕರಿಸುವುದರಿಂದ ಕೃತಿಗಳ ಕಲಾತ್ಮಕತೆ ಮರೆಯಾಗಿದೆ' ಎಂದು ಅಭಿಪ್ರಾಯ ಪಡುವ ಮಹೇಶ ಅವರು ಈ ಮಾತು ತ.ರಾ.ಸು ಅವರ ಕಾದಂಬರಿಗಳಿಗೂ ಅನ್ವಯಿಸುತ್ತೆಂದು ಹೇಳಿದ್ದು ಗಮನಾರ್ಹ ವಿಷಯವಾಗಿದೆ.

ಐದನೆಯ ಅಧ್ಯಾಯವು ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳ ಸಾಧನೆ–ಸಿದ್ಧಿಗೆ ಸಂಬಂಧಿಸಿದ್ದಾಗಿದೆ. ಇಲ್ಲಿ ಮಹೇಶ ಅವರು ನಾಲ್ಕು ಭಾಗಗಳನ್ನು ಮಾಡಿಕೊಂಡು ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳ ಸಾತ್ತ್ವಿಕತೆಯನ್ನು ಕುರಿತು ಹೇಳುವ ಪ್ರಯತ್ನ ಮಾಡಿದ್ದಾರೆ. ಮೊದಲ ಭಾಗದಲ್ಲಿ ಕರ್ನಾಟಕದ ರಾಜಮನೆತನಗಳ ಹಿನ್ನೆಲೆಯಲ್ಲಿ ಬಂದ ಕಾದಂಬರಿಗಳು, ಎರಡನೇ ಭಾಗದಲ್ಲಿ ಚಿತ್ರದುರ್ಗದ ಪಾಳೆಗಾರರನ್ನು ಕುರಿತು ಬರೆದ ಕಾದಂಬರಿಗಳು ಎಂಬಂತೆ ವಿಂಗಡಿಸಿಕೊಂಡು ಸಂಶೋಧನೆ ನಡೆಸಿರುವುದು ಗಮನಾರ್ಹವಾಗಿದೆ. ಜೊತೆಗೆ ಮೂರನೇ ಭಾಗದಲ್ಲಿ ಐತಿಹಾಸಿಕ ಕಾದಂಬರಿಗಳ ಭಾಷೆ ಮತ್ತು ಶೈಲಿಗೆ ಸಂಬಂಧಿಸಿದ ವಿಚಾರಗಳನ್ನು ಕುರಿತು ಹೇಳಿದರೆ, ನಾಲ್ಕನೇ ಭಾಗದಲ್ಲಿ ಆ ಕಾದಂಬರಿಗಳಲ್ಲಿ ವ್ಯಕ್ತವಾದ ತ.ರಾ.ಸು. ಅವರ ಪ್ರಗತಿಪರ ಧೋರಣೆಯನ್ನು ಗುರುತಿಸಿದ್ದು ವಿಶೇಷವಾಗಿದೆ.

ಆರನೆಯ ಅಧ್ಯಾಯದಲ್ಲಿ ಜೀವನ ಚರಿತ್ರೆಗೆ ಸಂಬಂಧಿಸಿದ ವಿಚಾರಗಳು ಕಾಣಸಿಗುತ್ತವೆ. ಕೊನೆಯಲ್ಲಿ ಉಪಸಂಹಾರದಡಿಯಲ್ಲಿ ಸಂಶೋಧನೆಯ ಆಗುಹೋಗುಗಳನ್ನು

ಕುರಿತು ವಿವರಿಸಿದ್ದು ಕಂಡುಬರುತ್ತದೆ. ಒಟ್ಟಾರೆ, ತ.ರಾ.ಸು. ಸಾಹಿತ್ಯ ಕುರಿತಾದ ಅಧ್ಯಯನಕ್ಕೆ ಇದೊಂದು ಪ್ರಮುಖ ಆಕರಗ್ರಂಥವಾಗಿ ಹೊರಹೊಮ್ಮಿದೆ ಎಂದು ಹೇಳಬಹುದು.

ತ.ರಾ.ಸು. ಅಭಿಮಾನಿಗಳೆಲ್ಲ ಸೇರಿ ೧೯೮೨ರಲ್ಲಿ ಅವರಿಗೆ ಅರ್ಪಿಸಿದ ಬೃಹತ್ ಅಭಿನಂದನ ಗೌರವ ಗ್ರಂಥವೊಂದು ಪ್ರಕಟಗೊಂಡಿತು. ವಿಶೇಷವೆಂದರೆ ಇದು ೨೦೦೮ರಲ್ಲಿ ಮರು ಮುದ್ರಣ ಕಂಡಿರುವುದಾಗಿದೆ. ಈ ಗ್ರಂಥದ ಸಂಪಾದನಾ ಜವಾಬ್ದಾರಿಯನ್ನು ಹೊತ್ತವರು ಶಾ.ಮಂ.ಕೃಷ್ಣರಾಯರು. ಇವರು ಅತ್ಯಂತ ಅಚ್ಚುಕಟ್ಟಾಗಿ ಸರಿಸುಮಾರು ೯೫೦ ಪುಟಗಳಲ್ಲಿ ಈ ಗ್ರಂಥವನ್ನು ಕಟ್ಟಿಕೊಟ್ಟಿದ್ದಾರೆ. ಇದರಲ್ಲಿ ತ.ರಾ.ಸು. ಅವರ ಬದುಕು–ಬರೆಹ ಕುರಿತಾದ ೯೮ ಲೇಖನಗಳು ಸಂಗ್ರಹಗೊಂಡಿವೆ. ಕನ್ನಡದ ಹಿರಿಯ–ಕಿರಿಯ ವಿದ್ವಾಂಸರಾದಿಯಾಗಿ, ಉದಯೋನ್ಮುಖ ಬರೆಹಗಾರರು ತಮ್ಮ ಲೇಖನಿಯ ಮೂಲಕ ತ.ರಾ.ಸು. ಅವರಿಗೆ ಗೌರವನ್ನು ಸಮರ್ಪಿಸಿದ್ದು ಗಮನಾರ್ಹ ಸಂಗತಿಯಾಗಿದೆ. ತ.ರಾ.ಸು. ವ್ಯಕ್ತಿತ್ವ ಮತ್ತು ಅವರ ಇಡಿಯಾದ ಸಾಹಿತ್ಯವು ಇದರಲ್ಲಿ ಅನಾವರಣಗೊಂಡಿರುವುದನ್ನು ಕಾಣಬಹುದಾಗಿದೆ. ತ.ರಾ.ಸು ಅವರನ್ನು ಮತ್ತು ಅವರ ಸಾಹಿತ್ಯವನ್ನು ಅರಿಯಬೇಕೆಂದವರಿಗೆ ಈ ಬೃಹತ್ ಗ್ರಂಥ ತುಂಬಾ ಸಹಕಾರಿಯಾಗಿದೆ.

ಇನ್ನು ಇತ್ತೀಚೆಗೆ (೨೦೧೫) 'ತ.ರಾ.ಸು. ಕಾದಂಬರಿಗಳ ಕುರಿತು' ಎಂಬ ಗ್ರಂಥವೊಂದು ಪ್ರಕಟಗೊಂಡಿದೆ. ಗೌರಿಸುಂದರ್ ಅವರು ಇದನ್ನು ಸಂಪಾದಿಸಿಕೊಟ್ಟಿದ್ದಾರೆ. ಅವರು ತ.ರಾ.ಸು. ಅವರ ಬಗೆಗೆ ಇರಿಸಿಕೊಂಡ ಪ್ರೀತಿ, ಗೌರವ, ಸಂಬಂಧದ ದ್ಯೋತಕದಂತೆ ಈ ಕೃತಿಕಂಡಿದೆ. ಆ ಒಂದು ಕಾರಣಕ್ಕಾಗಿಯೇ ಈ ಗ್ರಂಥವನ್ನು ಹೊರತರುವ ಯೋಜನೆಯನ್ನು ಹಾಕಿಕೊಳ್ಳಲಾಯಿತೆಂದು ಸ್ವತಃ ಗೌರಿಸುಂದರ್ ಅವರೇ ಈ ಗ್ರಂಥದ ಆರಂಭದಲ್ಲಿ ಸ್ಪಷ್ಟಪಡಿಸಿದ್ದಾರೆ. ಇದರಲ್ಲಿ ತ.ರಾ.ಸು. ಅವರ ಕಾದಂಬರಿಗಳ ಕುರಿತಾದ ಚಿಂತನಾತ್ಮಕ ಹಾಗೂ ವಿಮರ್ಶಾತ್ಮಕತೆಯಿಂದ ಕೂಡಿದ ಒಟ್ಟು ೪೬ ಲೇಖನಗಳು ಸಂಕಲನಗೊಂಡಿವೆ. ನಾಡಿನ ಪ್ರಮುಖ ಸಾಹಿತಿಗಳು ತಮ್ಮ ಆಯ್ಕೆಯ ಕೃತಿಗನುಗುಣವಾಗಿ ತಮ್ಮದೇ ಆದ ಒಳನೋಟಗಳೊಂದಿಗೆ, ತಮ್ಮ ಚಿಂತನಾ ಲಹರಿಯನ್ನು ಈ ಪುಸ್ತಕದಲ್ಲಿ ಹರಿಯಬಿಟ್ಟಿದ್ದಾರೆ. ತ.ರಾ.ಸು. ಅವರ ಕಾದಂಬರಿಗಳ ಹೆಚ್ಚಿನ ಓದಿಗೆ ಮತ್ತು ಅಧ್ಯಯನಕ್ಕೆ ಈ ಗ್ರಂಥವು ಪೂರಕವಾಗಿ ಬಂದಿದೆ ಎಂಥಲೇ ಹೇಳಬೇಕು. ಈ ಒಂದು ಕಾರ್ಯವನ್ನು ಪೂರೈಸಿದ ಗೌರಿಸುಂದರ್ ಅವರು ಅಭಿನಂದನಾರ್ಹರಾಗಿದ್ದಾರೆ.

ಒಟ್ಟಾರೆ, ತ.ರಾ.ಸು. ಬದುಕು ಮತ್ತು ಸಾಹಿತ್ಯ ಕುರಿತು ಬೇರೆ ಬೇರೆ ದೃಷ್ಟಿಕೋನಗಳ ಹಿನ್ನೆಲೆಯಲ್ಲಿ ಅಧ್ಯಯನಗಳು ನಡೆದಿದ್ದರೂ ಅವರ ಕಾದಂಬರಿಗಳ ರಚನಾ ಕ್ರಮದ

ಅಥವಾ ವಿನ್ಯಾಸಗಳ ಹಿನ್ನೆಲೆಯಲ್ಲಿ ಇದುವರೆಗೂ ಸಂಶೋಧನ ಅಧ್ಯಯನ ನಡೆದಿಲ್ಲ. ಈ ಒಂದು ಕೊರತೆಯನ್ನು ಮನಗಂಡು ಈ ವರೆಗಿನ ಅಧ್ಯಯನಗಳನ್ನು ಗಮನದಲ್ಲಿಟ್ಟುಕೊಂಡು ಅದರಲ್ಲೂ ವಿಶೇಷವಾಗಿ ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳ ವಸ್ತುವಿನ್ಯಾಸದ ಕಡೆಗೆ ಹೆಚ್ಚು ಒತ್ತುಕೊಟ್ಟು ಈ ನನ್ನ ಸಂಶೋಧನ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಹು.ರಾ.ಕೋಮಲವಲ್ಲಿ: ತ.ರಾ.ಸು. ಸಾಮಾಜಿಕ ಕಾದಂಬರಿಗಳು : ಒಂದು ಅಧ್ಯಯನ, ೨೦೦೮, ಪುಟ:೬

೨. ಎಂ.ಎನ್.ಮಹೇಶ್: ತ.ರಾ.ಸು.ಸಾಹಿತ್ಯ: ಒಂದು ಅಧ್ಯಯನ, ೨೦೦೯, ಪುಟ ೨೮

೩. ಹು.ರಾ.ಕೋಮಲವಲ್ಲಿ: ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳು–ಒಂದು ಅಧ್ಯಯನ, ೨೦೦೮, ಪುಟ:೩

೪. ಹು.ರಾ.ಕೋಮಲವಲ್ಲಿ: ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳು–ಒಂದು ಅಧ್ಯಯನ, ೨೦೦೮, ಪುಟ:೧೩೪

೫. ಎಂ.ಎನ್.ಮಹೇಶ್: ತ.ರಾ.ಸು.ಸಾಹಿತ್ಯ: ಒಂದು ಅಧ್ಯಯನ, ೨೦೦೯, ಪುಟ ೩೫



# ಅಧ್ಯಾಯ: ಮೂರು

## ಚಾರಿತ್ರಿಕ ಕಾದಂಬರಿಗಳಲ್ಲಿ ಸಾಹಿತ್ಯ ಮತ್ತು ಚರಿತ್ರೆಯ ಅಂತರ್ ಸಂಬಂಧ

ಅಂತರ್‌ಶಿಸ್ತೀಯ ಅಧ್ಯಯನದಲ್ಲಿ ಸಾಹಿತ್ಯ ಮತ್ತು ಚರಿತ್ರೆಗಳು ಒಂದಕ್ಕೊಂದು ಪೂರಕವಾದ ಅರ್ಥವನ್ನು ಪಡೆದುಕೊಂಡು ಬಳಸಲ್ಪಡುತ್ತಿವೆ. ವಿಶಿಷ್ಟ ಪರಿಕಲ್ಪನೆಗಳೊಂದಿಗೆ ಅವುಗಳನ್ನು ಶೋಧನೆಗೆ ಒಳಪಡಿಸುವ ಕಾರ್ಯವು ನಿರಂತರವಾಗಿ ನಡೆಯುತ್ತ ಬಂದಿರುವುದನ್ನೂ ಕಾಣುತ್ತೇವೆ. "ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣಗಳು ಎಲ್ಲ ಕಾಲದ ವಸ್ತುಗಳಾಗಿವೆ: ಅಭಿವ್ಯಕ್ತಿ ವಿಧಾನಗಳಾಗಿವೆ. ಚಾರಿತ್ರಿಕ ವ್ಯಕ್ತಿಯೊಬ್ಬ ನಾಯಕನಾಗುವುದರಿಂದ ಹಿಡಿದು ಚಾರಿತ್ರಿಕ ಸಂದರ್ಭವೊಂದು ವಸ್ತುವಾಗುವವರೆಗೆ ಚರಿತ್ರೆ ಮತ್ತು ಸಾಹಿತ್ಯದ ಸಂಬಂಧ ವಿಸ್ತಾರವಾಗಿದೆ".[೧] ಇದು ಇತಿಹಾಸದುದ್ದಕ್ಕೂ ಗೋಚರಿಸುವ ಸಂಗತಿ.

ಇತಿಹಾಸ ಹಾಗೂ ಚರಿತ್ರೆಗಳ ಅಂತಃಸ್ಸಂಬಂಧದ ಚರ್ಚೆಯು ಕಾಲಕ್ಕನುಗುಣವಾಗಿ ನಡೆಯುತ್ತ ಬಂದಿದೆ. ಇದಕ್ಕೆ ಕಾರಣ ಅವುಗಳ ನಡುವಿನ ಅರ್ಥವ್ಯತ್ಯಾಸವೇ ಆಗಿತ್ತು. ಆದರೆ ಇಂದು ಇವರೆಡೂ ಒಂದೇ ಎಂಬ ಅರ್ಥದಲ್ಲಿ ಬಳಸಲ್ಪಡುತ್ತಿವೆ. "'History' ಎಂಬ ಇಂಗ್ಲಿಷ್ ಪದಕ್ಕೆ ಸಂವಾದಿಯಾಗಿ ಇಂದು 'ಇತಿಹಾಸ' ಮತ್ತು 'ಚರಿತ್ರೆ' ಎಂಬ ಎರಡೂ ಪದಗಳನ್ನು ಬಳಸಲಾಗುತ್ತಿದೆ. ಆದರೆ ಪ್ರಾಚೀನ ಸಂದರ್ಭದಲ್ಲಿ ಇವು ಬೇರೆ ಬೇರೆ ಅರ್ಥದಲ್ಲಿ ಬಳಕೆಯಾಗಿವೆ. ಇಡೀ ಒಂದು ಜನಸಮುದಾಯದ ಏಳುಬೀಳುಗಳನ್ನು ಕುರಿತ ಇತಿವೃತ್ತವೇ ಇತಿಹಾಸವಾದರೆ, ಒಂದು ವಂಶದ ಅಥವಾ ಒಬ್ಬ ವ್ಯಕ್ತಿಯ ಏಳುಬೀಳುಗಳನ್ನು, ಸಾಧನೆಗಳನ್ನು ನಿರೂಪಿಸುವುದು ಚರಿತ್ರೆಯಾಗುತ್ತದೆ. 'ಇತಿಹಾಸ' ಕೃತಿಗಳ ರಚನೆ ಕ್ರಿ.ಪೂ. ೪೦೦ ರಿಂದ ಕ್ರಿ.ಶ. ೪೦೦ರ ನಡುವಿನ ಅವಧಿಯಲ್ಲಿ ಕಂಡುಬಂದರೆ, ನಡೆದಿದೆ. ತದನಂತರದ ಕಾಲದಲ್ಲಿ ರಚನೆಯಾದವುಗಳು. ಚರಿತ್ರೆಗಳಲ್ಲಿ ಇಡೀ ವಂಶದ ಇತಿವೃತ್ತವನ್ನು ಹೇಳುವ ಮತ್ತು ಅರಸನೊಬ್ಬನ ಇತಿವೃತ್ತವನ್ನು ಹೇಳುವ ಎರಡೂ ರೀತಿಯ ಚರಿತ್ರೆಗಳನ್ನು ಗುರುತಿಸಬಹುದು. ಇಡೀ ಸಮುದಾಯದ ಸ್ಥಿತಿಗತಿಗಳನ್ನು ಅದರ ಏಳುಬೀಳುಗಳ ಇತಿವೃತ್ತವನ್ನು ತಿಳಿಸುವ 'ಇತಿಹಾಸವೇ ಪರಿಮಿತಿಗೊಂಡು' ಚರಿತ್ರೆಗಳಾದವು"[೨] ಎಂದು ಆರ್. ಶೇಷಶಾಸ್ತ್ರಿಯವರು ಇತಿಹಾಸ ಮತ್ತು ಚರಿತ್ರೆಗಳ ಅಂತಃಸ್ಸಂಬಂಧವನ್ನು ಕುರಿತು ಶೋಧಿಸಿರುವುದು ಸೂಕ್ತವಾಗಿದೆ.

ಇತಿಹಾಸವೆಂದರೆ ಗತಕಾಲದ ಘಟನೆ ಮತ್ತು ಅವುಗಳ ದಾಖಲೆ ಎಂಬ ಮಾತಿದೆ. ಆದರೆ ಈ ಗತಕಾಲದ ಘಟನೆಗಳಿಗೆ ಸಾಹಿತ್ಯವು ಜೀವ ತುಂಬುತ್ತ ಒಂದೇ ನಾಣ್ಯದ

ಎರಡು ಮುಖಗಳಾಗಿವೆ. ಅಂದರೆ 'ಸಾಹಿತ್ಯ' ಬಿಟ್ಟು ಚರಿತ್ರೆಯಿಲ್ಲ 'ಚರಿತ್ರೆ' ಬಿಟ್ಟು ಸಾಹಿತ್ಯವಿಲ್ಲ' ಎನ್ನುವಷ್ಟರ ಮಟ್ಟಕ್ಕೆ ಅವುಗಳ ಅವಿನಾಭಾವ ಸಂಬಂಧವಿದೆ. ಯಾಕೆಂದರೆ, ಗತಿಸಿ ಹೋದ ಘಟನೆಗಳಿಗೆ ಜೀವತುಂಬುವ ಕೆಲಸವನ್ನು ಸಾಹಿತ್ಯ ಮಾಡುತ್ತ ಬಂದಿದೆ. ಮಾಡುತ್ತಲೇ ಇರುತ್ತದೆ. ಹಿಂದಿನ ಘಟನಾವಳಿಗಳು ಇಂದಿನ ವರ್ತಮಾನಕ್ಕೆ ಪ್ರಸ್ತುತವಾಗುವುದೇ ಇಲ್ಲಿನ ವಿಶೇಷ. "ಭೂತಕ್ಕೆ ವರ್ತಮಾನವು ಜೀವ ತುಂಬುತ್ತದೆ. ಸಾಹಿತ್ಯವು ಭೂತದ ಪಾತ್ರಗಳಿಗೆ ಪ್ರಾಣ ಪ್ರತಿಷ್ಠಾಪನೆ ಮಾಡಿದಾಗ ಅವು ಜೀವಂತವಾಗಿ ನಮ್ಮ ಮುಂದೆ ನಿಲ್ಲುತ್ತವೆ. ಸಾಹಿತ್ಯ ಹೀಗೆ ಇತಿಹಾಸಕ್ಕೆ ಪ್ರಾಣದಾನ ಮಾಡದಿದ್ದರೆ ಆ ಭೂತ ಪಾತ್ರಗಳು ಗಾಳಿಯಲ್ಲಿಯೇ ಅಲೆಯುತ್ತಿರುತ್ತವೆ. ಎಂದರೆ ಇತಿಹಾಸ ಬದುಕಬೇಕಾದರೆ ವರ್ತಮಾನದೊಂದಿಗೆ ಮಾತ್ರ."[೩] ಎಂಬ ಮಾತು ಸತ್ಯವಾಗಿದೆ. ಇತಿಹಾಸದ ವಸ್ತು ಸೃಜನಶೀಲ ಲೇಖಕನಿಗೆ ಸಾರ್ವತ್ರಿಕ ವಸ್ತುವಾಗಿ ಪರಿಣಮಿಸಿ, ಇತಿಹಾಸವು ವರ್ತಮಾನದ ಸಾಹಿತ್ಯದೊಂದಿಗೆ ಜೀವಂತಿಕೆಯನ್ನು ಪಡೆಯಲು ಸಾಧ್ಯವಾಗುತ್ತದೆ.

ಒಂದು ರೀತಿಯಲ್ಲಿ ಇತಿಹಾಸವು ಸಮಕಾಲೀನ ಚರಿತ್ರೆಯೇ ಆಗಿದ್ದು. ನಮ್ಮ ಭಾರತೀಯ ಸಾಂಸ್ಕೃತಿಕ ಪರಂಪರೆಯಲ್ಲಿ ಅದು ಸ್ಪಷ್ಟವಾಗಿ ಗೋಚರಿಸುತ್ತ ಬಂದಿರುವುದನ್ನು ಕಾಣಬಹುದಾಗಿದೆ. ಇತರೇ ಸಾಹಿತ್ಯಾದಿ ಕಲೆಗಳಲ್ಲಿ ಇದು ಮೈದಳೆದಿರುವುದನ್ನು ಕಾಣುತ್ತೇವೆ. "ಪುರಾತನ ಇತಿಹಾಸದ ಬರವಣಿಗೆಗಳೆಲ್ಲಾ ಸಾಹಿತ್ಯ ರೂಪದಲ್ಲಿಯೇ ಇವೆ. ಪುರಾಣ, ಐತಿಹ್ಯ ಮೊದಲಾದ ಪ್ರಾಚೀನ ಕೃತಿಗಳು ಕಾವ್ಯಾಂಶ ಮತ್ತು ಚಾರಿತ್ರಿಕಾಂಶ ಎರಡನ್ನೂ ಒಳಗೊಂಡಿವೆ. ಕಡೆಗೆ ಇವು ಕಾಲ್ಪನಿಕ ಕತೆಗಳಾಗಿ ಪರಿಣಮಿಸಿ ಕಾಲ ದೇಶಾನುಕ್ರಮದ ಯಾವ ದಾಖಲೆಗಳನ್ನು ಸರಿಯಾಗಿ ತಿಳಿಸದ ಕಾರಣ ಇವುಗಳನ್ನು ಇತಿಹಾಸಗಳೆಂದು ನಂಬಲು ಹಿಂಜರಿಯುತ್ತೇವೆ. ಒಂದು ರೀತಿಯಲ್ಲಿ ಜಗತ್ತಿನ ಧಾರ್ಮಿಕ ಸಾಹಿತ್ಯವೆಲ್ಲ ತಕ್ಕಮಟ್ಟಿಗೆ ಇಂತದೇ ಇತಿಹಾಸವಾಗಿದೆ"[೪] ಎಂಬ ಹೇಳಿಕೆಯ ಮಾತುಗಳಿಗೆ ಪೂರಕವಾಗಿದೆ.

"ಪಾಶ್ಚಾತ್ಯರ ಇತಿಹಾಸ ಕಲ್ಪನೆ, ವಾಸ್ತದ ಮತ್ತು ನಿಖರವಾದ ಅಂಕಿಅಂಶಗಳಿಂದ ಕೂಡಿದ್ದು, ಕಲ್ಪನಾ ರಹಿತವಾಗಿದ್ದರೆ, ಭಾರತೀಯ ಇತಿಹಾಸ ಕಲ್ಪನೆ ಗತಿಸಿಹೋದ ಘಟನೆಗಳನ್ನು, ಬದುಕಿ ಬಾಳಿದ ವ್ಯಕ್ತಿಗಳನ್ನು ಕೇವಲ ಘಟನೆ, ವ್ಯಕ್ತಿಗಳನ್ನಾಗಿ ನೋಡದೇ ಅವುಗಳ ಹಿಂದಿನ ಮೌಲ್ಯಗಳಾಗಿ ಗುರುತಿಸಿ, ಅವುಗಳನ್ನು ಅವರುಗಳನ್ನು ವಸ್ತುಸ್ಥಿತಿಗಿಂತಲೂ ಭಿನ್ನವಾದ ಸ್ತರದಲ್ಲಿರಿಸಿ, ಅದನ್ನು ಕಥಾರೂಪದಲ್ಲಿ ಸಾಂಕೇತಿಕವಾದ ರೀತಿಯಲ್ಲಿ ಹೇಳುವ ಧೋರಣೆಯಿಂದ ಕೂಡಿದ್ದಾಗಿದೆ. ಈ ಪ್ರವೃತ್ತಿಯೇ ಹಲವಾರು ಪುರಾಣಗಳ ಸೃಷ್ಟಿಗೂ ಕಾರಣವಾಗಿರಬಹುದು. ಮೇಲೆ ತಿಳಿಸಿದ ಎರಡೂ ಭಿನ್ನ 'ಇತಿಹಾಸ' ನಿರೂಪಣಾ ವಿಧಾನ, ನಿರ್ಮಾಣ ಮಾರ್ಗಗಳು ಬೇರೆ ಬೇರೆಯಾಗಿದ್ದರೂ ಅವುಗಳ ಹಿಂದೆ ಗತಜೀವನದ

ವಿಮರ್ಶೆಯೇ ಮುಖ್ಯವಾದ ಸಾಮ್ಯ ಅಂಶಗಳು."[೫] ಎಂಬುದಂತೂ ಸತ್ಯವಾಗಿದೆ. ಯಾಕೆಂದರೆ ಗತಿಸಿಹೋದ ಯಾವುದೇ ಒಂದು ಘಟನೆ ಮತ್ತು ವ್ಯಕ್ತಿ ನಮ್ಮ ಭಾರತೀಯ ಪರಂಪರೆಯಲ್ಲಿ ಒಂದು ಮೌಲ್ಯ ಅಥವಾ ಆದರ್ಶ ವ್ಯಕ್ತಿಯಂತೆ ಕಾಣಲಾಗಿದೆ. ಇದಕ್ಕೆ ಸಾಹಿತ್ಯವೇ ಕಾರಣವಾಗಿದೆ.

ಅದೇನೆ ಇರಲಿ, ಕನ್ನಡ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣಗಳ ಒತ್ತಾಸೆಯಿಂದ ನಡೆಯುವ ತಲಸ್ಪರ್ಶ ಸಂಶೋಧನ ಅಧ್ಯಯನಗಳಿಗೆ ಇತ್ತೀಚಿನ ದಿನಗಳಲ್ಲಿ ಹೆಚ್ಚಿನ ಮಹತ್ವ ಪ್ರಾಪ್ತಿಯಾಗಿರುವುದಂತೂ ಉತ್ತಮ ಬೆಳವಣಿಗೆ ಎಂದೇ ಹೇಳಬೇಕು. ಇನ್ನು, "ಸಾಹಿತ್ಯವೆಂದರೆ ಸಾಮಾನ್ಯವಾಗಿ 'ಕಲ್ಪನಾ ಪ್ರಧಾನ'ವಾದ ರಚನೆ ಎಂದೂ ಹೇಳುತ್ತಾರೆ. ಸಾಹಿತ್ಯವು ಹಿಂದೆ ಬಾಯಿಂದ ಬಾಯಿಗೆ ಹರಿಯುವ ಜಾನಪದ ರೂಪದಲ್ಲಿದ್ದು ಈಗ ಬರೆಹಕ್ಕೆ ಇಳಿಸಲ್ಪಟ್ಟಿದೆ. ಸಾಹಿತ್ಯವು ಛಂದೋಬದ್ಧವಾಗಿಯೂ ಮತ್ತು ಗದ್ಯ ಅಥವಾ ನಾಟಕ ರೂಪದಲ್ಲೂ ಇರುತ್ತದೆ. ಭಾಷೆಯೊಂದರಲ್ಲಿ ರಚನೆಯಾದ ಎಲ್ಲ ಕೃತಿಗಳ ಮೊತ್ತಕ್ಕೆ ಇಂಗ್ಲಿಷಿನಲ್ಲಿ literature ಎಂಬ ಪದ ಬಳಕೆಯಾಗುತ್ತದೆ. ಹಾಗಾದರೆ ಸಾಹಿತ್ಯ ಎಂದರೇನು? ಅದನ್ನು ಪತ್ತೆಹಚ್ಚುವ ಕಾರ್ಯ ಅನಗತ್ಯ. ಯಾಕೆಂದರೆ ಯಾವುದೇ ಜನಾಂಗ ತನ್ನ ಭಾಷೆಯಲ್ಲಿ ಯಾವುದು ಸಾಹಿತ್ಯ ಯಾವುದು ಅಲ್ಲ ಎಂಬದನ್ನು ತನ್ನ ಸಂಸ್ಕೃತಿಗೆ ಅನುಗುಣವಾಗಿ ಗುರುತಿಸುತ್ತದೆ. ಅಕ್ಷರವಾದುದ್ದು ಸಾಹಿತ್ಯ ಎಂಬ ಮಾತಿದೆ. ಸಾಹಿತ್ಯವೆಂದರೆ ಸಾಂಪ್ರದಾಯಿಕ ಮೌಲ್ಯಗಳನ್ನು ಸಂರಕ್ಷಿಸಿ ಮುಂದಿನ ಕಾಲಕ್ಕೆ ಸಾಗಿಸುವ ಶಕ್ತಿಶಾಲಿ ಮಾಧ್ಯಮವೆಂದು ಪರಿಗಣಿಸಲಾಗಿದೆ."[೬] ಈ ಹಿನ್ನೆಲೆಯಲ್ಲಿ ಭಾರತೀಯ ಸಾಹಿತ್ಯ ಪಾರಂಪರಿಕವಾಗಿ ತನ್ನ ಜೀವಂತಿಕೆಯನ್ನು ಉಳಿಸಿಕೊಂಡು ಬಂದಿದೆ. ಇದು ಕನ್ನಡ ಸಾಹಿತ್ಯಕ್ಕೂ ಅನ್ವಯಿಸುವ ಮಾತಾಗಿದೆ.

"ಇತಿಹಾಸದಲ್ಲಿ ತಾತ್ವಿಕ ವಿಚಾರಗಳು ಹೇಗೆ ಚಿಂತನೆಗೆ ಅನಿವಾರ್ಯವಾಗಿ ಒಳಗಾಗುತ್ತವೋ ಹಾಗೆಯೇ ಸಾಹಿತ್ಯದಲ್ಲೂ ಕೂಡ ತಾತ್ವಿಕ ವಿಚಾರಗಳು ಚಿಂತನೆಗೆ ಒಳಪಡುತ್ತವೆ. ಸಾಹಿತ್ಯಕ್ಕೂ ಸಮಾಜಕ್ಕೂ ಹೇಗೆ ಸಂಬಂಧವುಂಟೋ ಹಾಗೆಯೇ ಇತಿಹಾಸಕ್ಕೂ ಸಾಹಿತ್ಯಕ್ಕೂ ಸಂಬಂಧವಿದೆ. ಒಟ್ಟಿನಲ್ಲಿ ಘಟನೆಗಳನ್ನು ಅತಿ ನಿಖರವಾಗಿ ಇತಿಹಾಸ ದಾಖಲಿಸಿದರೆ, ಸಾಹಿತ್ಯ ಅದನ್ನು ರಮ್ಯ ಕತೆಕಟ್ಟಿ ಅಭಿನಯಿಸಿ ತೋರಿಸುತ್ತದೆ."[೭] ಇತ್ತೀಚೆಗಂತೂ ಅನೇಕ ಲೇಖಕರು ಚಾರಿತ್ರಿಕ ವಸ್ತುವನ್ನು ವಿಭಿನ್ನ ದೃಷ್ಟಿಕೋನಗಳಿಂದ ಕಂಡು ಅದನ್ನು ಶೋಧಿಸುವ ಕಾರ್ಯದಲ್ಲಿ ಮಗ್ನರಾಗಿರುವುದನ್ನು ನೋಡುತ್ತೇವೆ. ಆ ನಿಟ್ಟಿನಲ್ಲಿ ತಮ್ಮದೇ ಆದ ಸಂವೇದನಾಶೀಲ ಅಭಿವ್ಯಕ್ತಿ ಮಾಧ್ಯಮವನ್ನು ಕಂಡುಕೊಂಡಿದ್ದಾರೆ. ಆ ಮೂಲಕ ಚರಿತ್ರೆಯನ್ನು ಜೀವಂತವಾಗಿಡಲು ಯತ್ನಿಸುತ್ತಿದ್ದಾರೆ.

ಆಧುನಿಕ ಕನ್ನಡ ಸಾಹಿತ್ಯದ ಪ್ರಕಾರಗಳಾದ ಕಾವ್ಯ, ಸಣ್ಣಕತೆ, ನಾಟಕಗಳಂಥ ವಿವಿಧ ಸಾಹಿತ್ಯ, ಮಾಧ್ಯಮಗಳಂತೆ ಕಾದಂಬರಿ ಸಾಹಿತ್ಯದ ಮೇಲೂ ಚರಿತ್ರೆಯ ಪ್ರಭಾವ ದಟ್ಟವಾಗಿರುವುದನ್ನು ಕಾಣುತ್ತೇವೆ. ಇಂದು ಕಾದಂಬರಿ ಅದು ಯಾವ ಸಾಹಿತ್ಯಕ್ಕೂ ಕಡಿಮೆ ಇಲ್ಲದಂತೆ ಬೆಳೆದಿದೆ. ಇದು ಕೂಡ ಪಾಶ್ಚಾತ್ಯರ ಕೊಡುಗೆ ಎಂಬುದು ನಿರ್ವಿವಾದ. "ಕಾದಂಬರಿ ಕನ್ನಡದ ಹೆಣ್ಣಲ್ಲ: ಕಡಲಾಚೆಯ ಕನ್ಯೆ" ಆದರೆ ಈ ಹೆಣ್ಣುಮಗಳು ತನ್ನ ವಿದೇಶಿ ವೇಷಭೂಷಣಗಳನ್ನು ಕಳಚಿ ಕನ್ನಡದ ಮನೆಗೆ ಹಿರಿಯ ಸೊಸೆಯಾಗಿ ಬಂದಾಗ, ಅವಳು ನಮ್ಮ ಮನೆಯವಳೇ ಆದಳು. ಸ್ವಾರಸ್ಯದ ಸಂಗತಿ ಎಂದರೆ, ತನ್ನ ಅಂತರಂಗ ಬಹಿರಂಗಗಳಲ್ಲಿ ಇಂಗ್ಲಿಷ್ 'ನಾವೆಲ'ನ್ನೇ ಹೋಲುವ ಈ ಸಾಹಿತ್ಯ ಪ್ರಕಾರ ಸಂಸ್ಕೃತದ ಮಹಾಕವಿ ಬಾಣಭಟ್ಟನು ಬರೆದ 'ಕಾದಂಬರಿ' ಎಂಬ ಗದ್ಯ ಕಾವ್ಯದ ಹೆಸರು ಹೊತ್ತು ಮೆರೆದುದು"[೮] ಹೆಮ್ಮೆಯ ಸಂಗತಿ. ಸಾಮಾಜಿಕ, ಐತಿಹಾಸಿಕ, ಪೌರಾಣಿಕ ಹಾಗೂ ಮನೋವೈಜ್ಞಾನಿಕಗಳಂಥ ವಿವಿಧ ವಸ್ತುವೈವಿಧ್ಯತೆಯಿಂದ ಕೂಡಿದ ಕಾದಂಬರಿಗಳ ರಾಶಿಯೇ ಇಂದು ಕನ್ನಡದಲ್ಲಿ ತುಂಬಿಕೊಂಡಿದೆ.

ಐತಿಹಾಸಿಕ ವಸ್ತುವನ್ನು ಆಧರಿಸಿ ಬರೆಯುವ ಲೇಖಕನು ಹಲವು ರೀತಿಯ ಆತಂಕಗಳನ್ನು ಎದುರಿಸಬೇಕಾಗುತ್ತದೆ ಎಂಬ ಮಾತಿದೆ. ಇದು ಸತ್ಯವೂ ಕೂಡ. ಯಾಕೆಂದರೆ, ಸಾಮಾಜಿಕ ಕಾದಂಬರಿಕಾರನಿಗಿಂತಲೂ ಐತಿಹಾಸಿಕ ಕಾದಂಬರಿಕಾರನಿಗೆ ಹೆಚ್ಚಿನ ಜವಾಬ್ದಾರಿ ಇರಬೇಕಾಗುತ್ತದೆ. ಅಂದರೆ ಈ "ಕಾದಂಬರಿಕಾರನು ತಾನು ಬಳಸಿಕೊಳ್ಳುವ ಇತಿಹಾಸಕ್ಕೆ ಪೂರ್ಣ ಪ್ರಮಾಣದಲ್ಲಿ ನಿಷ್ಠೆಯುಳ್ಳವನಾಗಿರಬೇಕು ಎಂಬ ಅಭಿಪ್ರಾಯವಿದೆ. ಸಾಹಿತಿಯು ಇತಿಹಾಸಕ್ಕೆ ನಿಷ್ಠಾವಂತನಾಗಿ ತನ್ನ ಕೃತಿಯಲ್ಲಿ ಘಟನೆಗಳನ್ನು ದಾಖಲಿಸುತ್ತಾ ಹೋಗಬಹುದು. ಆಗ ಅವನು ನಿರ್ಮಿಸುವ ಕೃತಿಯು ಮತ್ತೊಂದು ಚಾರಿತ್ರಿಕ ಕೃತಿಯಾಗಿಬಿಡುವ ಸಂಭವ ಹೆಚ್ಚು. ಹೀಗಾಗಿ ಚಾರಿತ್ರಿಕ ಕಾದಂಬರಿಕಾರನ ಯಶಸ್ಸು ಇತಿಹಾಸದ ಮೂಲ ಆಶಯಕ್ಕೆ ದಕ್ಕೆ ಬಾರದಂತೆ ದುಡಿಸಿಕೊಳ್ಳುವ ಆತನ ಪ್ರತಿಭೆಯನ್ನು ಅವಲಂಬಿಸಿದೆ"[೯] ಎಂಬ ಹೇಳಿಕೆಗೆ ಅನುಸಾರವಾಗಿ ಇತಿಹಾಸವನ್ನು ಆಧರಿಸಿ ಕಾದಂಬರಿ ರಚಿಸುವ ಕಾದಂಬರಿಕಾರನಿಗೆ ವಿಶೇಷ ರೀತಿಯ ಯೋಗ್ಯತೆಗಳು ಇರಬೇಕಾಗುತ್ತದೆ.

"ಕನ್ನಡದ ಪ್ರಥಮ ಕಾದಂಬರಿ ೧೮೪೬–೪೭ರಲ್ಲಿ ಪ್ರಕಟವಾದರೂ, ೧೮೨೩ರಲ್ಲಿ ಬರೆದ ಕೆಂಪುನಾರಾಯಣನ 'ಮುದ್ರಾಮಂಜೂಷ'ವೆಂಬ ಹಳೆಗನ್ನಡ ಗ್ರಂಥವೇ ಐತಿಹಾಸಿಕ ಕಾದಂಬರಿಯನ್ನು ಸ್ಥೂಲವಾಗಿ ಹೋಲುವ ಪ್ರಥಮ ಕನ್ನಡ ಗ್ರಂಥವೆನ್ನಬಹುದು. ಇದನ್ನು ಕವಿಯು ೧೭೯೪–೧೮೬೮ರ ವರೆಗೆ ಇದ್ದ ಮೈಸೂರಿನ ಮುಮ್ಮಡಿ ಕೃಷ್ಣರಾಜನ ಆಶ್ರಯದಲ್ಲಿ ರಚಿಸಿದನು. ವಿಶಾಖದತ್ತನ ಸಂಸ್ಕೃತ ನಾಟಕ 'ಮುದ್ರಾರಾಕ್ಷಸ' ಇದಕ್ಕೆ ಅಧಾರವಾದರೂ,

ಇದು ಒಂದು ಸ್ವತಂತ್ರ ಗದ್ಯ ಗ್ರಂಥವೆನ್ನಿಸಿಕೊಳ್ಳುವ ಯೋಗ್ಯತೆ ಪಡೆದಿದೆ"[೧೦] ಎಂದು ರಂ.ಶ್ರೀ. ಮುಗುಳಿಯವರು ಕನ್ನಡದ ಐತಿಹಾಸಿಕ ಕಾದಂಬರಿಗಳ ರಚನೆಯ ಇತಿಹಾಸವನ್ನು ಗುರುತಿಸಿದ್ದು ಸೂಕ್ತವಾಗಿದೆ. ಇದಾದ ನಂತರ ನಾಲ್ಕೈದು ದಶಕಗಳವರೆಗೆ ಕನ್ನಡದಲ್ಲಿ ಹೇಳಿಕೊಳ್ಳುವಂಥ ರಚನೆಗಳಲ್ಲಿ ಕಂಡು ಬರದೇ ಇರುವ ಕೊರತೆಯನ್ನು ಮುಂದೆ ಬಿ.ವೆಂಕಟಾಚಾರ್ಯ ಹಾಗೂ ಗಳಗನಾಥರು ಬಂಗಾಳಿ ಮತ್ತು ಮರಾಠಿ ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸುವುದರ ಮೂಲಕ ತುಂಬಿದರೆಂಬುದು ಗಮನಿಸಬೇಕಾದ ಸಂಗತಿಯಾಗಿದೆ. ೧೯೧೩ರಲ್ಲಿ ಪ್ರಕಟವಾದ ಗಳಗನಾಥರ 'ಕುಮುದಿನಿ' ಅಥವಾ 'ಬಾಲಕ್ಕೆ ಬಡಿದಾಟ' ಎಂಬ ಕಾದಂಬರಿಯೇ ಕನ್ನಡದ ಮೊಟ್ಟ ಮೊದಲ ಐತಿಹಾಸಿಕ ಸ್ವತಂತ್ರ ಕಾದಂಬರಿ ಎಂದು ಹೇಳಬಹುದು.

ನವೋದಯ ಕಾಲದಲ್ಲಿಯೇ ಐತಿಹಾಸಿಕ ಕಾದಂಬರಿಗಳ ರಚನೆ ಆರಂಭವಾಯಿತೆಂಬುದನ್ನು ಯಾರು ಅಲ್ಲಗೆಳೆಯುವಂತಿಲ್ಲ. ಇದಕ್ಕೆ ಆ ಕಾಲದ ಸನ್ನಿವೇಶ ಸಂದರ್ಭಗಳು ಕಾರಣವಾಗಿರಲು ಸಾಕು. ದೇವುಡು, ಬೆಟಗೇರಿ ಕೃಷ್ಣಶರ್ಮ, ಮಾಸ್ತಿವೆಂಕಟೇಶ ಅಯ್ಯಂಗಾರ್, ಜಿ.ವಿ.ಅಯ್ಯರ್, ಜಿ. ಪುಟ್ಟಸ್ವಾಮಯ್ಯ ಈ ಮುಂತಾದ ಕಾದಂಬರಿಕಾರರು ಈ ಕಾಲಘಟ್ಟದಲ್ಲಿ ಐತಿಹಾಸಿಕ ಕಾದಂಬರಿಗಳನ್ನು ರಚಿಸಿದ್ದು ಕಂಡುಬರುತ್ತದೆ.

ಈ ಮೊದಲು ಕನ್ನಡನಾಡಿನ ಇತಿಹಾಸವನ್ನು ದಕ್ಷಿಣ ಭಾರತದ ಇತಿಹಾಸವೆಂದೇ ಕರೆಯಲ್ಪಡುತ್ತಿತ್ತು. ಕನ್ನಡನಾಡಿನ ಅರಸು ಮನೆತನಗಳಾದ ಕದಂಬರು, ಚಾಲುಕ್ಯರು ಹಾಗೂ ರಾಷ್ಟ್ರಕೂಟರ ಆಳ್ವಿಕೆಯ ಇತಿಹಾಸವೇ ಇದಕ್ಕೆ ಸಾಕ್ಷಿಯಾಗಿದೆ. "ಅಸೇತು-ವಿಂಧ್ಯಗಿರಿಯವರೆಗೆ ಪೂರ್ವ-ಪಶ್ಚಿಮ ಸಮುದ್ರಗಳನ್ನು ಒಳಗೊಂಡಿರುವ ಎಲ್ಲ ಪ್ರದೇಶವು ಇತಿಹಾಸದ ಒಂದಲ್ಲ ಒಂದು ಕಾಲಕ್ಕೆ ಕನ್ನಡಿಗರ ಶೌರ್ಯ, ಸಾಹಸಗಳ ಆಡುಂಬೊಲವಾಗಿತ್ತು. ಕನ್ನಡ ರಾಜೇಶ್ವರಿಯ ವಿಹಾರ ಕ್ಷೇತ್ರವಾಗಿತ್ತು. ಒಂದಾನೊಂದು ಕಾಲದಲ್ಲಿ ಪಶ್ಚಿಮದಲ್ಲಿ ಗುಜರಾತು, ಉತ್ತರದಲ್ಲಿ ನೇಪಾಳ, ಪೂರ್ವದಲ್ಲಿ ಬಂಗಾಳದವರೆಗೂ ಕನ್ನಡಿಗರ ಕೀರ್ತಿಪತಾಕೆ ಮೆರೆದಿತ್ತು ಎಂಬ ಸಂಗತಿ ಉತ್ಪ್ರೇಕ್ಷೆಯದಲ್ಲ."[೧೧] ಆದರಿಂದು ಈ ಪ್ರದೇಶವು ರಾಜಕೀಯ ಕಾರಣಗಳಿಂದಾಗಿ ಕುಗ್ಗಿಹೋಗಿರುವುದು ಕೂಡ ಅಷ್ಟೇ ಸತ್ಯವಾಗಿದೆ ಎಂದು ಹೇಳಬಹುದು. ಈ ಮೇಲಿನ ಉಲ್ಲೇಖದ ಉದ್ದೇಶವಿಷ್ಟೆ. ಸುಮಾರು ಆರನೆಯ ಶತಮಾನದಿಂದ ಹದಿನಾಲ್ಕನೆಯ ಶತಮಾನದವರೆಗಿನ ಕಾಲಾವದಿಯನ್ನು ಕರ್ನಾಟಕ ಸಾಮ್ರಾಜ್ಯದ ಕಾಲವೆಂದೇ ಪ್ರಸಿದ್ಧಿ ಪಡೆದಿದೆ. ಜೊತೆಗೆ ಆಳ್ವಿಕೆ ನಡೆಸಿದ ಇತಿಹಾಸದರಸರ ಬದುಕು, ಹೋರಾಟ, ಆಡಳಿತ ಇತ್ಯಾದಿ ಸಂಗತಿಗಳು ನಮ್ಮ ಕಾದಂಬರಿಕಾರರಿಗೆ ವಸ್ತುವಾಗಿ ಕಂಡಿದ್ದು ಪ್ರಮುಖ ಪ್ರಮುಖ ಅಂಶವೆನ್ನಬಹುದು.

ಉದಾಹರಣೆಗೆ, ಕದಂಬರಲ್ಲಿ ಮಯೂರವರ್ಮನು ಒಬ್ಬ ಪ್ರಸಿದ್ಧ ದೊರೆ. ಈ ದೊರೆಯ ಬದುಕಿನಲ್ಲಿ ನಡೆದ ಹಲ–ಕೆಲವು ಘಟನೆಗಳನ್ನು ಆಧರಿಸಿ ದೇವುಡು ಅವರು ಒಂದು ಪ್ರಸಿದ್ಧ ಕಾದಂಬರಿಯನ್ನು ರಚಿಸಿದರು. ಅದರ ಹೆಸರೇ 'ಮಯೂರ'. "ಮಯೂರವರ್ಮನು ವೇದಾಧ್ಯಯನವನ್ನು ಸಂಪೂರ್ಣಗೊಳಿಸುವುದಕ್ಕಾಗಿ ತನ್ನ ಗುರುವಿನೊಡನೆ ಪಲ್ಲವರ ರಾಜಧಾನಿಯಾದ ಕಾಂಚೀ ಪಟ್ಟಣಕ್ಕೆ ಹೋದನು. ಅಲ್ಲಿ ಪಲ್ಲವ ರಾಜಕುಮಾರಿಯ ಗುರುವಿಗೂ ಈತನಿಗೂ ಬಲವತ್ತರವಾದ ಜಗಳವುಂಟಾಯಿತು. ಇದರಿಂದ ಮಯೂರವರ್ಮನಿಗೂ ಪಲ್ಲವರಿಗೂ ಘೋರವಾದ ಯುದ್ಧ ಕೈಗಟ್ಟಿ, ಅದರಲ್ಲಿ ಪಲ್ಲವರು ಸೋತು ಹೋದರು".[೧೨] ಈ ಒಂದು ಚಿಕ್ಕ ಘಟನೆಯ ವಸ್ತುವೇ ದೇವುಡು ಅವರ 'ಮಯೂರ' ಕಾದಂಬರಿಗೆ ಆಧಾರವಾಗಿದೆ, ಅದು ಒಂದು ಉಜ್ವಲ ಐತಿಹಾಸಿಕ ಕಾದಂಬರಿಯಾಗಿ ಹೊರ ಹೊಮ್ಮಿತು. ವಸ್ತು, ಪಾತ್ರ, ಶೈಲಿಗಳ ಹಿನ್ನೆಲೆಯಲ್ಲಿ ಈ ಕಾದಂಬರಿ ಇಂದಿಗೂ ವಿಮರ್ಶಕರ ಮೆಚ್ಚುಗೆಗೆ ಪಾತ್ರವಾಗಿದೆ. "ಕನ್ನಡದಲ್ಲಿ ಬಂದ ಬಹುಸಂಖ್ಯೆಯ ಐತಿಹಾಸಿಕ ಕಾದಂಬರಿಗಳ ಉದ್ದೇಶ ಭಾರತೀಯರ ಮತ್ತು ಕನ್ನಡಿಗರ ಗತವೈಭವವನ್ನು ಪರಿಚಯ ಮಾಡಿಕೊಡುವುದು: ಕಾದಂಬರಿಕಾರರ ನಾಡಿನ ಹಿರಿಮೆಯ ಸಂಕೇತಗಳಾದ ನೃಪತುಂಗ, ಕೃಷ್ಣದೇವರಾಯ, ವಿದ್ಯಾರಣ್ಯ, ಬಸವೇಶ್ವರ, ಅತ್ತಿಮಬ್ಬೆ ಇಂತಹ ಹಿರಿಯ ಚೇತನಗಳನ್ನು ಕೇಂದ್ರ ಪಾತ್ರಗಳನ್ನಾಗಿ ಆರಿಸಿಕೊಂಡರು. ದೇಶದ ಜನ ಓಡ ನಿದ್ರೆಯಿಂದ ಎದ್ದು ಸ್ವಾತಂತ್ರದ ಯೋಧರಾಗುವಂತೆ ಎಚ್ಚರಿಸುವ ಗುರಿ ಬಹುಮಂದಿ ಕಾದಂಬರಿಕಾರರದು".[೧೩]

ದೇವುಡು ಅವರಂತೆ ಪ್ರಗತಿಶೀಲ ಪಂಥದಲ್ಲಿ ಐತಿಹಾಸಿಕ ಕಾದಂಬರಿಗಳನ್ನು ರಚಿಸಿದವರಲ್ಲಿ ಅ.ನ.ಕೃಷ್ಣರಾಯರು, ತ.ರಾ.ಸು., ನಿರಂಜನ, ಮಿರ್ಜಿ ಅಣ್ಣಾರಾಯ, ಬಸವರಾಜ ಕಟ್ಟೀಮನಿಯಂಥವರ ಹೆಸರುಗಳು ಪ್ರಮುಖವಾದವು. ವಿಜಯನಗರದ ಇತಿಹಾಸದಡಿಯಲ್ಲಿ ಅ.ನ.ಕೃಷ್ಣರಾಯರು ಒಟ್ಟು ಹತ್ತು ಕಾದಂಬರಿಗಳನ್ನು ರಚಿಸಿದ್ದಾರೆ. ಇವರ ಮಾರ್ಗದಲ್ಲಿಯೇ ಬೆಳೆದ ತ.ರಾ.ಸುಬ್ಬರಾಯರು ಕರ್ನಾಟಕದ ಅರಸುಮನೆತನಗಳು ಮತ್ತು ಚಿತ್ರದುರ್ಗದ ಇತಿಹಾಸವನ್ನು ಆಧರಿಸಿ ಒಟ್ಟು ಹದಿಮೂರು ಕಾದಂಬರಿಗಳನ್ನು ಬರೆದಿದ್ದಾರೆ. ಈ ಕಾಲದಲ್ಲಿ ಬಂದ ನಿರಂಜನರ 'ಕಲ್ಯಾಣ ಸ್ವಾಮಿ' ಹಾಗೂ 'ಸ್ವಾಮಿ ಅಪರಾಂಪರ' ಎಂಬ ಕಾದಂಬರಿಗಳೂ ಮುಖ್ಯವಾದವು. ಇವು ಕೊಡಗಿನ ಇತಿಹಾಸವನ್ನು ಮರುಕಟ್ಟಿಕೊಡುವ ಸಾಮರ್ಥ್ಯ ಹೊಂದಿವೆ. ಹಾಗೆಯೆ ಅವರ 'ಚಿರಸ್ಮರಣೆ'ಯು ಬ್ರಿಟೀಷರು ಮತ್ತು ಜಮೀನ್ದಾರರ ವಿರುದ್ಧ ಕೈಯೂರಿನ ಜನರು ನಡೆಸಿದ ಹೋರಾಟದ ಬದುಕನ್ನು ಚಿತ್ರಿಸುತ್ತದೆ. ಜೊತೆಗೆ ಮಿರ್ಜಿ ಅಣ್ಣಾರಾಯರ 'ರಾಷ್ಟ್ರಪುರುಷ', ಬಸವರಾಜ ಕಟ್ಟೀಮನಿಯವರ 'ಸ್ವಾತಂತ್ರ್ಯದೆಡೆಗೆ' ಮತ್ತು 'ಮಾಡಿಮಡಿದವರು', ಅನಕೃ ಅವರ 'ಅಮರ ಅಗಸ್ಟು' ಈ ಮುಂತಾದ ಕಾದಂಬರಿಗಳು ಐತಿಹಾಸಿಕ ಹಿನ್ನೆಲೆಯಾದ ಗಮನ ಸೆಳೆಯುವಂಥವಾಗಿವೆ.

ಐತಿಹಾಸಿಕ ಕಾದಂಬರಿಕಾರರಲ್ಲಿ ತ.ರಾ.ಸುಬ್ಬರಾಯರಿಗೆ ಅವರದೇ ಆದ ವಿಶೇಷ ಸ್ಥಾನಮಾನವಿದೆ. ಅವರು ಆರಂಭದಲ್ಲಿ ಅ.ನ.ಕೃ.ರವರ ಪ್ರಭಾವದಲ್ಲಿ ಬೆಳೆದರೂ ನಂತರದಲ್ಲಿ ತಮ್ಮದೇ ಬರೆಹದ ವಸ್ತು ವೈವಿಧ್ಯತೆಗಳಿಂದ ವಿಶೇಷ ಶೈಲಿಯನ್ನು ಕಂಡುಕೊಂಡವರು. ಮೊದಲು ಉಲ್ಲೇಖಿಸಿದಂತೆ ತ.ರಾ.ಸು. ಅವರು ಒಟ್ಟು ಹದಿಮೂರು ಐತಿಹಾಸಿಕ ಕಾದಂಬರಿಗಳನ್ನು ರಚಿಸಿದ್ದಾರೆ. ಕನ್ನಡದ ಅರಸು ಮನೆತನಗಳಲ್ಲಿ ಒಂದಾದ ರಾಷ್ಟ್ರಕೂಟರ ಪ್ರಸಿದ್ಧ ದೊರೆ ಅಮೋಘವರ್ಷ 'ನೃಪತುಂಗ'ನ ಬದುಕನ್ನು ಆಧರಿಸಿ ಬರೆದ ಅವರ 'ನೃಪತುಂಗ' ಎಂಬ ಕಾದಂಬರಿಯೇ ಅವರ ಮೊಟ್ಟಮೊದಲ ಐತಿಹಾಸಿಕ ಕಾದಂಬರಿಯಾಗಿದೆ. ಇದು ಇತಿಹಾಸದ ದೃಷ್ಟಿಯಿಂದ ಓದುಗರ ಆಸಕ್ತಿಯನ್ನು ಕೆರಳಿಸುವಂತಹ ಕಾದಂಬರಿಯಾಗಿದೆ.

ನೃಪತುಂಗದೊಂದಿಗೆ ಸಿಡಿಲಮೊಗ್ಗು, ಕೀರ್ತಿನಾರಾಯಣ, ಶಿಲ್ಪಶ್ರೀ, ಅಗ್ನಿರಥ–ಮುಕ್ತಿಪಥ, ಕಸ್ತೂರಿ ಕಂಕಣ, ಕಂಬನಿಯ ಕುಯಿಲು, ರಾಜ್ಯದಾಹ, ರಕ್ತರಾತ್ರಿ, ಹೊಸ ಹಗಲು, ವಿಜಯೋತ್ಸವ ಹಾಗೂ ತಿರುಗು ಬಾಣ ದುರ್ಗಾಸ್ತಮಾನದಂತಹ ಐತಿಹಾಸಿಕ ಕಾದಂಬರಿಗಳನ್ನು ರಚಿಸುವುದರೊಂದಿಗೆ ತ.ರಾ.ಸು. ಅವರು ಕನ್ನಡದ ಕಾದಂಬರಿ ಕ್ಷೇತ್ರದಲ್ಲಿ ಐತಿಹಾಸಿಕ ಕಾದಂಬರಿಕಾರರಾಗಿ ಪ್ರಸಿದ್ಧಿಯನ್ನು ಪಡೆದಿದ್ದಾರೆ. ಈ ಎಲ್ಲ ಕಾದಂಬರಿಗಳ ಅಧ್ಯಯನವೇ ಇಲ್ಲಿ ವಿಶೇಷವಾಗಿರುವುದರಿಂದ ಅವುಗಳ ವಿಸ್ತೃತವಾದ ಚರ್ಚೆಯನ್ನು ಮುಂದಿನ ಅಧ್ಯಾಯಗಳಲ್ಲಿ ಕೈಗೆತ್ತಿಕೊಳ್ಳಲಾಗಿದೆ. ಇದು ಸಾಹಿತ್ಯ ಮತ್ತು ಚರಿತ್ರೆಯ ಅಂತಸ್ಸಂಬಂಧದ ಕೇವಲ ಕಿರುನೋಟ ಮಾತ್ರವಾಗಿದೆ.

**ಕೊನೆ ಟಿಪ್ಪಣಿಗಳು**

೧. ಬರಗೂರು ರಾಮಚಂದ್ರಪ್ಪ : ಕನ್ನಡ ಸಾಹಿತ್ಯದಲ್ಲಿ ಮನುಷ್ಯನ ಪರಿಕಲ್ಪನೆ: ಪ್ರಸ್ತಾವನೆ, ೧೯೯೩, ಪುಟ : ೬೦.

೨. ಬರಗೂರು ರಾಮಚಂದ್ರಪ್ಪ (ಸಂ): ಕನ್ನಡ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣ: ೧೯೯೩ ಪುಟ : ೧೮

೩. ಬರಗೂರು ರಾಮಚಂದ್ರಪ್ಪ (ಸಂ): ಕನ್ನಡ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣ: ೧೯೯೩ ಪುಟ : ೧೮

೪. ಶಿವರಾಮಯ್ಯ : ಸಾಹಿತ್ಯ ಮತ್ತು ಚರಿತ್ರೆ : ೧೯೯೩, ಪುಟ: ೩೫

೫. ಬರಗೂರು ರಾಮಚಂದ್ರಪ್ಪ (ಸಂ): ಕನ್ನಡ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣ : ೧೯೯೩, ಪುಟ: ೧೯

೬. ಶಿವರಾಮಯ್ಯ : ಸಾಹಿತ್ಯ ಮತ್ತು ಚರಿತ್ರೆ : ೧೯೯೩, ಪುಟ, ೩೨

೭. ಶಿವರಾಮಯ್ಯ : ಸಾಹಿತ್ಯ ಮತ್ತು ಚರಿತ್ರೆ : ೧೯೯೩, ಪುಟ ೩೬

೮. ಹಾ.ಮಾ.ನಾಯಕ (ಸಂ) : ಚಿನ್ನದ ಗರಿ: ೧೯೭೪, ಪುಟ: ೧೪೪.

೯. ಎಂ.ಎನ್.ಮಹೇಶ : ತ.ರಾ.ಸು. ಸಾಹಿತ್ಯ ಒಂದು ಅಧ್ಯಯನ, ೨೦೦೯, ಪುಟ: ೭೭

೧೦. ಹಾ.ಮಾ.ನಾಯಕ (ಸಂ) : ಚಿನ್ನದ ಗರಿ: ೧೯೭೪, ಪುಟ:೧೨೧.

೧೧. ಹಾ.ಮಾ.ನಾಯಕ (ಸಂ) : ಚಿನ್ನದ ಗರಿ: ೧೯೭೪, ಪುಟ: ೧೨೯.

೧೨. ಹಾ.ಮಾ.ನಾಯಕ (ಸಂ) : ಚಿನ್ನದ ಗರಿ: ೧೯೭೪, ಪುಟ: ೧೩೦.

೧೩. ಎಲ್.ಎಸ್. ಶೇಷಗಿರಿರಾವ್ : ಹೊಸಗನ್ನಡ ಸಾಹಿತ್ಯ : ೧೯೮೮ : ಪುಟ : ೧೯೬.



# ಅಧ್ಯಾಯ: ನಾಲ್ಕು

# ತ.ರಾ.ಸು. ಅವರ ಚಾರಿತ್ರಿಕ ಕಾದಂಬರಿಗಳ ವಿಷಯ ವಸ್ತು

# ಅಧ್ಯಾಯ: ನಾಲ್ಕು
# ತ.ರಾ.ಸು. ಅವರ ಚಾರಿತ್ರಿಕ ಕಾದಂಬರಿಗಳ ವಿಷಯ ವಸ್ತು

ಪ್ರಗತಿಶೀಲ ಸಾಹಿತ್ಯವು ಕನ್ನಡ ಭಾಷೆ ಮತ್ತು ಸಾಹಿತ್ಯದ ಮೇಲೆ ಅಚ್ಚಳಿಯದ ಪ್ರಭಾವ ಬೀರಿದೆ ಎಂಬ ಮಾತಿನಲ್ಲಿ ಯಾವುದೇ ಅನುಮಾನವಿಲ್ಲ. "ಸುಮಾರು ೧೯೪೦ ರಿಂದ ೧೯೫೦ರವರೆಗೆ ಅ.ನ.ಕೃ., ತ.ರಾಸು. ಅರ್ಚಕ ವೆಂಕಟೇಶ, ಕುಮಾರ ವೆಂಕಣ್ಣ, ಬಸವರಾಜ ಕಟ್ಟೀಮನಿ, ಎಸ್. ಅನಂತನಾರಾಯಣ ಮೊದಲಾದವರು ಪ್ರಗತಿಶೀಲ ಆದರ್ಶಗಳನ್ನಿಟ್ಟುಕೊಂಡು ಬರೆದರು ಎನ್ನಬಹುದು. ಯಾರು ಚಳುವಳಿಗೆ ಸೇರಿದ್ದರು ಎಂಬುದು ಅಷ್ಟು ಮುಖ್ಯವಲ್ಲ"[1] ಆದರೆ ಅದನ್ನೆಲ್ಲವನ್ನೂ ಮೀರಿಯೂ ಆ ಕಾಲದಲ್ಲಿ ಸಾಹಿತ್ಯಕವಾಗಿ ಕಾಣಿಸಿಕೊಂಡ ಬದಲಾವಣೆಗಳು ಮುಖ್ಯವಾಗಿವೆ. ಸಾಹಿತ್ಯವು ಸಾಂಪ್ರದಾಯಿಕತೆಯಿಂದ ಬಿಡಿಸಿಕೊಂಡು ವಾಸ್ತವ ಮಾರ್ಗದತ್ತ ವಾಲಿದ್ದೊಂದು ವಿಶೇಷವಾಗಿದೆ.

ಈ ಒಂದು ಹಂತದ ಬರೆಹಗಾರರಲ್ಲಿ ತ.ರಾ.ಸು. ಅವರ ಹೆಸರು ಚಿರಸ್ಥಾಯಿಯಾಗಿ ಉಳಿವಂಥದ್ದಾಗಿದೆ. ಇವರು ಎಲ್ಲ ವಿಧದ ಸಾಹಿತ್ಯದಲ್ಲೂ ಕೃಷಿ ಮಾಡಿದ್ದರೂ ವಿಶೇಷವಾಗಿ ಅವರಿಗೆ ಒಗ್ಗಿದ ಸಾಹಿತ್ಯ ಪ್ರಕಾರವೆಂದರೆ ಕಾದಂಬರಿಯಾಗಿದೆ. ಅದರಲ್ಲೂ ತ.ರಾ.ಸು. ಅವರು ಕೇವಲ ಸಾಮಾಜಿಕ ಕಾದಂಬರಿಗಳನ್ನಷ್ಟೆ ರಚಿಸದೆ, ಐತಿಹಾಸಿಕ ಕಾದಂಬರಿಗಳನ್ನು ರಚಿಸಿ ಇತಿಹಾಸದ ಘಟನೆ ಮತ್ತು ವ್ಯಕ್ತಿಗಳಿಗೆ ಜೀವವನ್ನು ತುಂಬಿದ್ದು ಗಮನಾರ್ಹವಾಗಿದೆ. ಆ ಮೂಲಕ ಅವರು ಕನ್ನಡ ನಾಡು-ನುಡಿಗೆ ಸಲ್ಲಿಸಿದ ಸೇವೆ ಚಿರಸ್ಮರಣೀಯವಾಗಿದೆ. ತ.ರಾ.ಸು. ಅವರು "ಸಮಾಜದ ವಿವಿಧ ಮುಖಗಳ ಅನಾವರಣ ಮಾಡಿದ್ದಲ್ಲದೆ ಪುರಾಣ ಇತಿಹಾಸಗಳ ಆಳಕ್ಕೂ ಇಳಿದು ಶ್ರದ್ಧೆಯಿಂದ ಅಭ್ಯಸಿಸಿ ಅವುಗಳನ್ನು ತಮ್ಮ ಲೇಖನಿಯಿಂದ ಪುನಃ ಸೃಷ್ಟಿಸಿದರು. ಪ್ರಯೋಗಶೀಲತೆ ತ.ರಾ.ಸು. ಅವರ ರಕ್ತಗುಣ. ಅವರ ವಸ್ತು ವೈವಿಧ್ಯವಿರುವಂತೆಯೇ ತಂತ್ರ ವೈವಿಧ್ಯವೂ ಇದೆ. ಓದುಗರನ್ನು ಉಸಿರುಗಟ್ಟಿಸುವಂತಹ ಓಟದಲ್ಲಿ ಕಥೆ ಹೇಳುವ ಕಲೆ ಅವರಿಗೆ ಸಿದ್ಧಿಸಿದೆ"[2] ಎಂಬ ಶಕ್ತಿಯುತವಾದ ಮಾತುಗಳೇ ಇದಕ್ಕೆ ಸಾಕ್ಷಿ ಅವರ ಸಾಮಾಜಿಕ ಕಾದಂಬರಿಗಳಂತೆ ಐತಿಹಾಸಿಕ ಕಾದಂಬರಿಗಳೂ ಯಶಸ್ಸಿನ ಮೆಟ್ಟಿಲೇರಿ. ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅಚ್ಚಳಿಯದೇ ಜೀವಂತನಾಗಿ ಉಳಿದಿವೆ. ಈಗ ತ.ರಾ.ಸು. ಅವರು ಬರೆದ ಒಟ್ಟು ಐತಿಹಾಸಿಕ ಕಾದಂಬರಿಗಳನ್ನು ಅಧ್ಯಯನಕ್ಕೆ ಒಳಗುಪಡಿಸಿ ಅವುಗಳ ವಿಷಯ ವಸ್ತು ಮತ್ತು ವಿಶೇಷತೆಗಳ ವಿವರಣೆಯನ್ನು ಈ ಅಧ್ಯಾಯದಲ್ಲಿ ಕಾಣಬಹುದಾಗಿದೆ.

ತ.ರಾ.ಸು. ಅವರು ಒಟ್ಟು ೧೩ ಐತಿಹಾಸಿಕ ಕಾದಂಬರಿಗಳನ್ನು ರಚಿಸಿದ್ದಾರೆ. ಅವುಗಳನ್ನು ಎರಡು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಅಂದರೆ ಕರ್ನಾಟಕದ ರಾಜಮನೆತನಗಳಿಗೆ ಸಂಬಂಧಿಸಿದ ಕಾದಂಬರಿಗಳು ಹಾಗೂ ಚಿತ್ರದುರ್ಗದ ಪಾಳೆಗಾರರನ್ನು ಕುರಿತಾದ ಕಾದಂಬರಿಗಳು. ಅದೇನಿದ್ದರೂ, ಅವರ ಈ ಎಲ್ಲ ಐತಿಹಾಸಿಕ ಕಾದಂಬರಿಗಳ ವಿಷಯ ವಸ್ತುಗಳ ಕುರಿತು ಅವರ ಕಾದಂಬರಿಗಳ ರಚನಾನುಕ್ರಮದಲ್ಲಿ ಅನುಸರಿಸಲಾಗಿದೆ.

**ನೃಪತುಂಗ :**

ಕನ್ನಡನಾಡಿನ ಸುಪ್ರಸಿದ್ಧ ಅರಸು ಮನೆತನಗಳಲ್ಲಿ ರಾಷ್ಟಕೂಟ ಅರಸು ಮನೆತನವು ಒಂದಾಗಿದೆ. ಈ ಅರಸುಮನೆತನದ ಕೀರ್ತಿವೆತ್ತ ದೊರೆ ಅಮೋಘವರ್ಷ ನೃಪತುಂಗ. ಪ್ರಜಾಹಿತಕ್ಕಾಗಿ ಅಂಗುಲಿದಾನ ಮಾಡಿದ ಚಕ್ರವರ್ತಿ ಎಂಬ ಪ್ರಖ್ಯಾತಿ ಈತನದಾಗಿದೆ. "ಕರ್ನಾಟಕ ಸಾವ್ರಾಜ್ಯ ರವಾರವಣನೂ, ಕನ್ನಡ ಸಾಹಿತ್ಯ, ಸಂಸ್ಕೃತಿಗಳ ಸರ್ವತೋಮುಖವಾದ ಬೆಳವಣಿಗೆಗೆ ಪ್ರೋತ್ಸಾಹವನ್ನು ಕೊಟ್ಟ ಚಕ್ರವರ್ತಿಗಳಲ್ಲಿ ಮೊದಲಿಗನೂ"[೩] ಆದ ರಾಷ್ಟ್ರಕೂಟ ನೃಪತುಂಗ ದೊರೆಯ ಜೀವನ ಕಥೆಯನ್ನು ಆಧರಿಸಿ ೧೯೫೩ರಲ್ಲಿ ಈ ಕಾದಂಬರಿ ರಚನೆಗೊಂಡಿದೆ. ಇದು ಅವರ ಮೊದಲ ಐತಿಹಾಸಿಕ ಕಾದಂಬರಿಯಾಗಿ ಹತ್ತು-ಹಲವು ವಿಶೇಷ ಕಾರಣಗಳಿಂದ ಇದು ತನ್ನ ಜೀವಂತಿಕೆಯನ್ನು ಪಡೆದುಕೊಂಡಿದೆ. "ಚಾರಿತ್ರಿಕ ಘಟನೆಗಳ ಚೌಕಟ್ಟಿನಲ್ಲಿ ಅವುಗಳಿಗೆ ವಿರೋಧವಾಗದಂತೆ ಅನಿವಾರ್ಯವಾದಲ್ಲಿ ಮಾತ್ರ ಅಗತ್ಯವಾದ ಪಾತ್ರ ಸನ್ನಿವೇಶಗಳನ್ನು ಕಲ್ಪಿಸಿಕೊಂಡು, ಕಥಾ ನಾಯಕನ ವ್ಯಕ್ತಿತ್ವವನ್ನು ಆ ವ್ಯಕ್ತಿ ಮಹಿಮೆಗೆ ಕಾರಣವಾದ ಶಕ್ತಿವಿಶೇಷಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಕತೆಯನ್ನು ಬೆಳೆಸಿದ್ದಾರೆ."[೪] ಎಂದು ಗುರುತಿಸಿದ್ದು ಸರಿಯಾಗಿದೆ.

ರಾಷ್ಟ್ರಕೂಟರ ಮೂರನೆಯ ಗೋವಿಂದನ ಮಗನಾದ ಅಮೋಘವರ್ಷ ನೃಪತುಂಗನು ಕ್ರಿ.ಶ. ೮೧೪ರಲ್ಲಿ ಅಧಿಕಾರಕ್ಕೆ ಬರುವನು. ಕಾವೇರಿಯಿಂದ ಗೋದಾವರಿವರೆಗೆ ಹಬ್ಬಿದ ನಾಡನ್ನು ಸುಮಾರು ೬೪ ವರ್ಷಗಳ ಸುಧೀರ್ಘ ಕಾಲದವರೆಗೆ ಧರ್ಮದಿಂದ ಪರಿಪಾಲನೆ ಮಾಡಿದವನಾಗಿದ್ದಾನೆಂಬ ಹೆಗ್ಗಳಿಕೆ ಈತನದು. ವೀರೋಚಿತ ಮತ್ತು ವರ್ಣರಂಜಿತವಾದ ಈತನ ಬದುಕನ್ನು ಕುರಿತು ತ.ರಾ.ಸು. ಅವರು ಕಾದಂಬರಿ ರಚಿಸಿದ್ದೊಂದು ಚರಿತ್ರೆಯಂತೆ ಕಂಡಿದೆ. ಕಾದಂಬರಿಯ ವಸ್ತು ಮತ್ತು ಉದ್ದೇಶವನ್ನು ಕುರಿತು ಅವರು ಮೊದಲ ಮಾತಿನಲ್ಲಿ "ಈ ಕಾದಂಬರಿಯನ್ನು ನಾನು ಬರೆಯಲು ಬಂಕೇಶನ ಕೊಣ್ಣೂರು ಶಾಸನ, ಅಮೋಘವರ್ಷನ ಸಂಜಾನ್ ಶಾಸನ, ನೃಪತುಂಗವರ್ಮನ ಬಾಹೂರು ಶಾಸನ, ಇಮ್ಮಡಿ ಅಮ್ಮನ ಮುಖಾಸಾ ಬಾನಶಾಸನ ಮೊದಲಾದ ಶಾಸನಗಳೂ, ಜೀನಸೇನಾಚಾರ್ಯರ 'ಪೂರ್ವ ಪುರಾಣ'ವೂ ಸಾಮಗ್ರಿಯನ್ನು ಒದಗಿಸಿವೆ. 'ಪೂರ್ವ ಪುರಾಣ'ಕ್ಕಂತೂ ನಾನು ತುಂಬಾ ಋಣಿಯಾಗಿರುವುದು ಆ ಪುರಾಣ ಕಾವ್ಯವನ್ನು

ಓದಿದವರೆಲ್ಲರಿಗೂ ಮನವರಿಕೆಯಾಗುತ್ತದೆ. ಇವುಗಳಿಂದ ಪೋಷಕ ಸಾಮಗ್ರಿಯನ್ನು ಆಯ್ದುಕೊಂಡಿದ್ದೇನೆ. ಈ ಎಲ್ಲ ವಸ್ತುಗಳ ಆಧಾರದ ಮೇಲೆ, ಕನ್ನಡ ನಾಡಿನ ಆದರ್ಶದೊರೆ, ಆದರ್ಶ ತಂದೆ, ಆದರ್ಶಪತಿ ಎಲ್ಲಕ್ಕಿಂತ ಹೆಚ್ಚಾಗಿ ಆದರ್ಶ ಮಾನವನೊಬ್ಬನ ಚಿತ್ರವನ್ನು ನೃಪತುಂಗನ ಜೀವನದಲ್ಲಿ ಚಿತ್ರಿಸಲು ಈ ಕಾದಂಬರಿಯಲ್ಲಿ ಯತ್ನಿಸಿದ್ದೇನೆ."[೫] ಎಂದು ಹೇಳಿರುವುದು ಗಮನಾರ್ಹ ಸಂಗತಿಯಾಗಿದೆ. ಇದರಿಂದ ಕಾದಂಬರಿಯ ಮೂಲೋದ್ದೇಶ ಸ್ಪಷ್ಟವಾಗುತ್ತದೆ.

ಚಾರಿತ್ರಿಕ ಸಂಗತಿಗಳೊಂದಿಗೆ ಒಂಬತ್ತನೆಯ ಶತಮಾನದ ಸಮಾಜದ ಮನೋಧರ್ಮ, ಜನತೆಯ ಆಸೆ-ಆಕಾಂಕ್ಷೆಗಳು, ನಾಡಿನ ಸಂಸ್ಕೃತಿ ನಾಗರಿಕತೆಗಳು ಜೊತೆಗೆ ನಾಡಿನ ಆರ್ಥಿಕ-ರಾಜಕೀಯ ಸ್ಥಿತಿಗತಿಗಳು ಈ ಮುಂತಾದ ಸನ್ನಿವೇಶಗಳು ಕಾದಂಬರಿಯಲ್ಲಿ ನುಸುಳಿಕೊಂಡಿವೆ. ನಾಟಕೀಯ ಶೈಲಿಯೊಂದಿಗೆ ಪ್ರಾರಂಭವಾಗುವ ಕಾದಂಬರಿಯು ಓದುಗರ ಕುತೂಹಲವನ್ನು ಕೆರಳಿಸುತ್ತ ಸಾಗುತ್ತದೆ. ನಿತ್ಯ ನಿರಂತರ ಚಾಲುಕ್ಯ ದೊರೆಗಳ ಕಿರುಕುಳಕ್ಕೆ ಒಳಗಾದ ರಾಷ್ಟ್ರಕೂಟ ಸಾಮ್ರಾಜ್ಯವು ಬಹುದಿನಗಳ ನಂತರ ಚಾಲುಕ್ಯ ದೊರೆ ವಿಷ್ಣುವರ್ಧನನ್ನು ಸದೆ ಬಡೆಯುವದರೊಂದಿಗೆ ವಿಜಯೋತ್ಸವ ಸಂಭ್ರಮದಲ್ಲಿ ತೇಲಾಡುವಂತಾಗುತ್ತದೆ. ಜೊತೆಗೆ ರಾಜಪುತ್ರನ ಜನನವೂ ಆಗಿದೆ. ಈ ಎರಡು ಘಟನೆಗಳಿಂದಾಗಿ ಎಲ್ಲೆಡೆ ಉಲ್ಲಾಸ-ಉತ್ಸಾಹ ಕಂಡುಬರುತ್ತದೆ. ಇಂತಹ ಪ್ರಸಂಗದೊಂದಿಗೆ ಕಾದಂಬರಿ ಪ್ರಾರಂಭವಾಗುತ್ತದೆ. "ಸುಖವಾಗಲಿ ದು:ಖವಾಗಲಿ ಒಂಟಿಯಾಗಿ ಬರುವುದಿಲ್ಲ. ಇಲ್ಲದಾಗ ಇಲ್ಲ. ಬರುವಾಗ ಹಿಂಡುಹಿಂಡಾಗಿ, ಹುಣ್ಣಿಮೆಯ ಮಧ್ಯರಾತ್ರಿ ಏರಿ ಏರಿ ಬರುವ ಕಡಲ ಅಲೆಗಳಂತೆ ಬರುತ್ತವೆ. ಈ ಮಾತು ಇಂದು ಕಾವೇರಿಯಿಂದ ಗೋದಾವರಿಯವರೆಗೆ ವ್ಯಾಪಿಸಿದ ಕನ್ನಡ ಜನಪದದ ಜನಕ್ಕೆ ಅಖಂಡ ರಾಷ್ಟ್ರಕೂಟ ಸಾಮ್ರಾಜ್ಯಕ್ಕೇ ಮನವರಿಕೆಯಾಗಿದೆ. ಅಷ್ಟೇ ಅಲ್ಲ, ಅಷ್ಟು ಅನಿರೀಕ್ಷಿತವಾಗಿ ಒದಗಿಬಂದ ಆ ಎರಡು ಹರ್ಷೋತ್ಸವಗಳಲ್ಲಿ ಯಾವುದಕ್ಕಾಗಿ ಜನ ಹೆಚ್ಚು ಆನಂದಪಡಬೇಕು? ಎರಡರಲ್ಲಿ ಯಾವುದು ಆನಂದಪಡಬೇಕು? ಎರಡರಲ್ಲಿ ಯಾವುದು ಹೆಚ್ಚಿನದು? ವೆಂಗಿವಳ್ಳಿಯ ವಿಜಯವೇ, ರಾಜಪುತ್ರನ ಜನನವೇ? "ಎರಡೂ ಎಷ್ಟು ಅನಿರೀಕ್ಷಿತವೋ, ಅಷ್ಟೇ ಮಹದೋತ್ಸವದ ಘಟನೆಗಳು. ಆ ಎರಡು ಘಟನೆಗಳು ರಾಜ್ಯದ ಸಿಂಹಾಸನವನ್ನೇ ಕವಿದ ಇಬ್ಬಗೆಯ ಮಹಾಭೀತಿಗಳನ್ನು ನಿವಾರಣೆ ಮಾಡಿದ್ದವು."[೬] ಎಂಬಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯದ ಹರ್ಷೋತ್ಸವವು ಇಡೀ ನಾಡಲ್ಲಿ ಹಬ್ಬದ ವಾತಾವರಣ ನಿರ್ಮಿಸಿತ್ತೆಂಬ ವಿಚಾರ ತಿಳಿಯುತ್ತದೆ.

ಜಿನಸೇನಾಚಾರ್ಯರ ಶಿಷ್ಯನಾದ ನೃಪತುಂಗನಿಗೆ 'ಅಹಿಂಸೆ ಸರ್ವಶ್ರೇಷ್ಠವಾದ ಧರ್ಮ' ಎಂಬ ಮಾತು ಮನವರಿಕೆಯಾಗಿತ್ತು. ಆದಾಗ್ಯೂ ಅವರೇ ಹೇಳಿದ ಪ್ರಜಾಪಾಲನೆಗೆ ಅಗತ್ಯಯೆನಿಸಿದಾಗ ಯುದ್ಧ ಅನಿವಾರ್ಯವೆಂಬ ಮಾತಿನಲ್ಲೂ ನೃಪತುಂಗನು ಬಲವಾದ

ನಂಬಿಕೆಯುಳ್ಳವನಾಗಿದ್ದನು. "ತಾವಾಗಿ ಯಾರೂ ಯುದ್ಧಕ್ಕೆ, ರಕ್ತಪಾತಕ್ಕೆ ಹಾತೊರೆಯಬಾರದು. ಅಂತಹ ಅಧರ್ಮ ಯುದ್ಧ ಇಹಪರಗಳ ವೈರಿ. ಆದರೆ ಪ್ರಜಾಪಾಲನೆಯೆ ಅಗತ್ಯವಾದಾಗ ಯುದ್ಧಕ್ಕೆ ಹಿಂಜರಿಯುವ ಅರಸನನ್ನು ರಾಜ್ಯಲಕ್ಷ್ಮಿ ಹೇಸಿ ದೂರವಾಗುತ್ತಾಳೆ. ನಿಗ್ರಹಯೋಗ್ಯವಾದ ಶತ್ರುವನ್ನಾಗಲಿ, ದುಷ್ಟಪುತ್ರನನ್ನಾಗಲಿ ಸಮಾನವಾಗಿ ನಿಗ್ರಹಿಸಿ, ಪ್ರಜಾಪರಿಪಾಲನೆ ಮಾಡುವ ದೊರೆಯೇ ಸಮಂಜಸನು. ಆ ಮಾತನ್ನು ಚಕ್ರವರ್ತಿಗಳು ಮರೆತಿರಲಿಲ್ಲ. ಅಷ್ಟೇ ಅಲ್ಲ, ತಾವು ಹುಟ್ಟಿದಂದು ತಮ್ಮ ಕ್ಷೇಮಕ್ಕಾಗಿ, ನಿಷ್ಕಂಟಕ ದೀರ್ಘಾಯುವ್ಯಕ್ಕಾಗಿ ತನ್ನ ತಲೆಗೊಟ್ಟ ಭಟನ ವಿಚಾರವೂ ಅವರಿಗೆ ನೆನಪಿತ್ತು. ಅವರ ತೊಟ್ಟಿಲಿಗೆ ಆ ವೀರ ಕಥೆ ಸಾರುವ ಚಿನ್ನದ ಹಲಗೆಯನ್ನು ಕಟ್ಟಿಸಿದ್ದರು ಗೋವಿಂದ ಚಕ್ರವರ್ತಿಗಳು ____ 'ನಿನಗಾಗಿ ಪ್ರಾಣತ್ಯಾಗ ಮಾಡಿದವರನ್ನು ಮರೆಯಬೇಡ. ಅರಸೊತ್ತಿಗೆ ನಿತ್ಯ ಸುಖಸಮಾರಾಧನೆಯ ಸುಪ್ಪತ್ತಿಗೆಯಲ್ಲ. ಪ್ರಜೆಗಳ, ವೀರಭಟರ ತ್ಯಾಗದ ಹಾಲಿನಿಂದ ಬೆಳೆದ ರಾಜಶರೀರ ಅವರ ಸೇವೆಗೆ ಮೀಸಲಾಗಬೇಕು. ರಾಜಮಕುಟ ಆ ಸೇವಾ ವ್ರತದ ರತ್ನಕಂಕಣ. ನಿತ್ಯ ನಿತ್ಯ ನೆನಪಿರಲಿ ನಿನಗಾಗಿ ಒಬ್ಬನು ಜೀವವಿತ್ತ, ಅಖಂಡ ಪ್ರಜಾಕೋಟಿಗಾಗಿ ಸಮಯ ಬಂದಾಗ ಪ್ರಾಣಕೊಡಲು ನೀನು ಸಿದ್ಧವಿರು"[೭] ಎಂಬ ಜಿನಸೇನಾಚಾರ್ಯರರ ಅಣತಿಯಂತೆ, ನೃಪತುಂಗ ಪ್ರತಿಜ್ಞಾವಿಧಿಯಂತೆ ಈ ವೆಂಗಿವೆಳ್ಳಿಯ ವಿಜಯೋತ್ಸವದ ಚಿತ್ರಣವನ್ನು ತ.ರಾ.ಸು. ಅವರು ಕೊಡುತ್ತಾ ಹೋಗುತ್ತಾರೆ. ಇಂತಹ ಪ್ರಸಂಗದ ಸನ್ನಿವೇಶಗಳು ವಾಸ್ತವ ನೆಲೆಗಟ್ಟಿನಲ್ಲಿ ಗಮನ ಸೆಳೆಯುತ್ತವೆ. ಪ್ರಭು ಮತ್ತು ಪ್ರಜೆಗಳ ನಡುವಿನ ಅವಿನಾಭಾವ ಸಂಬಂಧದ ದ್ಯೋತಕದಂತೆ ಕಾಣುತ್ತವೆ.

ನೃಪತುಂಗನ ಯುದ್ಧ ವಿಜಯೋತ್ಸವದೊಂದಿಗೆ ಅವನ ಪುತ್ರನ ಜನನೋತ್ಸವವು ಕಾದಂಬರಿಯಲ್ಲಿ ನವಿರಾಗಿ ಬಣ್ಣಿಸಲ್ಪಟ್ಟಿದೆ. "ನಗರ ರಾಜಬೀದಿಗಳಿಗೆ ಪನ್ನೀರು ತಳೆದು ಇಬ್ಬದಿಗೂ ಸಾಲು ಪುಷ್ಪಮಾಲೆಯ ಅಲಂಕಾರ ಮಾಡಿ, ಚೌಪಥ ಪ್ರದೇಶಗಳಲ್ಲಿ ಕೃಷ್ಣಾಗರು ಧೂಪದ ಕೊಡಗಳನ್ನಿಟ್ಟು ನಗರ ಲಕ್ಷ್ಮಿಗೆ ಪರಿಮಳ ಸ್ನಾನ ಮಾಡಿಸಿದರು____. ಒಂದೊಂದು ಮನೆಯ ಮೇಲೂ ಹಾರುವ ಬಾವುಟಗಳು, ನೀಲಿಯ ಬಾನಿನಲ್ಲಿ ರೆಕ್ಕೆ ಬಡಿದು ಹಕ್ಕಿಗಳಂತೆ ಶೋಭಿಸಿದವು. ಮನೆ, ದೇವಾಲಯ, ಅಂಗಡಿ ಒಂದೊಂದರ ಮುಂದೂ ಕಟ್ಟಿದ ದಟ್ಟವಾದ ಪತ್ರಾಲಂಕಾರದಿಂದ, ಅರಸು ಕುಮಾರನ ಜನ್ಮೋತ್ಸವದಲ್ಲಿ ಭಾಗವಹಿಸಲು ವನವೇ ನಗರಕ್ಕೆ, ಆಗಮಿಸಿದಂತಿದೆ."[೮] ಎಂಬಂತಹ ವರ್ಣನೆಗಳು ಆಕರ್ಷಣೀಯವಾಗಿವೆ.

ಆದರೆ ಆಸ್ಥಾನ ಜೋಯಿಸರಾದ ಗೋಲಯಭಟ್ಟರು, ತಮ್ಮ ಪುತ್ರ ಕೃಷ್ಣನಿಂದ ರಾಜ್ಯಕ್ಕೆ ಕಂಟಕವಿದೆ ಎಂದು ಭವಿಷ್ಯ ನುಡಿದಾಗ ನೃಪತುಂಗನು ಮನೋವ್ಯಾಕುಲತೆಗೆ ಒಳಗಾಗುತ್ತಾನೆ. ಈ ಕುರಿತಾಗಿ ರಾಜ ನೃಪತುಂಗ ಮತ್ತು ರಾಣಿ ಲಕ್ಷೀದೇವಿಯರ ನಡುವಿನ ಸಂಭಾಷಣೆಯನ್ನು ಕಾದಂಬರಿಕಾರರು ಚಿತ್ತವತ್ತಾಗಿ ಚಿತ್ರಿಸಿದ್ದಾರೆ. "ಈ ರಾಜ್ಯವನ್ನು

ಕಾಪಾಡಲೆಂದು ಮಗನನ್ನು ಬಯಸಿದೆ. ಹರಕೆ ಹೊತ್ತು ವ್ರತ ಮಾಡಿದೆ? ರಾಜ್ಯಕ್ಕೆ ಕಂಟಕನಾಗಲೆಂದಲ್ಲ. ಇದೇನೇ ನಾನು ಪಡೆದ ಸೌಭಾಗ್ಯ? ವಿಧಿಗಿಷ್ಟು ಸಿಟ್ಟೇ ನನ್ನ ಮೇಲೆ? ಇಂಥ ಮಗನನ್ನು ಪಡೆದು, ಪ್ರಜೆಗಳಿಗೆ ಹೇಗೆ ಮೊಗ ತೋರಿಸಲಿ ? "ಗೋಲಯಭಟ್ಟರು ಹೇಳಿದುದನ್ನು ಕೇಳಿದಾಗ ನನಗೂ ಹಾಗೇ ಅನ್ನಿಸಿತು. ಆದರೆ ಆದಾವುದನ್ನು ಅಷ್ಟು ಹಚ್ಚಿಕೊಳ್ಳಬಾರದು ಲಕ್ಷ್ಮೀ. ಬರುವುದೆಲ್ಲಾ ನಾವು ಅನುಭವಿಸಬೇಕೆಂದು ಬರುತ್ತವೆಯೇ ಹೊರತು, ಮನೋವ್ಯಥೆ ಮಾಡಿಕೊಂಡು ಕೊರಗುವುದಕ್ಕಲ್ಲ. ಸುಖ ದು:ಖಗಳು ಅಭ್ಯಾಗತರಂತೆ. ಒಬ್ಬರು ಬಂದರೆಂದು ಹಿಗ್ಗೇಕೆ ಮತ್ತೊಬ್ಬರು ಬಂದರೆಂದು, ಕೊರಗೇಕೆ? ಬರುವುದು ಬರಲಿ. ನಮ್ಮ ಕರ್ತವ್ಯವನ್ನು ಮಾತ್ರ ನಾವು ಮಾಡೋಣ."[9] ಎಂದು ದು:ಖತಪ್ತ ಮನಸ್ಸಿನಿಂದಲೇ ನೃಪತುಂಗನು ತನ್ನ ರಾಣಿ ಲಕ್ಷ್ಮೀದೇವಿಗೆ ಸಾಂತ್ವನದ ಮಾತನ್ನು ಹೇಳುತ್ತಾನೆ. ಮನೋಸ್ಥೈರ್ಯದೊಂದಿಗೆ ಇಬ್ಬರೂ ಮಗನ ಲಾಲನೆ-ಪಾಲನೆಗೆ ಮುಂದಾಗುತ್ತಾರೆ.

ಇಷ್ಟಾದಾಗ್ಯೂ ಗೋಲಾಯಭಟ್ಟರ ಭವಿಷ್ಯದಿಂದಾಗಿ ನೃಪತುಂಗನ ಚಿಂತೆ ಹೆಚ್ಚಾಗುತ್ತ ಹೋಗುತ್ತದೆ. ಜೊತೆಗೆ ರಾಜಕುಮಾರ ಕೃಷ್ಣನ ಹಠಮಾರಿತನವೂ ಹೆಚ್ಚಾಗುತ್ತದೆ. ಆರುವರುಷದ ಬಾಲಕನಿರುವಾಗಲೇ ಕೃಷ್ಣ ತನ್ನ ತಂದೆಯ ಎದುರು ಮಹಾಹಠಮಾರಿಯಾಗಿ ಕಾಣುತ್ತಾನೆ. ಒಂದು ದಿನ ನೃಪತುಂಗನು, "ತಾವು ಧರಿಸಿದ ಸಾರ್ವಭೌಮ ಪದವಿ ಸೂಚಕವಾದ ಒಂದೊಂದು ತೋಡವನ್ನೂ ತೋರಿಸಿ ಕೇಳಿದರು. ರಾಜಕುಮಾರ ಅದಾವುದಕ್ಕೂ ಮನಸ್ಸು ಮಾಡದೆ, ಚಕ್ರವರ್ತಿ ಮಸ್ತಕದ ಮೇಲೆ ನವರತ್ನ ಕಾಂತಿಯಿಂದ ಥಳಥಳಿಸುತ್ತಿದ್ದ ರಾಜ ಮುಕುಟವನ್ನು ನೋಡಿ –

"ನನಗದನ್ನು ಕೊಡು ಅಪ್ಪಾಜಿ" ಎಂದ.

"ಛೀ! ಅದನ್ನು ಕೇಳಬಾರದು ಕೃಷ್ಣ"

– ಎಂದು ಮಹಾರಾಣಿ ಕೇಳಬಾರದುದನ್ನು ಕೇಳಿದ ಮಗನನ್ನು ಗದರಿಕೊಂಡಳು.

"ಊಹು – ನನಗದು ಬೇಕು ಅಪ್ಪಾಜಿ, ನಾನು ಅದನ್ನೇ ಹಾಕಿಕೊಳ್ಳಬೇಕು."

– ಕೃಷ್ಣ ತಾಯಿ ಗದರಿದುದನ್ನು ಕಂಡು ಸಿಟ್ಟಾಗಿ, ಮಟ್ಟ ಕಾಲನ್ನು ನೆಲಕ್ಕೆ ಅಪ್ಪಳಿಸಿ, ಹೇಳಿದ ....... ಆಗ ಮಹಾರಾಜ, ಹಾಗಾದರೆ ನಿನಗೆ ನಾನು ಬೇಕೋ, ಈ ಕಿರೀಟ ಬೇಕೋ ಕೃಷ್ಣಾ?" ಎಂದಾಗ, "ಕಿರೀಟ! ಖಚಿತವಾದ ಧ್ವನಿಯಲ್ಲಿ ಹೇಳಿದ, ರಾಜಕುಮಾರ."[೧೦] ಹೀಗೆ ರಾಜಕುಮಾರನ ಹಠಮಾರಿತನವನ್ನು ಕಂಡು ಮಹಾರಾಜನು ಚಿಂತಾಕ್ರಾಂತನಾಗುತ್ತಾನೆ.

ರಾಜಕುಮಾರನ ಚಿಂತೆಯಲ್ಲಿ ತಲ್ಲಣಿಸಿ ಹೋಗುವ ಮಹಾರಾಜ ನೃಪತುಂಗನು ಮುಂದೆ ಈ ಸಾಮ್ರಾಜ್ಯದ ರಕ್ಷಣೆ ಹೇಗೆಂದು ಚಿಂತಿಸುತ್ತಾನೆ. "ಈ ರಾಜ್ಯ, ಈ ಸಿಂಹಾಸನ, ಈ ರಾಜಮಕುಟಕ್ಕೆ ಯೋಗ್ಯನಾದನೇ ಕೃಷ್ಣ? ಇದೆಲ್ಲವನ್ನೂ ನಿರ್ವಹಿಸುವ ಶಕ್ತಿ ಬರುವುದೇ

ಅವನಿಗೆ?" ಕಾವೇರಿಯಿಂದ ಗೋದಾವರಿಯವರೆಗೆ ಹರಡಿದ ರಾಜ್ಯ, ಅದರ ಸುತ್ತಲೂ ಹೊತ್ತು ಕಾಯುತ್ತ ನಿಂತ ವೈರಿ ಸಮೂಹ, ರಾಜ್ಯಾಡಳಿತದ ಸಹಸ್ರ ಸಮಸ್ಯೆಗಳು ನೆನಪಾಗಿ, ಅವರೆದೆಯಲ್ಲಿ ನಿರಾಶೆಯ ಹೊಗೆ ಕವಿಯುವುದು. ತಲೆ ಕುಸಿದು ಕುಳಿತುಕೊಳ್ಳುವರು. 'ಮಹಾರಾಣಿಯ ಗರ್ಭದಲ್ಲಿ ಈ ರಾಜ್ಯಕ್ಕೆ ಯೋಗ್ಯನಾದ ಮತ್ತೊಬ್ಬ ಮಗನಾಗಬಾರದೇ?"[೧೧] ಎಂಬ ಬಯಕೆಯನ್ನು ವ್ಯಕ್ತಪಡಿಸುತ್ತಾನೆ. ಇದು ನೃಪತುಂಗನು ತನ್ನ ಇಡೀ ಸಾಮ್ರಾಜ್ಯದ ಮೇಲೆ ಇರಿಸಿದ ಗೌರವಾಭಿಮಾನದ ದ್ಯೋತಕದಂತೆ ತೋರುತ್ತದೆ. "ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್" ಎಂದು ಒಂಬತ್ತನೆಯ ಶತಮಾನದ ಕನ್ನಡದ ಕಾವ್ಯ 'ಕವಿರಾಜ ಮಾರ್ಗ' ಈ ನಾಡಿನ ಐಸಿರಿಯ ಗಡಿ ವ್ಯಾಪ್ತಿಯನ್ನು ಬಣ್ಣಿಸಿದೆ. ಇಂದು ಗೋದೆಯ ದಂಡೆಯಲ್ಲಿ ಕನ್ನಡ ಕಾಣಬರದಿದ್ದರೂ ಹಿಂದೆ ಅಲ್ಲಿಯ ಭಾಷೆ ಕನ್ನಡದ್ದೇ ಆಗಿತ್ತೆಂದು ಸೂಚಿಸುವ ಅಸಂಖ್ಯ ಶಾಸನಗಳು ಉಪಲಬ್ಧವಿದೆ. ಕರ್ನಾಟಕದ ಪ್ರಭಾವವು ಒಂದು ವಿಶಿಷ್ಟ ಕಾಲದಲ್ಲಿ ಇಡೀ ಭಾರತದ ರಾಜಕಾರಣದಲ್ಲಿ ಕಾಣುವಂತಾಯಿತು. ಇದನ್ನು ತ.ರಾ.ಸು. ಅವರು ಕಾದಂಬರಿಯಲ್ಲಿ ಮಾರ್ಮಿಕವಾಗಿ ಹೇಳಿದ್ದಾರೆ."[೧೨] ಎಂಬ ಕೆಳದಿ ಗುಂಡಾಜೋಯಿಸ್ ಅವರ ಮಾತು ಸೂಕ್ತವಾಗಿದೆ.

ನೃಪತುಂಗನು ರಾಣಿ ಲಕ್ಷ್ಮೀದೇವಿಯ ಬಸಿರ ಬಯಕೆಯನ್ನು ತೀರಿಸುವ ಪ್ರಸಂಗವೊಂದು ಬರುತ್ತದೆ. ಈ ಒಂದು ನೆಪದಲ್ಲಿ ತ.ರಾ.ಸು. ಅವರು 'ಬನವಾಸಿ' ನಾಡನ್ನು ಐಸಿರಿಯ ನಾಡು–ಕನ್ನಡಿಗರ ಔದಾರ್ಯದ ಬೀಡೆಂಬಂತೆ ಚಿತ್ರಿಸಿದ್ದು ಕಂಡುಬರುತ್ತದೆ. "ಪರಮಾರ ರಾಜಕನ್ಯೆಯಾದ ಮಹಾರಾಣಿ ಲಕ್ಷ್ಮೀದೇವಿ ಕನ್ನಡಿಗರ ಅತಿಥ್ಯದ ಔದಾರ್ಯವನ್ನು ಕಂಡು ಮೂಕರಾಗಿ ಹೋದರು. ಇಲ್ಲಿಯ ಪ್ರಕೃತಿ ಸುಂದರವೆಂದು ಕೇಳಿದ್ದರವರು. ಆದರೆ ಅಲ್ಲಿಯ ಜನರ ಹೃದಯ ಅದಕ್ಕಿಂತಲೂ ಸುಂದರ. ಅವರ ಮಾತು ಪುಷ್ಪ ಪರಿಮಳದಂತೆ ಹಿತ. ಉಪಚಾರ ಜೇನುತುಪ್ಪದಷ್ಟು ಮಧುರ. ನಿಸರ್ಗದಂತೆಯೇ ಸಹಜ ಸುಂದರ. ಇದೆಲ್ಲವನ್ನು ಕಂಡು ಮಹಾರಾಣಿಯವರ ಹೃದಯ ಮಾರು ಹೋಯಿತು."[೧೩] ಹಾಗೆಯೇ, "ನಿಜ, ಅರಸೊತ್ತಿಗೆಯ ಸೆರೆಮನೆಗಿಂತ, ಇಂಥ ಕಾಡಿನಲ್ಲಿ ಹಕ್ಕಿಯಾಗಿಯೇ, ಹೂವಾಗಿಯೇ ಹುಟ್ಟುವುದು ಮೇಲು. ಕಾಡನ್ನು ನೋಡುತ್ತಿದ್ದರೆ ಹಸಿವು ನೀರಡಿಕೆಗಳು ಮರೆತು ಹೋಗುತ್ತದೆ. ನಿಜವಾಗಿಯೂ ಇಂಥ ಕಡೆ ವಾಸ ಮಾಡುವ ಜನ ಎಷ್ಟು ಪುಣ್ಯವಂತರು!"[೧೪] ಎಂದು ಭಾವಿಸುವ ನೃಪತುಂಗ ಚಕ್ರವರ್ತಿಯ ಮಾತುಗಳು ಜಿನಸೇನಾಚಾರ್ಯರ 'ಪೂರ್ವ ಪುರಾಣ'ವನ್ನು ಪಂಪನ ಮಾತುಗಳನ್ನು ನೆನಪಿಸುತ್ತವೆ. ಅದನ್ನೇ ತ.ರಾ.ಸು. ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

ಕಂಚಿಯ ಪಲ್ಲವ ರಾಜಕುಮಾರನಿಗೆ ಮದುವೆ ಮಾಡಿಕೊಟ್ಟಿದ್ದ ಮಗಳು ಶಂಖಲಾದೇವಿಗೆ ಪುತ್ರ ಜನನವಾದ ಸುದ್ಧಿ ಕೇಳಿ ಮಹಾರಾಣಿಗೆ ಅತೀವ ಸಂತೋಷವಾಗುತ್ತದೆ.

ಒಮ್ಮೆ ಕಂಚಿಗೆ ಹೋಗಿ ಮಗಳು ಮತ್ತು ಮೊಮ್ಮಗನನ್ನು ನೋಡಿ ಬರಬೇಕೆಂಬ ಆಸೆ ಹೆಚ್ಚಾಗುತ್ತದೆ. ಈ ಕಾರಣದಿಂದ ಮಹಾರಾಜರ ಒಪ್ಪಿಗೆಯ ಮೇರೆಗೆ ಕಂಚಿಗೆ ಪ್ರಯಾಣ ಬೆಳೆಸುವ ಹಸುಗೂಸಿನ ತಾಯಿ ರಾಣಿ ಲಕ್ಷ್ಮೀದೇವಿಯು ಕಂಚಿಯಲ್ಲೇ ಪ್ರಾಣ ತ್ಯಾಗ ಮಾಡುವುದೊಂದು ಹೃದಯವಿದ್ರಾವಕ ಘಟನೆಯಂತೆ ಕಾಣುತ್ತದೆ. "ಕಂಚಿಗೆ, ಕಾಮಾಕ್ಷಿದೇವಿಯ ಸೇವೆಗೆಂದು ತೆರಳಿದರು ಮಾನ್ಯಖೇಟದ ಮಹಾರಾಣಿ ಲಕ್ಷ್ಮೀದೇವಿಯರು. ತೆರಳಿದರು ಮತ್ತೆ ಮರಳಲಿಲ್ಲ. ಪ್ರವಾಸದ ಆಯಾಸವೋ, ಕಂಚಿಯ ತಾಳಲಾಗದ ಬಿಸಿಲೋ, ಕಾಮಾಕ್ಷೀದೇವಿಯ ಕರೆಯೋ ಕಂಚಿಯನ್ನು ಸೇರಿದ ಮರುದಿನವೇ ಆಯಾಸವೆಂದರು, ಹಟಹಿಡಿದು ಕಲ್ಯಾಣಿಯಲ್ಲಿ ಮಿಂದು ಕಾಮಾಕ್ಷಿಯ ಸೇವೆ ಮಾಡಿ ಬಂದು ಕುದಿಯುವ ಜ್ವರ ತಾಪದಲ್ಲಿ ಬಸವಳಿದು ಮಲಗಿದವರು ಮತ್ತೆ ಮೇಲೇಳಲಿಲ್ಲ."[೧೫]

ಮಹಾರಾಣಿಯ ಸಾವಿನ ದು:ಖ ಇಡೀ ಸಾಮ್ರಾಜ್ಯವನ್ನು ಆವರಿಸಿಕೊಂಡ ಸಂದರ್ಭದಲ್ಲಿಯೇ ಮಿಹಿರಭೋಜನ ಸೇನೆ ರಾಷ್ಟ್ರಕೂಟ ಸಾಮ್ರಾಜ್ಯಕ್ಕೆ ಬಹುಹತ್ತಿರವಾದ ಸೌರಾಷ್ಟ್ರದ ಮೇಲೆ ದಾಳಿ ಮಾಡಿದ ಸುದ್ದಿಯು ಬರುತ್ತದೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ನೃಪತುಂಗನು ಯುದ್ಧಕ್ಕಾಗಿ ಸನ್ನದ್ಧನಾಗುತ್ತಾನೆ. ಈ ಯುದ್ದಕ್ಕಾಗಿ ಸೇನಾಧಿಪತಿಯನ್ನು ಆರಿಸುವ ಸಮಸ್ಯೆಯು ತಲೆದೋರುತ್ತದೆ. ಈ ಸಂದರ್ಭದಲ್ಲಿ ಮಹಾರಾಜನು ಸೇನಾಧಿಪತಿ ಆಯ್ಕೆಯ ವಿಧಾನವೊಂದನ್ನು ಅನುಸರಿಸುತ್ತಾನೆ. ಈ ಪರೀಕ್ಷೆಯಲ್ಲಿ ಬಂಕರಸನ ಮಗನಾದ ಲೋಕಾದಿತ್ಯನು ಜಯಶೀಲನಾಗುತ್ತಾನೆ. ಇದರಿಂದ ರಾಜಕುಮಾರ ಕೃಷ್ಣ ಕೆಂಡಾಮಂಡಲವಾಗುತ್ತಾನೆ. ಇದೇ ಕಾರಣಕ್ಕೆ ರಾಷ್ಟ್ರಕೂಟ ಸಾಮ್ರಾಜ್ಯದಲ್ಲಿ ಅಂತ:ಕಲಹ ಪ್ರಾರಂಭಗೊಳ್ಳುತ್ತದೆ. ಹೊರ ರಾಜ್ಯದ ವ್ಯಕ್ತಿಗಳಾದ ಶಂಕರಗಣ, ಮಂಗಿ, ವೇಶ್ಯೆ ಜಯಂತಿಯಂತವರ ಪಿತೂರಿಯಿಂದಾಗಿ ಕೃಷ್ಣನು ತನ್ನ ತಂದೆಯ ವಿರುದ್ಧ ಬಂಡೇಳುವಂತಾಗುತ್ತದೆ. "ಗುಣಭದ್ರಾಚಾರ್ಯರು ಸಿಂಹಾಸನದ ವಿರುದ್ಧ ಸಂಚು ಮಾಡುತ್ತಿದ್ದಾರೆಂಬುದನ್ನು ಜಯಂತಿಯ ಬಾಯಿಂದ ಕೇಳಿದಾಗ ರಾಜಕುಮಾರನಿಗೆ ಸಂಶಯುವಾದರೂ ನಂಬಿರಲಿಲ್ಲ. ಲೋಕಾದಿತ್ಯನಿಗೆ ಸೇನಾಧಿಪತ್ಯವನ್ನು ಗಳಿಸಿಕೊಟ್ಟ ಪರೀಕ್ಷೆ ಗುಣಭದ್ರಾಚಾರ್ಯರು ಸೂಚಿಸಿದ್ದು. ನನ್ನ ಮಾತು ಸುಳ್ಳೆನ್ನುವುದಾದರೆ ಚಕ್ರವರ್ತಿಗಳನ್ನೇ ಕೇಳಿ' ಎಂದಿದ್ದಳು ಜಯಂತಿ. ಚಕ್ರವರ್ತಿಗಳ ಬಾಯಿಂದಲೂ ಅದೇ ಮಾತು ಬಂದು, ರಾಜಕುಮಾರನ ಸಂಶಯ ಸತ್ಯವೆಂದು ತೋರಿ, ರಾಜಕುಮಾರ ಕ್ರೋಧದಲ್ಲಿ ಕುದಿದ ಕಾಳಸರ್ಪವಾಗಿದ್ದ. ಆ ಕ್ರೋಧದಲ್ಲಿ ಏನೂ ಮಾಡಲೂ ಸಿದ್ಧನಾಗಿದ್ದ."[೧೬] ಮುಂದೆ ಬಂಕರಸರ ನಾಯಕತ್ವದಲ್ಲಿ ಸಂಚುಗಾರರನ್ನು ಹತ್ತಿಕ್ಕಲಾಗುತ್ತದೆ. ಈ ಜಯದ ಸುದ್ದಿಯನ್ನು ಕೇಳಿದಾಗ ಮಹಾರಾಜರಲ್ಲಿ ಆನಂದವನ್ನು ಅನುಭವಿಸಲಾಗಲಿಲ್ಲ. ಇದಕ್ಕೆ ಕಾರಣ, ಮಗ ಕೃಷ್ಣನ ರಾಜದ್ರೋಹದ ಚಿಂತೆಯೇ ಅವರ ತಲೆಯನ್ನು ತಿನ್ನುವಂತಾಗುತ್ತದೆ. "ಯಾವನು

ಹುಟ್ಟಿದ ಹರ್ಷಕ್ಕೆಂದು ರಾಷ್ಟ್ರಕೂಟ ರಾಜ್ಯ ವಧುವಿನಂತೆ ಅಲಂಕಾರ ಮಾಡಿಕೊಂಡು ನಲಿದಿತ್ತೋ, ಯಾರ ಜನುಮದಲ್ಲಿ ರಾಷ್ಟ್ರಕೂಟ ಸಾಮ್ರಾಟ ಪರಂಪರೆಯ ಶಾಶ್ವತವಾದ ಕನಸು ಕಂಡಿತೋ, ಅವನೇ, ಅವನೇ, ರಾಷ್ಟ್ರಕೂಟ ಚಕ್ರವರ್ತಿಯ ಮಗನೇ . ಇಂದು ಸಾಮ್ರಾಜ್ಯದ ವಿರುದ್ಧ ಕತ್ತಿ ಹಿರಿದು ನಿಂತಿದ್ದಾನೆ".[೧೭] ಎಂದು ನೃಪತುಂಗ ಚಕ್ರವರ್ತಿ ಕೊರಗುತ್ತಾನೆ.

ಅವನ ಹೃದಯದಲ್ಲಿ ರಾಜಧರ್ಮ – ಪ್ರಜಾಧರ್ಮ ವಿಶ್ವಧರ್ಮಗಳ ಹೋರಾಟವೇ ನಡೆಯುತ್ತದೆ. ಕೊನೆಗೆ ರಾಜದ್ರೋಹಿಯಾದ ಮಗ ಕೃಷ್ಣನಿಗೆ ಮರಣದಂಡನೆಯಂಥ ಶಿಕ್ಷೆಯನ್ನು ಕೊಡುತ್ತಾನೆ. ಆದರೆ ಬಂಕರಸರು, ಗುಣಭದ್ರಾಚಾರ್ಯರು ಹಾಗೂ ಪ್ರಜೆಗಳಿಂದ ಬಂದ ಒತ್ತಡದಿಂದಾಗಿ ಕೃಷ್ಣನಿಗೆ ಕ್ಷಮಾದಾನ ದೊರೆಯುತ್ತದೆ.

ಕಾದಂಬರಿಯ ಕೊನೆಯಲ್ಲಿ ರಾಜ್ಯಕ್ಕೆ ಒದಗಿದ ವಿಪತ್ತನ್ನು ತಪ್ಪಿಸುವುದಕ್ಕಾಗಿ ನೃಪತುಂಗ ಚಕ್ರವರ್ತಿಯು ಶಾಂತಿಯಜ್ಞದ ದ್ಯೋತಕವಾಗಿ ಕರವೀರಪುರದ ಮಹಾಲಕ್ಷ್ಮೀಗೆ ಅಂಗುಲಿದಾನ ಮಾಡಲು ಮುಂದಾಗುತ್ತಾನೆ. "ತಾಯಿ, ನೀನು ಕೊಟ್ಟ ರಾಜ್ಯವನ್ನು ಇದುವರೆಗೆ ಆಳಿ ಸೇವೆ ಸಲ್ಲಿಸಿದೆ. ಇನ್ನದರ ಚಿಂತೆಯನ್ನು ನೀನೇ ವಹಿಸಿ, ನಿನ್ನ ಸೇವೆಯ ಅನುಗ್ರಹ ದಯಪಾಲಿಸು. ನಿನ್ನ ಅಡಿಯಲ್ಲಿ ನಮಗೆ ಎಡೆಕೊಡು ಕೃಪಾಮಯಿ' ಎಂದು ಮಹಾಲಕ್ಷ್ಮೀಯ ಅಡಿಗಳಿಗೆ ಎರಗಿದರು."[೧೮] ಹೀಗೆ ನೃಪತುಂಗ ಚಕ್ರವರ್ತಿಯ ಬದುಕು ಬೆಳಕಿನೊಂದಿಗೆ ಅಂತ್ಯವಾಗುತ್ತದೆ.

ಆರಂಭದಲ್ಲಿ ಉಲ್ಲೇಖಿಸಿದಂತೆ ಇಲ್ಲಿನ ವಸ್ತುವು ೯ ಮತ್ತು ೧೦ನೇ ಶತಮಾನಕ್ಕೆ ಸಂಬಂಧಿಸಿದ್ದಾಗಿದೆ. ಆ ಕಾಲದ ಧರ್ಮ ಹಾಗೂ ಮೌಲ್ಯದ ಪ್ರತೀಕಯೆನಿಸಿದ ತ್ಯಾಗ, ಕ್ಷಾತ್ರಗುಣ, ಸ್ವಾಮಿನಿಷ್ಠೆಯಂತಹ ಸಂಗತಿಗಳು ಈ ಕಾದಂಬರಿಯಲ್ಲಿ ಕಾಣಸಿಗುತ್ತವೆ. ಅನಿವಾರ್ಯವೆಂಬಲ್ಲಿ ಕೆಲ ಮಾರ್ಪಾಡುಗಳನ್ನು ಮಾಡಿಕೊಂಡು ತ.ರಾ.ಸು. ಅವರು ಈ ಕಾದಂಬರಿಯನ್ನು ರಚಿಸಿದ್ದಾರೆ.

**ಸಿಡಿಲ ಮೊಗ್ಗು:**

'ಸಿಡಿಲ ಮೊಗ್ಗು' ತ.ರಾ.ಸು. ಅವರ ಎರಡನೆಯ ಐತಿಹಾಸಿಕ ಕಾದಂಬರಿ. ಇದನ್ನು ೧೯೫೬ರಲ್ಲಿ ಪ್ರಕಟಿಸಿದರು. ಹೊಯ್ಸಳೇಶ್ವರ ಎಂಬ ಕಾದಂಬರಿಯನ್ನು ರಚಿಸುವ ಯೋಜನೆಯನ್ನು ಹಾಕಿಕೊಂಡು, ಅದರ ಮೊದಲ ಖಂಡವಾಗಿ ಈ 'ಸಿಡಿಲ ಮೊಗ್ಗು' ಕಾದಂಬರಿಯನ್ನು ನೀಡಿದರು. ಆದರೆ ಮುಂದಿನ ಭಾಗಗಳು ಪ್ರಕಟವಾಗದೆ ಅಪೂರ್ಣವಾಗಿಯೇ ಉಳಿದುದ್ದೊಂದು ವಿಷಾದದ ಸಂಗತಿ ನಂತರ 'ಕೀರ್ತಿನಾರಾಯಣ' ಪ್ರಕಟಗೊಂಡರೂ ಅದು 'ಸಿಡಿಲ ಮೊಗ್ಗು'ವಿಗೆ ಪೂರಕವಾಗಿರಲಿಲ್ಲ.

'ಸಿಡಿಲ ಮೊಗ್ಗು' "ಈ ಕಾದಂಬರಿಗೆ ವಸ್ತು ಆ ಕಾಲದ ಶಾಸನ ಸಾಹಿತ್ಯ, ಶಾಸನಗಳಲ್ಲಿ ಎಳೆ ಎಳೆಯಾಗಿ ಕಂಡು ಬರುವುದಕ್ಕೆ ಒಂದು ಸುಸ್ಪಷ್ಟ ರೂಪವನ್ನು ಕೊಡಲು ಮಾತ್ರ ನಾನು ಪ್ರಯತ್ನಪಟ್ಟಿದ್ದೇನೆ. ನನ್ನ ಕಲ್ಪನೆ ಉಚ್ಛೃಂಖಲ ವೃತ್ತಿಯನ್ನು ಅನುಸರಿಸಲು ಆದಷ್ಟು ಮಟ್ಟಿಗೂ ಎಡೆಕೊಟ್ಟಿಲ್ಲ 'ಹೊಯ್ಸಳೇಶ್ವರ' ಎಂಬ ಬೃಹತ್ ಕಾದಂಬರಿಯ ಪ್ರಥಮ ಖಂಡವಾಗಿ 'ಸಿಡಿಲಮೊಗ್ಗು' ಬರೆಯುವಾಗ ನನಗೆ ಆತ್ಮತೃಪ್ತಿ ನೀಡಿದೆ. ನೀನು ಪಡೆಯಬೇಕಾದ ಫಲ ಲೋಕತೃಪ್ತಿ. ಅದು ಸಿದ್ಧಿಯಾಗಬಹುದೆಂಬ ನಂಬಿಕೆಯೇ ನನ್ನ ಲೇಖನಿಯನ್ನು ನಡೆಸುತ್ತಿರುವ ಬಲ"[೨೯] ಎಂದು ವಿವರಣೆ ನೀಡಿದ ತ.ರಾ.ಸು. ಅವರು ಆ ಕಾಲದ ಶಾಸನ ಸಾಹಿತ್ಯ ಮತ್ತು ಹೊಯ್ಸಳರ ಇತಿಹಾಸದ ಎಳೆಗಳಿಂದ ಈ ಕಾದಂಬರಿಯನ್ನು ರಚಿಸಿದ್ದೇನೆಂದು ಸ್ಪಷ್ಟಪಡಿಸಿದ್ದಾರೆ.

ಕಾವ್ಯಲೋಕದ ಪ್ರಾಕೃತಿಕ ವರ್ಣನೆಯೊಂದಿಗೆ ಕಾದಂಬರಿಯು ಪ್ರಾರಂಭಗೊಳ್ಳುತ್ತದೆ. ಪ್ರಾಕೃತಿಕ ನಿತ್ಯಲೀಲಾ ವಿಲಾಸ ಇಲ್ಲಿ ಮಡುಗಟ್ಟಿನಿಂತಿರುವುದನ್ನು ಕಾಣುತ್ತೇವೆ. "ಸೂರ್ಯೋದಯದ ಮಂಗಲವಾರ್ತೆಯನ್ನು ಲೋಕಕ್ಕೆ ಸಾರುವ ಪ್ರಭಾತ ವಾದ್ಯರವದಂತೆ, ಉದಯರಾಗವನ್ನು ಹಾಡುವ ಗಾಯಕರಂತೆ, ನುಡಿವ ಕೋಟ್ಯಾಂತರ ಹಕ್ಕಿಗಳ ಉಲಿಹವನ್ನು ಕೇಳಿ ಕಣ್ದೆರೆದಳು ವಿಪಿನ ಶ್ರೀರಮಣಿ. ತಾಯಿಯೆದ್ದಾಗ, ತಾವೂ ಎದ್ದು, ಆಡುವ ಮಕ್ಕಳಂತೆ, ಜಿಂಕೆ, ನವಿಲುಗಳು ನಲಿದವು. ಮೈ ಮೇಲೆ ಬಿದ್ದ ಇಬ್ಬನಿ ಹನಿಯನ್ನು, ಮೈದೋಗಲನ್ನು ಕಂಪಿಸಿ, ಬದರಿ, ಕೊಂಬೆಯಿಂದ ಕೊಂಬೆಗೆ ಹಾರಿ, ಕಾಡಿಗೆಲ್ಲಾ ಹಗಲಾದ ಸುದ್ದಿಯನ್ನು ಸಾರಿದವು ವಾನರ ಕೋಟಿ...... ಮನೆಯ ಸಣ್ಣ ಮಕ್ಕಳ ಕೂಗಿನಿಂದ, ಅರೆನಿದ್ದೆಯಲ್ಲಿ ಎಚ್ಚರವಾಗಿ, 'ಇದೇನು ಗದ್ದಲ'ವೆಂದು ಮಡದಿ ಮಕ್ಕಳನ್ನು ಜಡಿಯುವ ಗೃಹಸ್ವಾಮಿಯಂತೆ ಅಬ್ಬರಿಸಿತು. ಹಳುವಿನಲ್ಲಿ ಹುದುಗಿದ ವನರಾಜ ವ್ಯಾಘ್ರ, ಮನೆಯೊಡೆಯುವ ಈ ನಿದ್ರಾಚಾಪಲ್ಯವನ್ನರಿತು, ಗಟ್ಟಿಯಾಗಿ ನಗಲಾರದೆ, ಮುಸಿ ಮುಸಿ ನಗುವ ದಾಸಿಯರ ಚೆಲುಮೊಗಗಳಂತೆ ಹೂವುಗಳು ಅರಳಿದವು."[೩೦] ಎಂಬಂತೆ ತ.ರಾ.ಸು. ಅವರ ಕಲ್ಪನಾ ಲಹರಿ ಇಲ್ಲಿ ಹರಿಯುತ್ತ ಹೋಗುತ್ತದೆ. ಅವರ ಕಲ್ಪನೆಯಲ್ಲಿ ಪ್ರಕೃತಿದೇವಿ ವಿವಿಧ ಮುಖಗಳಿಂದ ಕಂಗೊಳಿಸುತ್ತಾಳೆ. ಸೊಸೆವೂರಿನಿಂದ ಬಳ್ಳಿಗಾವೆಗೆ ಪ್ರಯಾಣ ಬೆಳೆಸುವ ರಾಜಪರಿವಾರದ ವರ್ಣನೆಯೇ ಕಾದಂಬರಿಯ ಕಾಲುಭಾಗವನ್ನು ಆವರಿಸಿಕೊಂಡಿದೆ.

"ವಿಶಿಷ್ಟ ಕಥನ ತಂತ್ರದ ಬಳಕೆಯಿಂದ ತ.ರಾ.ಸು. ಹೊಯ್ಸಳರ ಹಿನ್ನೆಲೆಯನ್ನು, ಯುವರಾಜ ಎರೆಯಂಗದೇವ, ಮಹಾಮಂಡಲೇಶ್ವರ ವಿನಯಾದಿತ್ಯ ಪಾತ್ರಗಳನ್ನು ಸೃಷ್ಟಿಸಿ, ವ್ಯಾಧಿ ದುರ್ಬಲನಾದ ಬಲ್ಲಾಳ, ವಿಷ್ಣುವರ್ಧನ, ಉದಯಾದಿತ್ಯರ ಜನನದ ಹಿನ್ನೆಲೆ, ವೃದ್ಧ ವಿನಯಾದಿತ್ಯ, ವ್ಯಾಧಿಗ್ರಸ್ತ ಬಲ್ಲಾಳರೊಡನೆ ಬಳ್ಳಿಗಾಮೆಗೆ ಪ್ರಯಾಣ ಮಾಡುವಾಗ ವಿಷ್ಣುವರ್ಧನನ ಮನದಲ್ಲಾಗುವ ಹೋರಾಟ, ಚಕ್ರವರ್ತಿಯ ಒಂದು ಮಾತಿಗೆ ತನ್ನವರ

ಹಿತವನ್ನು ಲೆಕ್ಕಿಸದೆ ಸಹಕುಟುಂಬವಾಗಿ ತಂದೆ, ತಾತಕೈಗೊಂಡ ಪ್ರಯಾಣ. "ಛಿ–ದಾಸ್ಯಕ್ಕೆ ಇನ್ನೊಂದು ಹೆಸರು 'ಮಹಾಂಡಲೇಶ್ವರ' ಎಂಬುವಷ್ಟು ಸ್ವಾಭಿಮಾನ ಕೆರಳಿ, ಆ ಮನಸ್ಥಿತಿಯಲ್ಲಿಯೇ ಚಕ್ರವರ್ತಿಯ ಎದುರು ತುಂಬಿದೋಲಗದಲ್ಲಿ ಭಾಗದ ವಿಷ್ಣುವರ್ಧನ, ಅದರಿಂದಾದ ಪರಿಣಾಮಗಳು, ಶಾಂತಲೆ–ವಿಷ್ಣುವರ್ಧನರ ಅನುರಾಗದ ಅಂಕುರಾರ್ಪಣ, ಅಲ್ಲಿಂದ ದೋರಸಮುದ್ರಕ್ಕೆ ಪ್ರಯಾಣ ಇಷ್ಟೇ ವಸ್ತುವನ್ನು ಚಿತ್ರಿಸಿರುವ ರೀತಿ ಮಾತ್ರ ಅನಾದೃಶವಾಗಿದೆ; ಅಸದೃಶವಾಗಿದೆ"[೨೧] ಎಂಬ ನಾ.ಪ್ರಭಾಕರ ಮಾತು ಸತ್ಯಕ್ಕೆ ಹತ್ತಿರವಾಗಿದೆ.

ವಿನಯಾದಿತ್ಯನು ದ್ವಾರಸಮುದ್ರದಿಂದ ದೂರದ ಬಳ್ಳಿಗಾಮೆಗೆ ಪ್ರಯಾಣ ಬೆಳೆಸಲು ಕಾರಣ, ಬನವಾಸಿ ಹನ್ನೆರಡು ಸಾಮಂತನಾದ ಸರ್ವದೇವನಿಂದ ಬಂದ ಪತ್ರ ಮತ್ತು ಅದಕ್ಕಿಂತಲೂ ಮುಖ್ಯವಾಗಿ ಅದರೊಂದಿಗಿರುವ ಅಯ್ಯಾವೊಳೆಯ ಅಗ್ರಹಾರದ ಕಾಳಿದಾಸಯ್ಯನವರು ಬರೆದ ಓಲೆಯಾಗಿತ್ತು. "ನಮ್ಮ ಚಿಕ್ಕ ತಂದೆಯವರಾದ ಮಹಾಸಾಮಂತಾಧಿಪತಿ ಸರ್ವದೇವರು ಶ್ರೀಮದ್ರಾಜಧಾನಿ ಬಳ್ಳಿಗಾಮೆಯಲ್ಲಿ ನಡೆಸಲಿರುವ ದೇವತಾ ಪ್ರತಿಷ್ಠೆಯ ಶ್ರೀ ಕಾರ್ಯಕ್ಕೆ ತತ್ಕಾಲದಲ್ಲಿ ಶ್ರೀ ಮದನಾದಿ ಅಗ್ರಹಾರ ಅಯ್ಯಾವೊಳೆಯಲ್ಲಿ ಬಿಡಾರ ಮಾಡಿರುವ ಚಕ್ರವರ್ತಿಗಳೂ ಬರಲೊಪ್ಪಿ, ಆ ವೇಳೆಗೆ ತಾವೂ, ತಮ್ಮ ಮಕ್ಕಳು, ಅವರು ಕುಟುಂಬ ಪರಿವಾರ ಸಮೇತರಾಗಿ ಬಂದು ಚಕ್ರವರ್ತಿಗಳನ್ನು ಕಾಣುವಂತೆ, ತಿಳಿಸಿದುದರಿಂದ ತಾವು ಖಂಡಿತವಾಗಿಯೂ ಬರಬೇಕು. ಚಕ್ರವರ್ತಿಗಳೂ ತಮ್ಮೊಂದಿಗೆ, ತಮ್ಮ ಕುಮಾರರೊಂದಿಗೆ ಪರ್ಯಾಲೋಚಿಸಬೇಕಾದ ರಾಜಕಾರ್ಯದ ಮಾತುಗಳೂ ಇರುವಂತಿದೆ. ಆದುದರಿಂದ ತಾವು ಏನೇ ಕಾರ್ಯಭಾರವಿದ್ದರೂ, ಬಳ್ಳಿಗಾಮೆಗೆ ಬಂದು ಚಕ್ರವರ್ತಿಗಳ ಸಂದರ್ಶನ ಮಾಡಬೇಕಾಗಿ ವಿನಂತಿ."[೨೨] ಎಂದು ಆಹ್ವಾನ ಪತ್ರ ಕಳಿಸಿದುದ್ದರಿಂದ ವಿನಯಾದಿತ್ಯನು ಪ್ರಯಾಣಕ್ಕೆ ವ್ಯತಿರಿಕ್ತವಾದ ವಾತಾವರಣವಿದ್ದರೂ ಕುಟುಂಬಸಮೇತ ಬಳ್ಳಿಗಾಮೆಗೆ ಪ್ರಯಾಣ ಬೆಳೆಸಬೇಕಾಗಿ ಬರುತ್ತದೆ. ಇದಕ್ಕೆ ಚಕ್ರವರ್ತಿಗಳ ಮೇಲೆ ವಿನಯಾದಿತ್ಯನು ಇರಿಸಿದ ಬಲವಾದ ನಿಷ್ಠೆಯೂ ಪರೋಕ್ಷವಾಗಿ ಕಾರಣವಾಗಿರುತ್ತದೆ. ಯಾಕೆಂದರೆ, 'ದೇವತಾ ದರ್ಶನ ಮತ್ತು ಪ್ರಭುದರ್ಶನ' ಎರಡೂ ಒಂದೇ ಎಂಬ ಭಾವನೆ ಅವನದು.

ಈ ಪ್ರಯಾಣದ ಮಧ್ಯದಲ್ಲಿ ವಿಷ್ಣುವರ್ಧನನ ಪ್ರಕೃತಿ ಪ್ರೇಮ, ಪಿತೃಭಕ್ತಿ, ಸೋದರ ಪ್ರೇಮ, ತಾಯಿಯನ್ನು ಕುರಿತಾದ ಪ್ರೀತಿ–ವಾತ್ಸಲ್ಯ, ಸ್ವಾಭಿಮಾನ ಮತ್ತು ಅವನಲ್ಲಿನ ಮಾನವೀಯ ಮೌಲ್ಯಗಳನ್ನು ಕಾದಂಬರಿಕಾರರು ಆಕರ್ಷಣೀಯವಾಗಿ ಚಿತ್ರಿಸಿದ್ದಾರೆ. ತನ್ನ ಅಣ್ಣನ ವ್ಯಾಧಿಗೆ ಮರುಗುವ ವಿಷ್ಣುವರ್ಧನನು ತನ್ನ ತಂದೆಗೆ ಪ್ರಶ್ನಿಸುವ ರೀತಿಯನ್ನು ನೋಡಿ. "ಅದೆಂಥ ಮಾತು ಅಪ್ಪಾಜಿ? ಈ ಚಳಿಗಾಳಿಯ ಪ್ರಯಾಣವನ್ನು ಸಹಿಸಲಾರದೆ, ಅರ್ಧದಾರಿಯವರೆಗೆ ಬಂದೂ ಹೆಂಗಸರು ಹಿಂದುರುಗಿದರು ಎಂದರೂ ಚಕ್ರವರ್ತಿಗಳು

ಬೇಸರ ಮಾಡಿಕೊಳ್ಳುತ್ತಾರೆಯೇ? ಈ ಸಣ್ಣಮಾತು ಅವರಿಗೆ ಅರ್ಥವಾಗುವುದಿಲ್ಲವೇ? ಅವರು ಮನುಷ್ಯರಲ್ಲವೇ? ಇನ್ನೊಬ್ಬರ ಕಷ್ಟಸುಖ ಅರ್ಥವಾಗದಷ್ಟು ಮೈಮನಸ್ಸು ಮರಗಟ್ಟಿ ಹೋಗಿರುತ್ತದೆಯೇ ಚಕ್ರವರ್ತಿ ಎನಿಸಿಕೊಂಡವರಿಗೆ?" ಮಹಾಮಂಡಲೇಶ್ವರ ಪದವಿಯ ಹಣೆಬರಹವೂ ಇಷ್ಟೇನೇ? ಆಳಿಗಿಂತ ಇವರು ಮೇಲಾದುದೇನು? ಇರಲು ಅರಮನೆ, ಹೊರಲು ಕಿರೀಟ ಎರಡು ಬಿಟ್ಟರೆ ಇವರೂ ಊಳಿಗದವರೇ"[೨೩] ಎಂಬಂಥಭಾವನೆಗಳು ವಿಷ್ಣುವರ್ಧನನ ಮನದಲ್ಲಿ ಮೂಡುವುದು ಗಮನಾರ್ಹವಾಗಿದೆ.

ವಿನಯಾದಿತ್ಯನ ಪರಿವಾರವು ಬಳ್ಳಿಗಾಮೆಯನ್ನು ತಲುಪಿದಾಗ ಅವರಿಗೆ ಸಿಗಬೇಕಾದ ಸ್ವಾಗತವು ಸಿಗುವುದಿಲ್ಲ. ಇದರಿಂದ ವಿನಯಾದಿತ್ಯನೊಂದಿಗೆ ಎರೆಯಂಗದೇವನಿಗೂ ಅಸಮಾಧಾನವಾಗುತ್ತದೆ. ಇದಕ್ಕೆ ಕಾರಣ, ಹೊಯ್ಸಳರು ಚಕ್ರವರ್ತಿಯೊಂದಿಗೆ ಇರಿಸಿಕೊಂಡ ಆತ್ಮೀಯ ಸಂಬಂಧವೇ ಆಗಿದೆ. ಇದರಿಂದ ಅಸೂಯೆ ಪಡುತ್ತಿದ್ದ ಸರ್ವದೇವನು ಆ ಮೂಲಕ ಅವಮಾನಿಸುತ್ತಾನೆ. ಪರಿಚಯವಿರಲಾರದ ಹೆಗ್ಗಡೆ ಮಾರಸಿಂಗಯ್ಯನು ಇವರನ್ನು ಬರಮಾಡಿಕೊಳ್ಳುತ್ತಾನೆ. ಅಷ್ಟೇಕೆ ಅವರಿಗೆ ಉಳಿಯಲು ಭವ್ಯವಾದ ಬಂಗಲೆಯನ್ನೇ ನೀಡುತ್ತಾನೆ. ಆದರೆ ಈ ಘಟನೆ ಚಕ್ರವರ್ತಿಯ ಬಗೆಗೆ ವಿಷ್ಣುವರ್ಧನನಲ್ಲಿ ದ್ವೇಷದ ಕಿಡಿ ಹೊತ್ತಲು ಕಾರಣವಾಗುತ್ತದೆ. "ಓಲಗ ಶಾಲೆಯಲ್ಲಿ ಚಕ್ರವರ್ತಿಯನ್ನು ಭೇಟಿಯಾಗಲು ಹೋಗುವಾಗ ಅವನಲ್ಲಿ ಸಾಮಂತ ಪದವಿಯು ಕೇವಲ ದಾಸ್ಯಕ್ಕೆ ಮೀಸಲು, ತಾನು ಓರ್ವ ಚಕ್ರವರ್ತಿಯಾಗಿ ಮೆರೆಯಬೇಕೆಂಬ ಅದಮ್ಯ ಬಯಕೆಯು ಮೂಡುತ್ತದೆ. ಸ್ವಭಾವತಃ ಮುಂಗೋಪಿಯಾದ ವಿಷ್ಣುವರ್ಧನನು ಓಲಗಶಾಲೆಯಲ್ಲಿ ಚಕ್ರವರ್ತಿಗೆ ವಂದಿಸದೆ ಅಗೌರವ ತೋರಿ, ಅವನ ಕೋಪಕ್ಕೆ ಗುರಿಯಾಗುತ್ತಾನೆ"[೨೪] ಈ ಹಿನ್ನೆಲೆಯಲ್ಲಿ ಓಲಗದಲ್ಲಿ ನಡೆಯುವ ಈ ಪ್ರಸಂಗವು ಉಲ್ಲೇಖಾರ್ಹವಾಗಿದೆ. "ವಿಷ್ಣುವರ್ಧನ ಚಕ್ರವರ್ತಿಗೆ ಮಣಿದ ಒಲ್ಲದ ರೀತಿ ಎಲ್ಲರಿಗೂ ಕಾಣುವಂತಿತ್ತು. ಅದನ್ನು ಗಮನಿಸಿದ, ಚಕ್ರವರ್ತಿಗಳ ಬಳಿ ಅದುವರೆಗೂ ಏನೆಂದೂ ಮಾತನಾಡದೆ ನಿಂತಿದ್ದ ಪ್ರಧಾನಾಮಾತ್ಯ ಕಾಳಿದಾಸಯ್ಯ _

'ನಿಮ್ಮ ಕುಮಾರನಿಗೆ ಕ್ರಮವಾದ ವಿದ್ಯಾಭ್ಯಾಸ ನಡೆಯುತ್ತಿರದೆಯೇ? ಎಂದು ಕೇಳಿದ, ಎರೆಯಂಗದೇವನತ್ತ ತಿರುಗಿ .......' ನಡೆಯುತ್ತಿದೆ' ಎಂದು ಹೇಳಿದ.

ನಿಮ್ಮ ಕುಮಾರರಿಗೆ ಉಳಿದ ಶಾಸ್ತ್ರಗಳನ್ನು ಕಲಿಸಿದಂತೆಯೇ, ಗುರುಗಳು ವಿನಯವನ್ನೂ ಅಷ್ಟು ಚೆನ್ನಾಗಿ ಉಪದೇಶ ಮಾಡಬೇಕೆಂದು ಹೇಳಿ"[೨೫] ಎಂದು ಪ್ರಧಾನಿ ಕಾಳಿದಾಸಯ್ಯ ವ್ಯಂಗ್ಯವಾಗಿ ಹೇಳಿದಾಗ, ಎರೆಯಂಗದೇವ ಮತ್ತು ವಿನಯಾದಿತ್ಯರ ಮುಖಗಳು ಕಪ್ಪಿಕ್ಕುತ್ತವೆ. ಆದರೆ ಸ್ವಾಭಿಮಾನದ ಸಂಕೇತವಾದ ವಿಷ್ಣುವರ್ಧನನು, 'ಯಾರಿಗೆ ಏನು ಕಲಿಸಬೇಕೆಂಬುದು ನಮ್ಮ ಗುರುಗಳಿಗೆ ತಿಳಿದಿದೆ" ಎಂದು ನುಡಿದಾಗ, ಪ್ರಧಾನಿ ಮುಖಕ್ಕೆ ಹೊಡೆದಂತಾಗುತ್ತದೆ. ಈ ಸಂದರ್ಭದಲ್ಲಿ ಪ್ರಧಾನಿ ಮತ್ತು ವಿಷ್ಣುವರ್ಧನನ ಮಧ್ಯೆ ವಾಗ್ವಾದ ನಡೆದು ಕಾಳಿದಾಸಯ್ಯನಿಗೆ

ಸೋಲಾಗುತ್ತದೆ. ಈ ಒಂದು ಅಪಮಾನವನ್ನು ಮುಂದಿರಿಸಿಕೊಂಡು ಕಾಳಿದಾಸಯ್ಯನು ವಿಷ್ಣುವರ್ಧನನ ಮೇಲೆ ಪ್ರತೀಕಾರಕ್ಕೆ ಮುಂದಾಗುತ್ತಾನೆ. ಈ ಕಾರಣದಿಂದಾಗಿ ಎರೆಯಂಗದೇವನು ತನ್ನ ಅಧಿಕಾರವನ್ನು ಕಳೆದುಕೊಳ್ಳುತ್ತಾನೆ. ಅಧಿಕಾರದ ಪ್ರತೀಕವಾದ ಖಡ್ಗವನ್ನು ಎರೆಯಂಗದೇವನು ಚಕ್ರವರ್ತಿಗೆ ಒಪ್ಪಿಸುತ್ತಾನೆ.

ಈ ವೇದನೆಯಲ್ಲೇ ವಿನಯಾದಿತ್ಯನ ಪರಿವಾರ ಸೊಸೆವೂರಿಗೆ ಮರುಳುವಂತಾಗುತ್ತದೆ. ಆದರೆ ದು:ಖತಪ್ತ ಮನೋಸ್ಥಿತಿಯಲ್ಲಿ ಕಾದಂಬರಿಯ ಕೊನೆಯಲ್ಲಿ ವಿಷ್ಣುವರ್ಧನನು ಹೇಳುವ ಮಾತುಗಳು ಗಮನಾರ್ಹವಾಗಿವೆ. "ಅಂತೂ ಈ ಭಾರಿ, ಬಹುದಿನ ನಿಮ್ಮನ್ನು ಇಟ್ಟುಕೊಂಡು ಅದರಿಸುವ ಭಾಗ್ಯ ಬಳ್ಳಿಗಾಮೆಗಿರಲಿಲ್ಲ, ಮತ್ತೊಮ್ಮೆ ಬರಬೇಕು'. ಕುಗ್ಗಿದ ಧ್ವನಿಯಲ್ಲಿ ಹೇಳಿದ ಮಾರಸಿಂಗಮಯ್ಯ. ಆ ಮಾತಿಗೆ ಎರೆಯಂಗದೇವ ಏನೂ ಉತ್ತರ ಕೊಡಲಾಗದೆ, ಸುಮ್ಮನೆ ತಲೆ ತಗ್ಗಿಸಿದ. ಏನೋ ಒಂದು ಬಗೆಯ ಅಸಹಜ ಮೌನ ವ್ಯಾಪಿಸಿ, ಎಲ್ಲರ ಹೃದಯವನು ಹಿಂಡಿತು. 'ಬರುತ್ತೇವೆ – ಹೆಗ್ಗಡೆಗಳೇ ಮತ್ತೇ ಬಂದೇ ಬರುತ್ತೇವೆ. ಅತ್ತು ಹಿಂದಿರುಗುವುದಕ್ಕಲ್ಲ ಗೆದ್ದು ಆಳುವುದಕ್ಕೆ' ಆ ಮೌನವನ್ನು ಮುರಿದು ಕರ್ಕಶವಾದ ಧ್ವನಿಯಲ್ಲಿ ಹೇಳಿದ ವಿಷ್ಣುವರ್ಧನ. ಆ ಮಾತನ್ನು ಕೇಳಿ, ಅಲ್ಲಿ ನಿಂತವರಿಗೂ ಇದ್ದಕ್ಕಿದ್ದ ಹಾಗೇ ಸಾಲು ಸಾಲಾಗಿ ಸಿಡಿಲು ಮೊಳಗಿದಂತಾಯಿತು. ಮಧ್ಯಾಹ್ನದ ಬಿಸಿಲು ಮಿಂಚಿನ ಗೊಂಚಲಾಗಿ ಹೊಳೆದಂತಾಯಿತು."[೨೬] ಇಲ್ಲಿ ಕಾದಂಬರಿಕಾರರು ವಿನಯಾದಿತ್ಯನ ಅಂತ್ಯವನ್ನು ಧ್ವನಿಸುವಂತೆ ಆತನ ಮೊಮ್ಮಗ ವಿಷ್ಣುವರ್ಧನನ ಉಜ್ವಲ ಭವಿಷತ್ತನ್ನೂ ಧ್ವನಿಸುತ್ತಾರೆ. ಆ ಭವಿತವ್ಯದ ಪ್ರತೀಕವೇ 'ಸಿಡಿಲ ಮೊಗ್ಗು'.

**ಕೀರ್ತಿನಾರಾಯಣ:**

'ಕೀರ್ತಿನಾರಾಯಣ'ವು ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳಲ್ಲಿ ಮೂರನೆಯದು. ೧೯೫೬ರಲ್ಲಿ ಇದನ್ನು ಪ್ರಕಟಿಸಿದರು. ಇದು ಹೊಯ್ಸಳರ ಇತಿಹಾಸವನ್ನು ಆಧರಿಸಿದ ಎರಡನೆಯ ಕಾದಂಬರಿಯಾಗಿದೆ. 'ಸಿಡಿಲ ಮೊಗ್ಗು'ವಿನ ನಂತರ ಇದು ಹೊರಬಂದಿತು. ಮೊದಲು 'ಹೊಯ್ಸಳೇಶ್ವರ ವಿಷ್ಣುವರ್ಧನ' ಎಂಬ ಹೆಸರನ್ನು ಹೊತ್ತ ಈ ಕಾದಂಬರಿಯು ನಂತರ ದ್ವಿತೀಯ ಮುದ್ರಣದಲ್ಲಿ 'ಕೀರ್ತಿನಾರಾಯಣ' ಎಂಬ ಶೀರ್ಷಿಕೆಯೊಂದಿಗೆ ಪ್ರಕಟಗೊಂಡಿತು.

ಹೊಯ್ಸಳರ ಇತಿಹಾಸದಲ್ಲಿ ವಿಷ್ಣುವರ್ಧನನ ಹೆಸರು ಅಜರಾಮರವಾಗಿದೆ. ಇದಕ್ಕೆ ಕಾರಣ ಅವನ ಉತ್ತುಂಗ ಪ್ರಾಯವಾದ ಸಾಧನೆಯೇ ಆಗಿದೆ. ಅಂತಹ ಮಹಾಚೇತನವಾದ ವಿಷ್ಣುವರ್ಧನನ ಬದುಕು ಮತ್ತು ಅವನ ಕಲಾವಂತಿಕೆಯನ್ನು ಕನ್ನಡ ಜನತೆಯ ಹೃದಯದಲ್ಲಿ ಶಾಶ್ವತವಾಗಿ ಉಳಿಯುವಂತೆ ಮಾಡಿದ್ದಾರೆ. ತ.ರಾ.ಸುಬ್ಬರಾಯರು. "ಕರ್ನಾಟಕವನ್ನು ಆಳಿದ ನೂರಾರು ಜನ ರಾಜಾಧಿರಾಜ ಮಹಾರಾಜರ ಮಾಲೆಯಲ್ಲಿ ಧ್ರುವ ಕಾಂತಿಯಿಂದ

ಬೆಳಗುತ್ತಿರುವ ಉಜ್ವಲ ತಾರೆ ಹೊಯ್ಸಳ ವಿಷ್ಣುವರ್ಧನ ಮಹಾರಾಜನದು. ಇಂದು ನಾವು ಕರ್ನಾಟಕವೆಂದು ಪಡೆಯುತ್ತಿರುವಷ್ಟು ಭಾಗವನ್ನು ಒಂದು ನಾಡಾಗಿ ಕಟ್ಟಿದ ಮೊದಲ ಅರಸು ವಿಷ್ಣುವರ್ಧನ. ಕಲಾರಂಗದಲ್ಲಂತೂ ಈ ದೊರೆಯ ಹೆಸರು, ಆತನ ಕಾಲದಲ್ಲಿ, ಆತನಿಂದ, ಆತನ ಪರಿವಾರದವರಿಂದ ನಿರ್ಮಿತವಾದ ನೂರಾರು ದೇವಾಲಯ ಬಸದಿಗಳಿಂದಾಗಿ ಆಚಂದ್ರಾರ್ಕಸ್ಥಾಯಿಯಾಗಿದೆ..." ಇಲ್ಲಿ ವಾಚಕರ ಮುಂದಿರುವುದು, ನನ್ನಿಂದ ರಚಿತವಾಗುತ್ತಿರುವ 'ಹೊಯ್ಸಳೇಶ್ವರ' ಎಂಬ ಬೃಹತ್ ಕಾದಂಬರಿಯ ಒಂದು ಖಂಡ ಮಾತ್ರ, ವಿಷ್ಣುವರ್ಧನನ ಜೀವನದ ಬಹುಮುಖ್ಯ ಸಾಧನೆಗಳಲ್ಲೊಂದಾದ ತಲಕಾಡು ವಿಜಯದ ಚಿತ್ರ. ಉಳಿದ ಭಾಗವೂ ಕನ್ನಡಿಗರ ಹರಕೆಯಿದ್ದರೆ, ಆದಷ್ಟು ಬೇಗ ಹೊರ ಬರುತ್ತದೆ."[೨೭] ಎಂದು ತ.ರಾಸು. ಅವರು ಈ ಕಾದಂಬರಿ ರಚನೆಯ ಹಿನ್ನೆಲೆಯನ್ನು ಸ್ಪಷ್ಟಪಡಿಸಿದ್ದಾರೆ.

ಹೊಯ್ಸಳ ದೊರೆ ವಿಷ್ಣುವರ್ಧನನು 'ತಲಕಾಡು' ದಂಡಯಾತ್ರೆ ಕೈಕೊಳ್ಳುವುದೇ ಈ ಕಾದಂಬರಿಗೆ ಮೂಲಾಧಾರವಾಗಿದೆ. ಸಾಮ್ರಾಜ್ಯದ ಆತಂಕ ಪರಿಸ್ಥಿತಿಯೊಂದಿಗೆ ಕಾದಂಬರಿ ಆರಂಭವಾಗುತ್ತದೆ. ಅನ್ಯರ ಉಪಟಳದಿಂದ ತತ್ತರಿಸಿ ಹೋಗಿದ್ದ ಹೊಯ್ಸಳ ಸಾಮ್ರಾಜ್ಯ ಲಕ್ಷ್ಮೀಯನ್ನು ರಕ್ಷಿಸುವ ಸಲುವಾಗಿ ಪ್ರಥಮ ವಿನಯಾದಿತ್ಯ, ನೃಪಕಾಮ ಹೊಯ್ಸಳ ದೊರೆಗಳ ಆಯುಷ್ಯ ಕೊನೆಗೊಂಡಿರುತ್ತದೆ. "ನೃಪಕಾಮ' ದೊರೆಯ ಬಳಿಕ, ಪಟ್ಟಕ್ಕೆ ಬಂದ ಇಮ್ಮಡಿ ವಿನಯಾದಿತ್ಯ ದೊರೆಯ ಕಾಲದಲ್ಲಿ ಹೊಯ್ಸಳರ ಪಾಲಿಗೆ ವಿಧಿ ಕೊಂಚ ಸುಮುಖವಾಯಿತು. ಆತನ ಪ್ರಚಂಡ ಖಡ್ಗಾಘಾತದ ಇದಿರು ಹೊಯ್ಸಳರ ಕುಲ ವೈರಿಗಳಾದ ಚೆಂಗಾಳ್ವ, ಕೊಂಗಾಳ್ವರು, ಆಳ್ವಖೇಡದ ಅರಸುಗಳು – ಸೋತು, ತಲೆ ಬಾಗಿದುದಷ್ಟೇ ಅಲ್ಲ: ಕನಸಿನಲ್ಲೂ 'ರಕ್ಕಸ ಹೊಯ್ಸಳ'ನೆಂಬ ಆರಕ್ಕರದ ಬಿರುದು ಕೆತ್ತಿಸಿದ ಪಳವಿಗೆಯನ್ನು ಕಂಡು ಬೆದರುವಂತಾಯಿತು."[೨೮] ವಿನಯಾದಿತ್ಯ ಹೊಯ್ಸಳರಾಯನ ಪುತ್ರ ಯುವರಾಜ ಎರೆಯಂಗದೇವ ತಂದೆಯಷ್ಟೇ ಪರಾಕ್ರಮಿಯಾಗಿರುತ್ತಾನೆ. ಇವನು ಚೋಳರನ್ನು ಹಿಮ್ಮೆಟ್ಟಿಸಿ 'ಚಾಲುಕ್ಯ ಭುಜಬಲದಂಡ' ಎಂಬ ಪ್ರಶಸ್ತಿಗೆ ಪಾತ್ರದಾರನಾಗುತ್ತಾನೆ. ಆದರೆ ಅಕಾಲಿಕ ಮರಣ ರಾಜ್ಯಕ್ಕೆ ತುಂಬಲಾರದ ನಷ್ಟದಂತೆ ತೋರುತ್ತದೆ. ಜೊತೆಗೆ ವಯೋವೃದ್ಧನಾದ ವಿನಯಾದಿತ್ಯನ ಬಾಳ ಬಳ್ಳಿಯೂ ಕಮರುತ್ತದೆ.

ಇಂಥ ಸಂದಿಗ್ಧ ಸ್ಥಿತಿಯಲ್ಲಿ ಎರೆಯಂಗದೇವನ ಜೇಷ್ಠ ಪುತ್ರ ಬಲ್ಲಾಳರಾಯ ಅಧಿಕಾರವನ್ನು ವಹಿಸಿಕೊಳ್ಳುತ್ತಾನೆ. ಇವನು ಮಹಾ ಪರಾಕ್ರಮಿಯಾದರೂ ಹುಟ್ಟಿನೊಂದಿಗೆ ಅಂಟಿಕೊಂಡ ರೋಗಬಾಧೆಗಳು ಇವನನ್ನು ಎಡೆಬಿಡದೆ ಕಾಡುತ್ತವೆ. ಇದೇ ಸಂದರ್ಭದಲ್ಲಿ ಮನೆತನದ ಹಿರಿಯನಾದ ಇವನ ವಿವಾಹ ಮಹೋತ್ಸವವು ನಡೆಯುತ್ತದೆ. ಇದರಿಂದ ಹಿಂದಿನ ದುಃಖವನ್ನು ಮರೆತು ಸಂತೋಷದಿಂದ ಇರಬೇಕಾದರೆ ಮತ್ತೆ ವಿಧಿಯ ಆಟವೆಂಬಂತೆ

ರಾಜ್ಯಕ್ಕೆ ಸಂಕಷ್ಟ ಶುರುವಾಗುತ್ತದೆ. ಚಾಲುಕ್ಯ ಸಾಮಂತನಾದ ಪೊಟ್ಟಪೊಂಬುರ್ಚಪುರದ ಸಾಂತರ ಅರಸು ಜಗದೇವರಾಯ ಹೊಯ್ಸಳ ರಾಜ್ಯದ ಮೇಲೆ ದಾಳಿ ಮಾಡುತ್ತಾನೆ. ಆಗ ಬಲ್ಲಾಳರಾಯನು ಅನಾರೋಗ್ಯಪೀಡಿತನಾಗಿದ್ದರೂ ತನ್ನ ಕ್ಷಾತ್ರಧರ್ಮವನ್ನು ಅನುಸರಿಸಿ, 'ನ ಭೂತೋ ನ ಭವಿಷ್ಯತಿ' ಎನ್ನುವಂತೆ ರಣರಂಗದಲ್ಲಿ ವೀರಾವೇಶದಿಂದ ಹೋರಾಡಿ ವೈರಿ ಸೈನ್ಯವನ್ನು ಸದೆಬಡೆಯುತ್ತಾನೆ. ಆದರೆ ಯುದ್ಧದ ಆಯಾಸದಿಂದಾಗಿ ಅನಾರೋಗ್ಯಕ್ಕೆ ಒಳಗಾಗುವ ಬಲ್ಲಾಳರಾಯನಿಗೆ ಸಾವು ಸಂಭವಿಸುತ್ತದೆ. ಸಾಯುವ ಮುನ್ನ ಸಹೋದರ ವಿಷ್ಣುವರ್ಧನನಿಂದ ಮಾತು ಪಡೆಯುವ ಈ ಸನ್ನಿವೇಶನ್ನು ನೋಡಿ, "ಅವರನ್ನು ಬರೀ ಸೋಲಿಸಿದರೆ ಸಾಲದು ಬಿಟ್ಟಿಯಣ್ಣ ಮತ್ತೆ ಆ ಕುನ್ನಿಗಳು ಎಂದೆಂದೂ ನಮ್ಮ ರಾಜ್ಯದತ್ತ ತಲೆಯಿಕ್ಕದಂತಾಗಬೇಕು. ಅವರ ಸಾಮಂತರ ನೆತ್ತಿ ನಮ್ಮ ಪಾದಮುದ್ರೆ ಹೊತ್ತು ಬಾಳುವಂತಾಗಬೇಕು. ನೀಲ ಪರ್ವತದಿಂದ ಕೃಷ್ಣೆಯವರೆಗಿನ ಕನ್ನಡನಾಡು, ನಮ್ಮ ವ್ಯಾಘ್ರ ಲಾಂಛನದ ಆಡುಂಬೊಲವಾಗಬೇಕು. ದಿನದಿನವೂ ನಮ್ಮನ್ನು ಕಾಡುತ್ತಿರುವ ತಿಗುಳರು ನಮ್ಮ ಹಡಪ ಹೊರುವ ಊಳಿಗದಾಳುಗಳಾಗಬೇಕು. ಕೃತಘ್ನ ಚಾಲುಕ್ಯರು ನಮ್ಮ ಹೊರುವ ತೊತ್ತುಗಳಾಬೇಕು. ಹಾಗಾದಾಗ, ನನ್ನ ಆತ್ಮಕ್ಕೆ ತೃಪ್ತಿಯಾಗುತ್ತದೆ ಬಿಟ್ಟಿಯಣ್ಣಾ, ಅದುವರೆಗೂ, ನನ್ನ ಪ್ರತೀಕಾರ ತೃಷೆಗೆ ತೃಪ್ತಿಯಿಲ್ಲ. ಅಷ್ಟನ್ನು ನೀನು ಮಾಡಬೇಕು."[೨೯] ಎಂದು ನುಡಿಯುತ್ತಾನೆ. ಆಗ ವಿಷ್ಣುವರ್ಧನನು ನೀಲಗಿರಿಯಿಂದ ಕೃಷ್ಣಾನದಿಯವರೆಗಿನ ಕನ್ನಡ ನಾಡನ್ನು ಒಂದಾಗಿ ಕಟ್ಟಿಕೊಡುತ್ತೇನೆಂದು ಮಾತು ಕೊಡುತ್ತಾನೆ.

ವಿಷ್ಣುವರ್ಧನನು ಪಟ್ಟಾಭಿಷೇಕ ನಡೆದಂದಿನಿಂದಲೂ ತಲಕಾಡಿನತ್ತ ದಂಡೆಯಾತ್ರೆಗೆ ಸಾಗಲು ಯುದ್ಧಸಿದ್ಧತೆಗಳು ನಡೆಯುತ್ತವೆ. "ಹೊಯ್ಸಳ ಸೀಮೆಯ ಬಡಗಿಗಳಿಗಾಗಲಿ,' ಕಮ್ಮಾರರಿಗಾಗಲಿ ಒಂದು ಗಳಿಗೆಯೂ ಬಿಡುವಿರಲಿಲ್ಲ. ದೊಡ್ಡ ಯುದ್ಧಕ್ಕೆ ಅಗತ್ಯವಾದಷ್ಟು, ಪ್ರಮಾಣದಲ್ಲಿ ಬಗೆಬಗೆಯ ಯುದ್ಧ ರಥಗಳು, ಧನುರ್ಬಾಣಗಳು, ಕತ್ತಿ, ಶಲ್ಯ, ಕುಂತ, ಪರಶು, ತೋಮರ, ಆಡಾಯುಧ ಮೊದಲಾದ ಶಸ್ತ್ರಗಳು, ಶಿರಸ್ತಾಣಗಳು, ಲೋಹಕವಚಗಳು, ಕೋಟೆಗೆ ಲಗ್ಗೆ ಹಾಕಲುಬೇಕಾದ ನಿಚ್ಚಣಿಗೆಗಳು, ನಡೆಗೋಟೆಗಳು, ಬಗೆಬಗೆಯ ರಕ್ಷಣ ಸಾಮಗ್ರಿಗಳು ಕುಶಲ ಕರ್ಮಿಗಳಿಂದ ನಿರ್ಮಿತವಾಗಿ ಸಂಗ್ರಹಿತವಾದವು. ಅದರೊಂದಿಗೆ ದೇಶದ ವಡ್ಡವ್ಯವಹಾರಿಗಳು, ನಖರರ ಮೂಲಕ, ಕಾಂಭೋಜ, ಬಾಹ್ಲಿಕ, ಅರಬಿ ಮೊದಲಾದ ನಾನಾ ಜಾತೀಯ ಉತ್ತಮಾಶ್ವಗಳನ್ನು, ಕೊಂಗು, ಕೇರಳದ ಗಜಗಳನ್ನು ತರಿಸಿ, ಗಜಾಶ್ವಪಡೆಗಳನ್ನು ಬಲಪಡಿಸಿದರು. ಒಂದು ಕಡೆ ಯುದ್ಧೋಪಯೋಗೀ ವಸ್ತುಗಳ ಸಂಗ್ರಹ ನಡೆದಂತೆ, ಮತ್ತೊಂದು ಕಡೆ ಜಲದುರ್ಗ, ವನದುರ್ಗ, ಗಿರಿದುರ್ಗ, ನೆಲದುರ್ಗ ಮೊದಲಾದ ಬಗೆಬಗೆಯ ಕೋಟೆಗಳ ಮೇಲೆ ದಾಳಿ ಮಾಡುವ ವಿಧಾನ, ಬಗೆಬಗೆಯ ಆಯುಧಗಳ ಉಪಯೋಗ, ಅಶ್ವಾರೋಹಣ, ಗಜಾರೋಹಣ, ರಥಾರೋಹಣ ಮೊದಲಾದ ಸಮರ ವಿದ್ಯೆಗಳಲ್ಲಿ ಹೊಸದಾಗಿ ಸೇನೆಗೆ ಸೇರಿಕೊಂಡ ಸೈನಿಕರಿಗೆ ತರಬೇತು ಕೊಡುವ

ಶಿಕ್ಷಣ ಕಾರ್ಯವು ನಡೆಯಿತು. ಇದರೊಂದಿಗೆ ಎಂಥ ವಿಷಮ ಪರಿಸ್ಥಿತಿಯಲ್ಲೂ ದೊರೆಯನ್ನು ರಕ್ಷಿಸಬಲ್ಲ, ಸಮಯ ಬಂದಾಗ ಪ್ರಾಣದ ಪಣವಿಟ್ಟು ಯುದ್ಧ ಮಾಡಬಲ್ಲ 'ಗರುಡ'ರೆಂಬ ಲೆಂಕರ ಪಡೆ ನಿರ್ಮಾಣವಾಯಿತು"[೩೦] ಹೀಗೆ ಯುದ್ಧ ಸಿದ್ಧತೆಯನ್ನು ಮಾಡಿಕೊಂಡು ದೊರೆ, ದಂಡನಾಯಕರು ಹಾಗೂ ಎಲ್ಲರ ಬಯಕೆಯಂತೆ ಹೊಯ್ಸಳ ಸೇನೆ ತಲಕಾಡಿನ ಮೇಲೆ ದಾಳಿ ಮಾಡಲು ನಿರ್ಧರಿಸಿತು. ದಂಡನಾಯಕರು ಯಾರಾಗಬೇಕೆಂಬ ಚರ್ಚೆಯು ಸಾಗಿ, ಕೊನೆಗೆ ಹೊಯ್ಸಳ ಸಾಮ್ರಾಜ್ಯಕ್ಕೆ ಸೇನಾಧಿಪತಿ ಗಂಗರಾಜರ ದಂಡನಾಯಕತ್ವದಲ್ಲೇ ದಂಡಯಾತ್ರೆ ನಡೆಯಲೆಂಬ ಒಕ್ಕೊರಲಿನ ತೀರ್ಮಾಣಕ್ಕೆ ಬರಲಾಯಿತು.

ಅಷ್ಟಲ್ಲದೇ ಗೌರಾಚಾರಿಯ ಆಧುನಿಕ ಯಂತ್ರೋಪಕರಣಗಳ ತಯಾರಿಕಾ ವಿವರಣೆ, ಚರ್ಚೆಯೂ ಬರುತ್ತದೆ. ಈ ಪ್ರಸಂಗವು ಕಲ್ಪನಾವೇಶಕ್ಕೆ, ಎಡೆಮಾಡಿಕೊಡುತ್ತದೆ. ಈ ಕುರಿತಾದ ವಿವರಣೆಯು ತ.ರಾ.ಸು. ಅವರ ಬರೆಹವನ್ನು ಅನುಮಾನಾಸ್ಪದವಾಗಿ ನೋಡುವಂತೆ ಮಾಡುತ್ತದೆ. ಈ ದೃಷ್ಟಿಯಿಂದ ಕೊರಟ ಶ್ರೀನಿವಾಸರಾವ್ ಹೇಳುವ ಮಾತುಗಳು ಅತ್ಯಂತ ಗಮನಾರ್ಹವಾಗಿವೆ. "ಇತಿಹಾಸದ ಚೌಕಟ್ಟಿನಲ್ಲಿಯೇ ತ.ರಾ.ಸು. ಅವರು ಕೃತಿ ರಚನೆ ಮಾಡಿದ್ದರೂ, ಅಲ್ಲಲ್ಲಿ ಅವರ ಕಲ್ಪನೆ ಹುಚ್ಚು ಕುದುರೆಯ ಆವೇಶ ತಳೆದು, ಕಾಲದೇಶಗಳನ್ನು ಮರೆತು ನಾಗಲೋಟ ಹೂಡುತ್ತದೆ. ಕಾದಂಬರಿಯಲ್ಲಿ ಬರುವ ಗೌರವಾಚಾರಿಯ ನಿರ್ಮಿತಿ 'ಆಕಾಶದರ್ಶಿ'ಯೆಂಬ ಟೆಲಿಸ್ಕೋಪು, ಅದರ ಅಸದೃಶ ವರ್ಣನೆ ಬಂದಿದೆ. ಇಂದಿನ ಲೋಹದ ಟ್ಯಾಂಕುಗಳನ್ನು ಹೋಲುವ ಲೋಹ ಪಟ್ಟಿಕೆಗಳ ರಜ್ಜು ಯಂತ್ರದ ಬಳಕೆ ಇತ್ಯಾದಿಗಳು ಕಲ್ಪನೆಯ ಅತಿರೇಕಕ್ಕೆ, ಉದಾಹರಣೆಯಾಗಿವೆ. ಹನ್ನೊಂದನೆಯ ಶತಮಾನದಲ್ಲಿ ಇಂಥ ವೈಜ್ಞಾನಿಕ ಸಾಧನೆಗಳು ಇನ್ನೂ ನಿರ್ಮಾಣವಾಗಿರಲಿಲ್ಲವೆಂದು ಎಳೆಯ ಮಕ್ಕಳೂ ಉತ್ತರಿಸಬಲ್ಲರು! ಇಷ್ಟೆಲ್ಲ 'ಅಭಾಸ'ವಿದ್ದರೂ ಈ ಕಿರು ಕಾದಂಬರಿಯಲ್ಲಿ ವಿಷ್ಣುವರ್ಧನನ ಪಾತ್ರ ಕಳೆಕಟ್ಟಿದಂತಿದೆ"[೩೧] ಎಂದು ಶೋಧಿಸಿರುವುದು ಸೂಕ್ತವಾಗಿದೆ.

ಎಲ್ಲ ರೀತಿಯ ಯುದ್ಧದ ಸಿದ್ಧತೆಯನ್ನು ಮಾಡಿಕೊಂಡ ನಂತರ ವಿಜಯದಶಮಿಯ ಶುಭದಿನದಂದು ಹೊಯ್ಸಳ ಸೇನೆಯು ತಲಕಾಡಿನತ್ತ ತನ್ನ ಯಾತ್ರೆಯನ್ನು ಬೆಳೆಸುತ್ತದೆ. ಈ ಯಾತ್ರೆ ಹೊರಡುವ ಮುನ್ನ ಇಡೀ ಸಾಮ್ರಾಜ್ಯದ ಜನತೆ ದೊರೆಗೆ ಮತ್ತು ಹೊಯ್ಸಳ ಸೇನೆಗೆ ಜಯಸಿಗಲೆಂದು ಶುಭಕೋರುತ್ತಾರೆ. ದೇವಸ್ಥಾನಗಳಲ್ಲಿ ವಿವಿಧ ಪೂಜೆ ಪುನಸ್ಕಾರ ಹಾಗೂ ಹರಕೆಗಳನ್ನು ಸಲ್ಲಿಸುತ್ತಾರೆ. ಈ ಸಂದರ್ಭದಲ್ಲಿ ಪತಿ ವಿಷ್ಣುವರ್ಧನನಿಗೆ ಶಾಂತಲೆ ಹೇಳುವ ಮಾತುಗಳು ಗಮನ ಸೆಳೆಯುವಂಥವಾಗಿವೆ "ಒಂದು ಯುದ್ಧ ಶಿಬಿರದಲ್ಲಿ ನನ್ನ ಚಿಂತೆ ಮಾಡಬಾರದು. ಮತ್ತೊಂದು ತಲಕಾಡಿನ ಯುದ್ಧದಲ್ಲಿ ನೀವು ಗೆದ್ದಾಗ, ಅಲ್ಲಾಗಲಿ, ದಾರಿಯಲ್ಲಿ ಕೈಸೆರೆ ಹಿಡಿಯುವ ಊರುಗಳಲ್ಲಾಗಲೀ, ಎಲ್ಲೂ ಯಾವ ಹೆಂಗಸು, ಮಕ್ಕಳಿಗೂ ನಮ್ಮ ಸೇನೆ ಹಿಂಸೆ ಮಾಡದಂತೆ ನೋಡಿಕೊಳ್ಳಿ, ಸಣ್ಣ

ತುರುಗಾಳಗವೆಂದರೂ, ಹಸುಕರು ಹಿಡಿಯುವುದಲ್ಲದೆ, ಶತ್ರು ಹೆಂಗಸರ ಮಾನಭಂಗ ಮಾಡುವುದು ಸೈನಿಕರಿಗೆ ವಾಡಿಕೆಯಾಗಿ ಹೋಗಿದೆ. ನಾನು ಬಲ್ಲೆ ನಾನು ಬೇಡ ಎಂದರೆ ಹುಲಿ ಮಾಂಸ ತಿನ್ನುವುದನ್ನು ಬಿಟ್ಟು, ಹುಲ್ಲು ಮೇಯುವುದಿಲ್ಲ. ಆದರೆ ಇದೊಂದು ಯುದ್ಧದಲ್ಲಾದರೂ ಈ ಘೋರಬೇಡ."[೩೨] ಎಂದು ಹೇಳಿದಾಗ, ವಿಷ್ಣುವರ್ಧನನು ಹಾಗಾಗದಂತೆ ನೋಡಿಕೊಳ್ಳುತ್ತೇನೆಂದು ತನ್ನ ರಾಣಿ ಶಾಂತಲೆಗೆ ಮಾತುಕೊಡುತ್ತಾನೆ. ಇಂಥ ಪ್ರಸಂಗಗಳಲ್ಲಿ ಕಾದಂಬರಿಕಾರರ ಪ್ರಗತಿಪರ ಧೋರಣೆ ಎದ್ದುಕಾಣುತ್ತದೆ.

ಆದರೆ ಶಾಂತಲೆಯ ಪಾತ್ರವನ್ನು ಇತಿಹಾಸದ ಆಕರಗಳಿಗೆ ವ್ಯತಿರಿಕ್ತವಾದ ರೀತಿಯಲ್ಲಿ ತ.ರಾ.ಸು. ಅವರು ಚಿತ್ರಿಸಿದ್ದು ಕಂಡುಬರುತ್ತದೆ. "ನಿಮ್ಮೊಂದಿಗೆ ವಿವಾಹ ವೇದಿಕೆ ಏರಿದಂತೆ, ಸಿಂಹಾಸನವನ್ನು ಹತ್ತಿದ್ದಾಯಿತು. ಇನ್ನೊಂದು ಉಳಿಯಿತು...." ಯಾವುದು? 'ರಣಾಶ್ವವನ್ನು ಹತ್ತುವುದು. ಆ ಭಾಗ್ಯವೊಂದರಲ್ಲಿ ಪಾಲು ಕೊಡಲಿಲ್ಲವಲ್ಲಾ, ಎಂದು ನನಗೂ ಆ ಯೋಗ ಎಂದು ಚಿಂತಿಸುತ್ತಿದ್ದೇನೆ. ಅದೇಕೋ ನಾನು ಕಾಣೆ. ಅಂತೂ ಈಚೆಗೆ ಏಕೋ ಕತ್ತಿ ಹಿಡಿಯಬೇಕು, ನಿಮ್ಮಂತೆಯೇ ಸಮರಾಂಗಣದಲ್ಲಿ ರಕ್ತಸ್ನಾನ ಮಾಡಿ, ಮೈ ತಂಪುಮಾಡಿಕೊಳ್ಳಬೇಕು ಎಂಬ ಬಯಕೆ ಬಹುವಾಗಿದೆ....[೩೩] ಎಂದು ಶಾಂತಲೆ ತನ್ನ ಉತ್ಕಟವಾದ ಧ್ವನಿಯಲ್ಲಿ ನುಡಿಯುವುದು ಗಮನಾರ್ಹವಾಗಿದೆ. ಇದು ಇತಿಹಾಸಕ್ಕೆ ತದ್ವಿರುದ್ಧವೆನಿಸುತ್ತದೆ.

ಅದೇನಿದ್ದರೂ ವಿಷ್ಣುವರ್ಧನನ ಚೈತ್ರಯಾತ್ರೆ ಯಾವುದೇ ಪ್ರಯಾಸವಿಲ್ಲದೆ ಸಾಗುತ್ತದೆ. ಚೋಳ ಮಂಡಲಾಧೀಶ್ವರನಾದ ಅದಿಯಮನು ತನ್ನ ಭಾವಮೈದ ದಾಮೋದರನ ಸಹಾಯದಿಂದ ಹೋರಾಡಲು ಪ್ರಯತ್ನಿಸಿದರೂ ಅವನಿಗೆ ಫಲಸಿಗುವುದಿಲ್ಲ. ಬಲವಾದ ಹೊಯ್ಸಳ ಸೇನೆಯ ಎದುರು ಅವನು ನಿರ್ಮೂಲನಾಗುತ್ತಾನೆ. ಈ ಕುರಿತು ಸಾಕಷ್ಟು ವಿವರಣೆ ಕಾದಂಬರಿಯಲ್ಲಿ ಬರುತ್ತದೆ. ಈ ವಿಜಯದಿಂದ ಜನನಾಥಪುರ ಹೊಯ್ಸಳರ ವಶವಾಗುತ್ತದೆ. "ಗೆದ್ದು ಬನ್ನಿ ದಂಡನಾಯಕರೇ, ಪರದೇಶಿಯರ ಬಂಧನದಿಂದ ಕನ್ನಡ ನಾಡನ್ನು, ಕನ್ನಡ ನುಡಿಯನ್ನು ಬಿಡಿಸಿದ ಕೀರ್ತಿ ನಿಮ್ಮದಾಗಿ, ನಿಮ್ಮ ಹೆಸರು ಧ್ರುವತಾರೆಯಂತೆ, ಶಾಶ್ವತವಾಗಿ ರಾರಾಜಿಸಲಿ."[೩೪] ಎಂದ ವಿಷ್ಣುವರ್ಧನನ ಹರಕೆಯಂತೆ ತಲಕಾಡಿನ ಕೋಟೆಯ ಮೇಲೆ ರಾರಾಜಿಸುತ್ತಿದ್ದ ಚೋಳ ಧ್ವಜವು ಉರುಳಿ, ಹೊಯ್ಸಳ ವಿಜಯದ ಪತಾಕೆ ಹಾರಾಡುತ್ತದೆ. ಕಾದಂಬರಿಯ ಕೊನೆಯಲ್ಲಿ ವಿಷ್ಣುವರ್ಧನನು ತನ್ನ ಓಲಗದಲ್ಲಿ ಜನತೆಯನ್ನುದ್ದೇಶಿಸಿ ಹೇಳುವ ಈ ಮಾತುಗಳನ್ನು ನೋಡಿ, "ಧರ್ಮಕ್ಕೆ ಶರಣಾಗಿ ನಡೆದುಕೊಳ್ಳಿ, ಕೀರ್ತಿಕಾಮಿಗಳಾಗಿ ಬಾಳಿ. 'ನಮ್ಮ ಕೀರ್ತಿ, ನಮ್ಮ ನಾಡು ನುಡಿಗಳ ಕೀರ್ತಿಯೇ ನಮ್ಮ ದಿವ್ಯ ಧ್ವಜವಾಗಲಿ, ಕನ್ನಡಿಗರ ಕೀರ್ತಿ ಕಸ್ತೂರಿಯ ಪರಿಮಳದಂತೆ ದಿಗಂತವ್ಯಾಪ್ತಿಯಾಗಿ ಚಿರಾಯುವಾಗಲಿ"[೩೫] ಎಂಬಂಥ ಮಾತುಗಳಲ್ಲಿ ಕನ್ನಡ-ನಾಡು-ನುಡಿಯ ಅಭಿಮಾನ

ತುಂಬಿತುಳುಕುತ್ತದೆ. ಒಟ್ಟಾರೆ, ಕೆಲವು ಇತಿಮಿತಿಗಳೊಂದಿಗೆ ತ.ರಾ.ಸು. ಅವರು ಹೊಯ್ಸಳರ ಇತಿಹಾಸದ ಚಿತ್ರಣವನ್ನು ಕಟ್ಟಿಕೊಟ್ಟಿದ್ದಂತೂ ಸತ್ಯವಾಗಿದೆ.

**ಶಿಲ್ಪಶ್ರೀ**

ಕನ್ನಡ ಸಾಹಿತ್ಯದ ಚಾರಿತ್ರಿಕ ವಿಚಾರ ಮತ್ತು ಇತಿಹಾಸದ ದೃಷ್ಟಿಯಿಂದ ಚಾವುಂಡರಾಯನಿಗೆ ಅಗ್ರಸ್ಥಾನವಿದೆ. ಕ್ರಿ.ಶ.ಸುಮಾರು ೯೮೨ರಲ್ಲಿ ಶ್ರವಣಬೆಳಗೋಳದಲ್ಲಿ ಜಗದ್ವಿಖ್ಯಾತ ಗೊಮ್ಮಟ ಮೂರ್ತಿಯನ್ನು ಸ್ಥಾಪಿಸಿದ ಹೆಗ್ಗಳಿಕೆ ಈತನದಾಗಿದೆ. "ಕರ್ನಾಟಕದ ಇತಿಹಾಸದಲ್ಲಿ ಬಾಳಿದ ದೊಡ್ಡಜೀವ. ರಾಷ್ಟ್ರಕೂಟ-ಗಂಗ ಅರಸು ಮನೆತನಗಳಿಗೆ ತನ್ನ ಖಡ್ಗದಿಂದ ಸೇವೆ ಸಲ್ಲಿಸಿ, ಹತ್ತಾರು ಬಿರುದುಗಳನ್ನು ಗಳಿಸಿದಾತ. ರನ್ನ ಮಹಾಕವಿಗೆ ಆಶ್ರಯವಿತ್ತು ಅವನಿಂದ ಕೀರ್ತಿತನಾದ ಸಾರ್ಥಕ ಜೀವಿ. ಕನ್ನಡ ಸಾಹಿತ್ಯದ ಪ್ರಾಚೀನ ಗದ್ಯ ಗ್ರಂಥಗಳಲ್ಲೊಂದಾದ 'ತ್ರಿಷಷ್ಠಿ ಲಕ್ಷಣ ಮಹಾಪುರಾಣ' ರಚಿಸಿದ ಕವಿ"[೩೬] ಇಂತಹ ಬಹುಮುಖ ವ್ಯಕ್ತಿತ್ವದ ಚಾವುಂಡರಾಯನ ಸಾಧನೆಯನ್ನು ಬಿತ್ತರಿಸುವ ಪ್ರಮುಖ ಕಾದಂಬರಿಯೇ ಶಿಲ್ಪಶ್ರೀ. ಇದು ತ.ರಾ.ಸು. ಅವರ ಇತರ ಕಾದಂಬರಿಗಳಿಗಿಂತ ವಿಭಿನ್ನವು ವಿಶಿಷ್ಟವೂ ಆದ ಕಾದಂಬರಿಯಾಗಿದೆ. ಇದು ೧೯೬೧ರಲ್ಲಿ ಪ್ರಕಟಗೊಂಡಿತು.

ಚಾವುಂಡರಾಯನ ಕುರಿತಾಗಿ ಲಭ್ಯವಿರುವ ಇತಿಹಾಸವನ್ನು ಹಾಗೂ ಸಾಹಿತ್ಯದ ಆಕರಗಳನ್ನು ಆಧರಿಸಿ ತ.ರಾ.ಸು. ಅವರು 'ಶಿಲ್ಪಶ್ರೀ' ಕಾದಂಬರಿಯನ್ನು ರಚಿಸಿದ್ದಾರೆ. ಜೊತೆಗೆ ಈ ವಿಷಯವಾಗಿ ಸಮಾನಮನಸ್ಕರೊಂದಿಗೆ ಸಮಾಲೋಚಿಸಿ ಹೆಚ್ಚಿನ ಅಧ್ಯಯನವನ್ನು ಕೈಗೊಂಡು ಇದನ್ನು ಒಂದು ಸುಂದರ ಕಲಾಕೃತಿಯನ್ನಾಗಿಸಿದ್ದಾರೆ. 'ಶಿಲ್ಪಶ್ರೀ'ಯ ವಸ್ತು, ಕಾದಂಬರಿಕಾರರ ಸಾಹಿತ್ಯ ಹಾಗೂ ಐತಿಹಾಸಿಕ ಅಧ್ಯಯನಗಳಿಂದ ಮೂಡಿ ಬಂದದ್ದು, ಕಾದಂಬರಿಯು ಚಾವುಂಡರಾಯನ ವ್ಯಕ್ತಿ ಚಿತ್ರಣಕ್ಕೆ, ಅವನ ಕಾವ್ಯ ರಚನೆ ಹಾಗೂ ಶಿಲ್ಪ ರಚನೆಗೆ ಸೀಮಿತವಾದದ್ದು. ಉಳಿದ ಪಾತ್ರಗಳು ಅವನ ಸುತ್ತಲಿದ್ದ ಅವನ ವ್ಯಕ್ತಿತ್ವಕ್ಕೆ ಪೋಷಕವಾಗಿವೆ. ಕಾದಂಬರಿಯ ವಸ್ತುವಿಗೆ ಸಂಬಂಧಪಟ್ಟಂತೆ ಬಾಹ್ಯ ಘಟನೆಗಳಿಗೂ, ಪಾತ್ರಗಳ ಆಂತರಿಕ ಪರಿಸ್ಥಿತಿಗಳಿಗೂ ಒಡನಾಟವಿದೆ. ಇದನ್ನು ತ.ರಾ.ಸುಬ್ಬರಾಯರು ಪಂಪ, ರನ್ನ, ಮಾರಸಿಂಹ, ಇಂದ್ರ ಮತ್ತು ಚಾವುಂಡರಾಯನ ಸಂಬಂಧದಲ್ಲಿ ಸೊಗಸಾಗಿ ಚಿತ್ರಿಸಿದ್ದಾರೆ."[೩೭] ಎಂಬ ವಿ.ಜಿ. ಕೃಷ್ಣಮೂರ್ತಿಯವರ ಅಭಿಪ್ರಾಯವು ವಿಚಾರಯೋಗ್ಯವಾಗಿದೆ. ಜೊತೆಗೆ ಆ ಕಾಲದ ರಾಜಕೀಯ ಪರಿಸ್ಥಿತಿಯ ಹಿನ್ನೆಲೆಯನ್ನು ಬಳಸಿಕೊಂಡಿದ್ದಾರೆ.

ಆದಿಕವಿ ಪಂಪನ ಆದಿಪುರಾಣದಲ್ಲಿ ಬರುವ ಭರತ ಮತ್ತು ಬಾಹುಬಲಿಯರ ಕಾಳಗದ ಹಿನ್ನೆಲೆಯೊಂದಿಗೆ ಕಾದಂಬರಿ ಆರಂಭವಾಗುತ್ತದೆ. ಬಾಹುಬಲಿಯಂತೆ ಯುದ್ಧ ಮತ್ತು ರಕ್ತಪಾತಗಳನ್ನು ತ್ಯಜಿಸಿ ತಾನು ಖಡ್ಗ ಸನ್ಯಾಸ ಮಾಡಬೇಕೆಂಬ ಆಲೋಚನೆಯನ್ನು ಈ ಸಮಯದಲ್ಲಿ ಚಾವುಂಡರಾಯ ಮಾಡುತ್ತಾನೆ. "ಚಂದ್ರಗಿರಿಗೆ ಹೋದ ಒಂದೊಂದು

ಬಾರಿಯೂ ಆತನಿಗೆ 'ಇದೆಂತಹ ಬಾಳು ನನ್ನದು? ಇನ್ನೆಷ್ಟು ದಿನ ಈ ಆತ್ಮಾವಹೇಳನವನ್ನು ಭರಿಸಬೇಕು? ಛಿ.ಛಿ. ಮತ್ತೊಮ್ಮೆ ಇಲ್ಲಿಗೆ ಬರುವ ವೇಳೆಗೆ ಖಡ್ಗ ಸನ್ಯಾಸ ಮಾಡಬೇಕು' ಎಂದು ತನಗೆ ತಾನೇ ಹೇಳಿಕೊಳ್ಳುತ್ತಿದ್ದ. ಹಾಗೇ ಹೇಳಿಕೊಂಡು ಅಲ್ಲಿಂದ ರಾಜಧಾನಿಗೆ ಹಿಂದಿರುಗುತ್ತಿದ್ದ. ಎಂಬಂತೆ ಚಾವುಂಡರಾಯನ ಚಿಂತನಾ ಲಹರಿ ಆತ್ಮಗತವಾಗಿ ಹರಿಯುತ್ತಿರುತ್ತದೆ. ಆದರೆ ಬೆಳಗೋಳ ಹಿಂದಾಗಿ, ರಾಜಧಾನಿ ತಲವನಪುರ ಕಣ್ಣಿಗೆ ಕಾಣುತ್ತಿದ್ದ ಹಾಗೆ, ಎರಡು ದಿನ ಹೇಗೋ ಮರೆತ ರಾಜಕಾರಣ ಮತ್ತೆ ನೆನಪಾಗಿ, ತನ್ನ ಆತ್ಮೋದ್ಧಾರದ ದೃಷ್ಟಿಯಿಂದ, ಜೋಳದ ಪಾಳಿಗೆ ತಿಲಾಂಜಲಿ ಕೊಡಲಾಗದೆ, ಮತ್ತು ತಾನೇ ಹೇಸಿದ ಖಡ್ಗೋದ್ಯಮಕ್ಕೆ ಇಳಿಯುತ್ತಿದ್ದ ಹಾಗೆ ಒಮ್ಮೊಮ್ಮೆ ಒಲ್ಲದ ಕೆಲಸಕ್ಕೆ ಕೈಮಾಡುವಾಗಲೂ, 'ಇದೊಂದು ಬಾರಿ, ಈ ಬಾರಿ ನನ್ನ ದೊರೆಯ ರಾಜ್ಯ ಪಥ ನಿಷ್ಕಂಟಕವಾದರೆ, ಮತ್ತು ಈ ರಕ್ತಪಿಪಾಸೀ ಕೂರಸಿಗೆ ಕೈ ಇಡುವುದಿಲ್ಲ' ಎಂದು ಹೇಳುತ್ತಿದ್ದ"[೩೮] ಹೀಗೆ ಚಾವುಂಡರಾಯನ ಸನ್ಯಾಸದ ಯೋಚನಾ ಲಹರಿ ಹರಿಯುತ್ತಲೇ ಇರುತ್ತದೆ. ಅದು ಕಾರ್ಯರೂಪಕ್ಕೆ ಬರುವ ಸಂದರ್ಭಕ್ಕಾಗಿ ಅವನ ಮನವು ತುಡಿಯುತ್ತಿರುತ್ತದೆ. ಆದರೆ ರಾಜಕಾರಣದ ಶನಿಯ ವಿಕಟ ಅಟ್ಟಹಾಸದ ಕರಾಳ ವಿಚಿತ್ರತೆಯಿಂದ ಇದು ಸಾಧ್ಯವಾಗುತ್ತಿಲ್ಲವೆಂಬ ಭಾವನೆ ಚಾವುಂಡರಾಯನದಾಗಿದೆ.

ಭಾವನೆಗಳ ಸಂಘರ್ಷಕ್ಕೆ ಒಳಗಾಗುವ ಚಾವುಂಡರಾಯನಿಗೆ ಹಿಂದಿನ ನೆನಪುಗಳು ಕಾಡುತ್ತವೆ. ಮುಖ್ಯವಾಗಿ ಆತನು ಇಪ್ಪತ್ತು ವರ್ಷದವನಿದ್ದಾಗ, ಗಂಗಭೂತುಗನಲ್ಲಿ ದಂಡನಾಯಕನಾಗಿದ್ದ ತನ್ನ ತಂದೆ ಮಹಾಬಲಯ್ಯನೊಡನೆ ರಾಷ್ಟ್ರಕೂಟ ರಾಜಧಾನಿ ಮಾನ್ಯಖೇಟಕ್ಕೆ ಭೇಟಿಯಿತ್ತಾಗ ಪಂಪಮಹಾಕವಿಯ ಪ್ರಭಾವಕ್ಕೆ ಒಳಗಾಗಿದ್ದು ನೆನಪಿಗೆ ಬರುತ್ತದೆ. ಆ ಸಂದರ್ಭದ ಚಿತ್ರಣವನ್ನು ಚಾವುಂಡರಾಯನ ಬದುಕಿನ ಪ್ರಮುಖ ಘಟನೆಯಂತೆ ತ.ರಾ.ಸು. ಅವರು ಚಿತ್ರಿಸಿದ್ದಾರೆ. ಈ ಸನ್ನಿವೇಶದಲ್ಲಿ ಚಾವುಂಡರಾಯನ ತೀವ್ರತೆರನಾದ ಕುತೂಹಲ ಕಂಡುಬರುತ್ತದೆ. "ಮಹಾಬಲಯ್ಯ ತಾನು ಆಡಿದ ಮಾತನ್ನು ಮರೆಯದೆ, ಪಂಪದೇವರನ್ನು ಕಾಣಲು ಹೊತ್ತು ನಿಶ್ಚಯ ಮಾಡಿದುದನ್ನು ಕೇಳಿ, ಚಾವುಂಡರಾಯನಿಗೆ, ಬಿರುಬೇಸಿಗೆಯಲ್ಲಿ ತಂಗಾಳಿಯ ಸುಖವನ್ನು ಅನುಭವಿಸಿದಷ್ಟು ಸುಖವಾಗಿ, ಆ ಸಂತೋಷದಲ್ಲಿ, ತನ್ನನ್ನು ಕಂಡಾಗ ಪಂಪದೇವರು ಹೇಗೆ ಮಾತನಾಡಿಸುವರೋ, ಏನೋ ಹೇಳುವರೋ ಎಂಬ ಯೋಚನೆಯಲ್ಲೇ ಇರುಳನ್ನು ನಿದ್ರೆ ಇಲ್ಲದೆ ಕಳೆದು, ದಿನವೂ ಏಳುವ ಹೊತ್ತಿಗಿಂತ ಮುಂಚಿತವಾಗಿಯೇ ಎದ್ದು, ಪ್ರಾತರ್ವಿಧಿಗಳನ್ನು ತೀರಿಸಿ, ಉಡುಪು ಧರಿಸಿ, ತನ್ನ ತಂದೆಯೂ ಸಿದ್ಧವಾಗುವುದನ್ನೇ ಕಾಯತೊಡಗಿದ. ಮಹಾಕವಿಯನ್ನು ಕಾಣಲು ಮಗನಿಗಿದ್ದ ಆತುರವನ್ನು ಕಂಡು ಮಹಾಬಲಯ್ಯ "ಹೆಣ್ಣು ನೋಡಲು ಹೋಗುತ್ತಿರುವವನ ಹಾಗೆ ಹಾತೊರೆಯುತ್ತಿದ್ದೀಯಲ್ಲಾ....."[೩೯] ಎಂದು ಮಹಾಬಲಯ್ಯ ತನ್ನ ಮಗನಿಗೆ ನಗುತ್ತಲೊ ಕೇಳುತ್ತಾರೆ. ಕುತೂಹಲದಿಂದ ತನ್ನನ್ನೂ

ಕಾಣಲು ಬಂದ ಚಾವುಂಡರಾಯನಿಗೆ ಪಂಪದೇವನು, ಜಿನಧರ್ಮವನ್ನು ಅನುಸರಿಸುವಂತೆ ತಿಳಿಸಿ ಆಶೀರ್ವದಿಸುತ್ತಾನೆ. ಈ ಪ್ರಸಂಗದಲ್ಲಿ ತ.ರಾ.ಸು. ಅವರು ಪಂಪ ಮಹಾಕವಿಯ ದರ್ಶನದೊಂದಿಗೆ ಅವನ ವ್ಯಕ್ತಿತ್ವದ ದರ್ಶನವನ್ನೂ ಮಾಡಿಸುವುದು ಗಮನಾರ್ಹವಾಗಿದೆ.

ಪಂಪದೇವನಿಂದ ಹೇಳಿಸುವ ಈ ಮಾತುಗಳನ್ನು ನೋಡಿ, "ಬನವಾಸಿಗೆ ಮತ್ತೊಮ್ಮೆ ಬರದ ಹೊರತೂ ನನ್ನ ಬಾಳಿಗೆ ತೃಪ್ತಿಯಿಲ್ಲ, ಬೆಳಕಿಲ್ಲ ಒಂದು ವೇಳೆ ..... ಒಂದು ವೇಳೆ ..... ಏನೋ ಕಾರಣಕ್ಕಾಗಿ, ನಾನು ಅಲ್ಲಿಗೆ ಬರಲಾರದೆ ಹೋದರೆ, ನನ್ನ ಬಯಕೆ ತೀರುವ ಮುನ್ನವೇ ಈ ಘಟ ಸಿಡಿದು ಹೋದರೆ, ನನಗಾಗಿ ನೀವು ಒಂದು ಕೆಲಸ ಮಾಡುತ್ತೀರಾ....? "ಏನು ಕೆಲಸ?" "ಹೇಗೋ ಈಗ ಬನವಾಸಿ ಪ್ರಾಂತ ಬೂತುಗ ಪೆರ್ಮಾಡಿಗಳ ಅಧಿಕಾರಕ್ಕೆ ಸೇರಿದೆಯಲ್ಲವೇ?" "ಅಹುದು" "ಅಲ್ಲಿ ಎಲ್ಲಾದರೊಂದು ಕಾಡಿನ ಮೂಲೆಯಲ್ಲಿ, ಮಾವಿನ ಮರಗಳ ಅಡಿಯಲ್ಲಿ, ನನ್ನ ಸಮಾಧಿಯೊಂದನ್ನು ಮಾಡಿಸಿ, ಅದರ ಮೇಲೆ ಮಲ್ಲಿಗೆಯ ಬಳ್ಳಿಯನ್ನು ಹಬ್ಬಿಸಿ, ಸಮಾಧಿಶಿಲೆಯ ಮೇಲೆ, ನಾನು ಬನವಾಸಿ ತಾಯಿಯ ಮೇಲೆ ಬರೆದ ಆ ನಾಲ್ಕು ಪದ್ಯಗಳನ್ನು ಬರೆಯಿಸಿ ಬಿಡಿ. ಅಷ್ಟೇ ನಾನು ನಿಮ್ಮನ್ನು ಮಿತ್ರನಾಗಿ ಕೇಳುವುದು. ನನಗಾಗಿ ಅಷ್ಟು ಮಾಡುತ್ತೀರಾ ಮಹಾಬಲಯ್ಯನವರೇ?"[೪೦] ಎಂಬ ಮಾತುಗಳಲ್ಲಿ ಪಂಪನು ತನ್ನ ತಾಯಿನಾಡಾದ ಬನವಾಸಿ ಬಗೆಗೆ ಇರಿಸಿಕೊಂಡ ಅಭಿಮಾನದ ದರ್ಶನವಾಗುತ್ತದೆ.

ಪಂಪನ ದರ್ಶನ ಮತ್ತು ಅವನ 'ಆದಿಪುರಾಣ' ಓದಿದ ಮೇಲೆ ಚಾವುಂಡರಾಯನ ಮನಸ್ಸು ಮತ್ತಷ್ಟು ತಳಮಳಕ್ಕೆ ಓಳಗಾಗುತ್ತದೆ. ಮಗನ ಈ ಮನೋಸ್ಥಿತಿಯನ್ನು ಕಂಡ ತಾಯಿ ಕಾಳಲಾದೇವಿ ಮನಶಾಂತಿ ಪಡೆಯಲು ಒಂದು ಬಾರಿ ಶ್ರವಣಬೆಳಗೋಳಕ್ಕೆ ಹೋಗಿ ಬರಲು ಹೇಳುತ್ತಾಳೆ. ಆಗ ತಡಮಾಡದೆ ಚಾವುಂಡರಾಯನು ತನ್ನ ದೊರೆಯ ಅನುಮತಿಯನ್ನು ಪಡೆದು, ಬೆಳಗೋಳಕ್ಕೆ ಹೋಗಿ ಅಲ್ಲಿನ ಗುರುಗಳಾದ ನೇಮಿಚಂದ್ರರನ್ನು ಕಾಣಲು ಮುಂದಾಗುತ್ತಾನೆ. "ತನ್ನ ತಾಯಿ ಕಾಳಲಾದೇವಿಯ ಹರಕೆಯನ್ನು ಪಡೆದ ಮಡದಿ ಅಜಿತಾದೇವಿ, ಮಗ ಜಿನದೇವಣ್ಣನಿಗೆ ಹೇಳಬೇಕಾದುದನ್ನೆಲ್ಲಾ ಹೇಳಿ ಯುವರಾಜ ರಾಚಮಲ್ಲನ ಅನುಮತಿಯನ್ನು ಪಡೆದು, ಚಾವುಂಡರಾಯ, ರನ್ನಮಯ್ಯನೊಂದಿಗೆ, ತಲವನಪುರದಿಂದ ಶ್ರವಣಬೆಳಗೋಳದತ್ತ ಪಯಣ ಬೆಳೆಸಿದ"[೪೧] ಈ ಪ್ರಯಾಣದ ಸಂದರ್ಭದಲ್ಲಿ ಬರುವ ಶ್ರವಣಬೆಳಗೋಳದ ವರ್ಣನೆ ಚಿತ್ತವತ್ತಾಗಿ ಮೂಡಿಬಂದಿದೆ. ಇಂತಹ ಪ್ರಸಂಗಗಳಲ್ಲಿ ತ.ರಾ.ಸು. ಅವರ ಕಲಾಕುಂಚದ ಹೊಳಪು ಎದ್ದುಕಾಣುತ್ತದೆ. ನಿದರ್ಶನಕ್ಕೆ ರನ್ನಮಯ್ಯನ ಬಾಯಿಂದ ಶ್ರವಣಬೆಳಗೋಳದ ನೆಲಕ್ಕೆ ಜೀವ ತುಂಬಿದ ರೀತಿಯನ್ನು ನೋಡಬಹುದು, "ಎಷ್ಟು ಜನ, ಎಷ್ಟು ಜನ, ಸಮಂತಭದ್ರ ಸ್ವಾಮಿಗಳಂತಹ ಭವ್ಯರ ಪವಿತ್ರ ಪಾದಸ್ಪರ್ಶದಿಂದ ಪುನೀತವಾದ ಈ ಮಣ್ಣನ್ನು ಮೆಟ್ಟುವ ಯೋಗ್ಯತೆಯಾದರೂ ನನಗಿದೆಯೇ? ಎಂತೆಂತಹ

ಅಮೃತಾತ್ಮರ ಉಸಿರಿನ್ನೂ ಈ ಗಾಳಿಯಲ್ಲಿ ಸುಳಿಯುತ್ತಿದೆಯೋ ಏನೋ. ಎಂತೆಂತಹ ದಿವ್ಯ ಬಯಕೆಗಳು, ಇಲ್ಲಿ ಹೂ, ಹಣ್ಣಾಗಿ ಹೊರಹೊಮ್ಮಿದೆಯೋ, ಮೈ ಬಿಟ್ಟರೂ ಈ ಪುಣ್ಯಸ್ಥಳವನ್ನು ಬಿಟ್ಟು ಅಗಲಲು ಮನಸ್ಸಾಗದ ಎಷ್ಟು ಆತ್ಮಗಳು ಇಲ್ಲಿ ಹಕ್ಕಿಯಾಗಿ, ಹಸಿರಿನಲ್ಲಿ ಕುಳಿತು, ತಾವು ಪಡೆದ ಆತ್ಮಾನಂದವನ್ನು ಹಾಡುತ್ತಿವೆಯೋ ಏನೋ. ಇಂಥ ಪರಮ ಪವಿತ್ರ ಸ್ಥಳದಲ್ಲಿ ಅಶ್ರುಸ್ನಾನದಿಂದ ಹೃದಯ ಪವಿತ್ರ ಮಾಡಿಕೊಳ್ಳದೆ, ಮಣ್ಣಿನ ಕಾಲಿಗೇ ಬಿದ್ದು ಬೇಡಿ ಅನುಮತಿ ಪಡೆಯದೆ, ಒಳ ಹೋಗುವುದಕ್ಕುಂಟೆ ನನ್ನಂತಹ ಅಲ್ಪರು? ಇತ್ತಕಡೆ ನಡೆಯದಿರಲಿ, ಮೊಗ ಮಾಡುವುದಕ್ಕಾದರೂ ಅರ್ಹತೆ ಇದೆಯೇ ನನ್ನಂಥವರಿಗೆ? ಈ ಸ್ಥಳವಿರುವುದು ನನ್ನಂಥವರನ್ನು ಉದ್ಧರಿಸಲು : ನಾವು ಬರುವುದು ನಮ್ಮ ಪಾಪದ ಕಲಂಕವನ್ನಿಲ್ಲಿ ತೊಳಿದುಕೊಂಡು ಹೋಗಲು. ಹಾಗಿರುವಾಗ, ಇಲ್ಲಿ ಕಾಲಿಡುವ ಮೊದಲೇ 'ಕ್ಷಮಿಸಿ' ಎಂದು ಬೇಡುವುದು 'ಒಳಬರಲು ಅಪ್ಪಣೆ ಕೊಡಿ' ಎಂದು ಪ್ರಾರ್ಥಿಸುವುದು ಅಗತ್ಯವಲ್ಲವೇ?''[೪೨] ಎಂಬಂತಹ ಮಾತುಗಳ ಮೂಲಕ ಶ್ರವಣಬೆಳಗೋಳದ ನೆಲಕ್ಕೆ ಜೀವ ತುಂಬಿದ್ದನ್ನು ಕಾಣುತ್ತೇವೆ.

ನೇಮಿಚಂದ್ರಾಚಾರ್ಯರು ಒದುತ್ತಿದ್ದ 'ಮಹಾಪುರಾಣ'ದ ಪ್ರಭಾವಕ್ಕೆ ಚಾವುಂಡರಾಯ ಒಳಗಾಗುತ್ತಾನೆ. ಅದರಲ್ಲೂ ಬಾಹುಬಲಿಯ ಕೇವಲೋತ್ಪತ್ತಿ ಪ್ರಸಂಗವು ಅವನ ಅಂತರಂಗದಲ್ಲಿ ಚಿತ್ತವತ್ತಾಗಿ ನಿಲ್ಲುತ್ತದೆ. ನಂತರ ನೇಮಿಚಂದ್ರಾಚಾರ್ಯರ ಪಾದಸ್ಪರ್ಶದಿಂದ ಪುನೀತರಾಗುವ ಚಾವುಂಡರಾಯ ಮತ್ತು ರನ್ನಮಯ್ಯರು ಅವರ ಜೊತೆ ಅನೇಕ ವಿಚಾರಗಳ ಕುರಿತು ಚರ್ಚಿಸುತ್ತಾರೆ. ಈ ಸಮಯದಲ್ಲಿ ಚಾವುಂಡರಾಯನು ತನ್ನ ತಾಯಿಯ ಆಸೆಯಾದ, ಪೌದನಪುರದಲ್ಲಿ ಭರತಚಕ್ರವರ್ತಿಯಿಂದ ನಿರ್ಮಿಸಲ್ಪಟ್ಟ ಬಾಹುಬಲಿಯ ದಿವ್ಯಮೂರ್ತಿಯ ದರ್ಶನದ ಇಚ್ಛೆಯನ್ನು ಕುರಿತು ತಿಳಿಸುತ್ತಾನೆ. ಆಗ ನೇಮಿಚಂದ್ರಾಚಾರ್ಯರಿಂದ ಅದು ಅಸಾಧ್ಯವೆಂಬಂತಹ ಉತ್ತರ ಬರುತ್ತದೆ. "ಪೌದನಪುರದ ವಿಷಯ ನೀನು ಕೇಳಿಲ್ಲವೆಂದು ಕಾಣುತ್ತದೆ. ಹಿಂದೊಮ್ಮೆ ನನಗೂ ಅಲ್ಲಿಗೆ ಹೋಗಿ ಬರಬೇಕೆಂದು ಬಯಕೆಯಾಗಿತ್ತು. ಆಗ, ಭರತಚಕ್ರವರ್ತಿ ನಿರ್ಮಿಸಿದ ಬಾಹುಬಲಿಯ ವಿಗ್ರಹದ ಸುತ್ತಲೂ ಮನುಷ್ಯ ಪ್ರವೇಶಿಸಲೇ ಆಗದಂತಹ ಬಹುದಟ್ಟವಾದ ಕಾಡು ಬೆಳೆದು ವಿಗ್ರಹವನ್ನು ಮುಚ್ಚಿರುವುದೇ ಅಲ್ಲದೇ, ಆ ಕಾಡಿನಲ್ಲಿ, ಅತ್ಯಂತ ಘೋರವಾದ ಕುಕ್ಕಟ ಸರ್ಪಗಳು ಕಿಕ್ಕಿರಿದಿವೆಯೆಂದೂ ಕೇಳಿದೆ. ಅದನ್ನು ಕೇಳಿಯೇ ನಾನು ಅಲ್ಲಿಗೆ ಹೋಗುವ ಆಸೆ ಬಿಟ್ಟೆ. ನನ್ನ ಹಾಗೆ ನಿನ್ನ ತಾಯಿಯೂ ಆ ಆಸೆಯನ್ನು ಕೈಬಿಡಬೇಕಾದದ್ದೇ"[೪೩] ಎಂದು ಹೇಳುತ್ತಾರೆ.

ಇದೇ ಸಂದರ್ಭದಲ್ಲಿ ಚಾವುಂಡರಾಯನಿಗೆ ಇಂದ್ರಗಿರಿಯ ಮೇಲೆ ಬಾಹುಬಲಿಯ ವಿಗ್ರಹವನ್ನು ನಿರ್ಮಿಸುವ ಆಸೆ ಚಿಗುರೊಡೆಯುತ್ತದೆ. ಹಾಗೆಯೆ ಚಂದ್ರಗಿರಿಯ ತಪ್ಪಲಿನಲ್ಲಿ ಚಾವುಂಡರಾಯ ಹಾಗೂ ರನ್ನಮಯ್ಯ ವಿಹರಿಸುತ್ತಿರುವಾಗ ಅಪೂರ್ಣವಾಗಿ ಉಳಿದಿರುವ

ಭರತಚಕ್ರವರ್ತಿಯ ವಿಗ್ರಹ ಕುರಿತಾದ ಚರ್ಚೆಯು ನಡೆಯುತ್ತದೆ. ಇಲ್ಲಿ ತ.ರಾ.ಸು. ಅವರು ಈ ಮೂರ್ತಿ ನಿರ್ಮಾಣದ ಅಪೂರ್ಣತೆಯ ಹಿನ್ನೆಲೆಯನ್ನು ಚರ್ಚೆಗೆ ಒಳಪಡಿಸುತ್ತಾರೆ. ಇದೇ ಸಂದರ್ಭದಲ್ಲಿ ಚಾವುಂಡರಾಯನಿಗೆ ಬಾಹುಬಲಿಯ ಪ್ರತಿಮಾ ಯೋಗದ ಮೂರ್ತಿಯ ದರ್ಶನವಾದಂತೆ ಭಾಸವಾಗುತ್ತದೆ. ಅಷ್ಟೇಕೆ ಚಾವುಂಡರಾಯನಿಗೆ ಒಂದು ರಾತ್ರಿ ಕನಸು ಬೀಳುತ್ತದೆ. ಚಂದ್ರಗಿರಿಯಿಂದ ಇಂದ್ರಗಿರಿಯ ಮೇಲಣ ಕೋಡುಗಲ್ಲನ್ನು ನೋಡಿದಾಗ, ಚಾವುಂಡರಾಯನಿಗೆ ಬಾಹುಬಲಿಯ ಪ್ರತಿಮಾ ಯೋಗದ ಮೂರ್ತಿಯ ದರ್ಶನವಾದಂತೆ ಭಾಸವಾಗುತ್ತದೆ. ಜೊತೆಗೆ ಆ ದಿನ ಬಿಡಾರದಲ್ಲಿ ಮಲಗಿದಾಗ ಚಾವುಂಡರಾಯನಿಗೆ ಕನಸೊಂದು ಬೀಳುತ್ತದೆ. ಆ ಕನಸಿನಲ್ಲಿ ತನ್ನ ತಾಯಿಯೊಂದಿಗೆ ಪೌದನಪುರಕ್ಕೆ ತೀರ್ಥಯಾತ್ರೆಗೆ ಹೊರಟಂತೆಯೂ, ಪದ್ಮಾವತಿದೇವಿಯು ದರ್ಶನಕೊಟ್ಟಂತೆಯೂ ಆಗುತ್ತದೆಂದು ಚಾವುಂಡರಾಯ ತಾನು ಕಂಡ ಈ ಕನಸಿನ ವಿವರವನ್ನು ನೇಮಿಚಂದ್ರಾಚಾರ್ಯರಿಗೆ ಕೊಡುತ್ತಾನೆ. 

ಈ ಸ್ವಪ್ನದ ವಿವರ ಆಲಿಸಿದ ನೇಮಿಚಂದ್ರಾಚಾರ್ಯರು ಶ್ರವಣಬೆಳಗೋಳದ ಗುಳಕಾಯಿ ಅಜ್ಜಿಯು ಪ್ರತಿನಿತ್ಯವೂ ಕೊಡುಗಲ್ಲನ್ನು ಪೂಜಿಸುವ ಕತೆಯನ್ನು ಹೇಳುತ್ತಾರೆ. ಆ ಕಲ್ಲಿನಲ್ಲಿ ಅಜ್ಜಿಗೆ ಬಾಹುಬಲಿ ಮೂರ್ತಿ ಕಂಡಿತ್ತಂತೆ. ಅಂದಿನಿಂದ ನಿರಂತರವಾಗಿ ಅವಳು ಆ ಕಲ್ಲಿಗೆ ಪೂಜೆಸಲ್ಲಿಸುತ್ತಿದ್ದಾಳೆಂದು ವಿವರಿಸುತ್ತಾರೆ. ನಂತರ ಚಾವುಂಡರಾಯನು ತಲವನಪುರಕ್ಕೆ ಹಿಂದಿರುತಿದಾಗ, ಆದಿಪುರಾಣದಲ್ಲಿ ಚಿತ್ರಿಸಲ್ಪಟ್ಟಂತಹ ಬಾಹುಬಲಿಯ ವಿಗ್ರಹ ಮೂರ್ತಿಯಂತೆಯೇ ತಾನು ಕೂಡ ಮೂರ್ತಿಯನ್ನು ಶಿಲ್ಪಿಸಬೇಕೆಂದು ಸಂಕಲ್ಪ ಮಾಡುತ್ತಾನೆ. ಆದರೆ ನಂತರ ಸಂಭವಿಸುವ ಅನೇಕ ರೀತಿಯ ರಾಜಕೀಯ ಘಟನಾವಳಿಗಳು ಈ ಸಂಕಲ್ಪಕ್ಕೆ ಅಡ್ಡಿಯಾಗುತ್ತಲೇ ಹೋಗುತ್ತವೆ. ಈ ಸಂದರ್ಭದಲ್ಲಿನ ಅನೇಕರ ಸಾವು ನೋವುಗಳಿಂದಾಗಿ ಚಾವುಂಡರಾಯ ತಲ್ಲಣಕ್ಕೆ ಒಳಗಾಗುತ್ತಾನೆ. ರಾಷ್ಟ್ರಕೂಟ ಸಾಮ್ರಾಜ್ಯವನ್ನು ಕಳೆದುಕೊಂಡಿರುವ ಇಂದ್ರನ ರಕ್ಷಣೆಯ ಜವಾಬ್ದಾರಿ ಇವನ ಮೇಲೆ ಬೀಳುತ್ತದೆ. ಜೊತೆಗೆ ಯುದ್ಧದಲ್ಲಿ ಗಾಯಗೊಂಡಿರುವ ಮಾರಸಿಂಹನ ಸಾವು ಇದೇ ಸಂದರ್ಭದಲ್ಲಿ ಸಂಭವಿಸುತ್ತದೆ. ಈ ಎಲ್ಲ ಘಟನೆಗಳಿಂದಾಗಿ ಚಾವುಂಡರಾಯನು ತಲ್ಲಣಕ್ಕೆ ತುತ್ತಾಗುತ್ತಾನೆ. ರಾಷ್ಟ್ರಕೂಟ ಸಾಮ್ರಾಜ್ಯ ನಶಿಸಿ ಹೋದದು ಹಾಗೂ ತನ್ನ ಸ್ವಾಮಿ ಮಾರಸಿಂಹನ ಸಾವು ಅವನ ಮನಸ್ಸಿನ ಮೇಲೆ ಅಘಾತವನ್ನುಂಟು ಮಾಡುತ್ತವೆ. ಕೊನೆಗೆ ತನ್ನ ಮಾನಸಿಕ ಅಘಾತದಿಂದ ಹೊರಬರಲು ಚಾವುಂಡರಾಯನು ಕಾವ್ಯ ರಚನೆಗೆ ಮುಂದಾಗುವ ಪ್ರಸಂಗ ಬರುತ್ತದೆ.

ಇಂದ್ರನ ದೇಹ ತ್ಯಾಗದಿಂದ ಬಲುನೊಂದುಕೊಳ್ಳುವ ಚಾವುಂಡರಾಯನು ತಾನು ಕೂಡ ಸಲ್ಲೇಖನ ವ್ರತ ಕೈಗೊಳ್ಳಬೇಕೆಂದು ನೇಮಿಚಂದ್ರಚಾರ್ಯರ ಹತ್ತಿರ ಅನುಮತಿ ಪಡೆಯಲು ಹೋಗುತ್ತಾನೆ. ಆಗ ಆಚಾರ್ಯರು, "ಹಿಂದೊಮ್ಮೆ, ನೀವೇ ನಮಗೆ, ಪಂಪದೇವರು

ನಿಮ್ಮನ್ನು 'ನಿಮ್ಮ ಬಾಳು ಭವ್ಯವಾಗಲಿ, ಭವ್ಯಕೃತಿ ಸೃಷ್ಟಿಯಿಂದ ನಿಮ್ಮ ಬಾಳು ಧನ್ಯವಾಗಲಿ' ಎಂಬುದಾಗಿ ಹರಿಸಿದ್ದರು ಎಂದು ಹೇಳಿರಲಿಲ್ಲವೇ? ಆ ಕವಿ ಕೃಪೆ ನಿಮ್ಮನ್ನು ಕಾಡುತ್ತಿರುವಾಗ, ಬಾಳು ವಿಫಲವಾಯಿತೆಂದು ಉಮ್ಮಳಿಸುವುದೇಕೆ? ರನ್ನಮಯ್ಯನವರು, ನೀವೇನೋ ಪುರಾಣ ರಚನೆ ಮಾಡುತ್ತಿದ್ದೀರಿ ಎಂದು ಹೇಳಿದರು. ಆ ಕಾರ್ಯ ಮುಗಿಯಬೇಡವೇ? ಅದಕ್ಕಿಂತ ಮಿಗಿಲಾಗಿ ಪದ್ಮಾವತಿ ದೇವಿಯವರು ನಿಮಗೆ ಸ್ವಪ್ನದಲ್ಲಿ ನೀಡಿದ ಆ ದೇಶ, ಬಾಹುಬಲಿದೇವನ ಶಿಲ್ಪಕೃತಿ ನಿರ್ಮಾಣದಿಂದ ಪೂರ್ಣವಾಗಬೇಡವೇ? ಅಂಥ ಮಹತ್ಕಾರ್ಯಗಳನ್ನು ಮುಂದಿಟ್ಟುಕೊಂಡು ನನಗಿನ್ನೇನು ಉಳಿದಿದೆ?' ಎಂದು ಮತಿವಿಕಳನಂತೆ ಕೇಳುತ್ತಿರಲ್ಲಾ ಗೊಮ್ಮಟರಾಯ ......"[೪೪] ಎಂದು ನೇಮಿಚಂದ್ರಾಚಾರ್ಯರು ಎಚ್ಚರಿಕೆಯ ಮಾತುಗಳನ್ನಾಡುತ್ತಾರೆ.

ಆಚಾರ್ಯರ ಮಾತುಗಳಿಂದ ಎಚ್ಚೆತ್ತುಕೊಂಡ ಚಾವುಂಡರಾಯ ಖಡ್ಗದಿಂದ ಮುಕ್ತಿ ಪಡೆದು, ಆತ್ಮಸಂತುಷ್ಟಿಯಿಂದ ರನ್ನಮಯ್ಯನಿಗೆ ಹೇಳುವ ಈ ಮಾತು ಗಮನಾರ್ಹ, "ಮುಂದೆ ಈ ಕೈಕಂಟಕ್ಕೆ ಮೀಸಲು: ಈ ಬಾಳು, ಬಾಹುಬಲಿದೇವನ ಶ್ರೀಶಿಲ್ಪ ನಿರ್ಮಾಣಕ್ಕೆ ಮೀಸಲು. ಅದಕ್ಕಿಂತಲೂ ನನ್ನ ಬಾಳಿಗೆ ಇನ್ನೇನು ಬೇಕು ರನ್ನಮಯ್ಯ, ನಾನಿಂದು ಧನ್ಯ"[೪೫] ಎಂದು ನುಡಿಯುತ್ತಾನೆ. ಈ ಅಚಲ ಮನಸ್ಸಿನಿಂದ ರಚಿಸಿದ ಕಾವ್ಯವೇ 'ತ್ರಿಷಷ್ಟಿ ಲಕ್ಷಣ ಮಹಾಪುರಾಣ' ಹಾಗೂ ತನ್ನ ಸಕಲ ಬಯಕೆಗಳನ್ನು ತ್ಯಾಗ ಮಾಡಿ ಮಹಾಶಿಲ್ಪಿಯಿಂದ ಕೆತ್ತಿಸಿದ ಮೂರ್ತಿಯೇ 'ಬಾಹುಬಲಿ ಮೂರ್ತಿ'. ಅದಕ್ಕೆ ನೇಮಿಚಂದ್ರಾಚಾರ್ಯರು ಇಟ್ಟಂತಹ ಹೆಸರೊ 'ಗೊಮ್ಮಟೇಶ್ವರ' ಇದರ ಅನ್ವರ್ಥಕವೇ ಚಾವುಂಡರಾಯ. 'ಕಾವ್ಯಶ್ರೀ' ಹಾಗೂ 'ಶಿಲ್ಪಶ್ರೀ'ಗಳಲ್ಲಿ ಲೀನವಾದ ಅಸದೃಶ ರೂಪವೇ ಚಾವುಂಡರಾಯ. ಇಲ್ಲಿಗೆ ಋಷಿ ಕವಿ ಪಂಪ ನುಡಿದಂತೆ ಚಾವುಂಡರಾಯನ ಬಾಳು ಭವ್ಯವಾಯಿತು, ಅವನ ಬಾಳು ಧನ್ಯವಾಯಿತು.

"ಶಿಲ್ಪಶ್ರೀಯ ಭಾವನಿರ್ಭರವಾದ ಬರವಣಿಗೆ ಓದುಗರ ಆಸಕ್ತಿಯನ್ನು ಎಲ್ಲೂ ಮಂದಗೊಳಿಸದೆ, ಸವೇಗವಾಗಿ ಹರಿಯುತ್ತದೆ. ರಾಜಕೀಯ ವಿಷಗರ್ತದಿಂದ ಪಾರಾಗಿ, ಧರ್ಮವನ್ನು ಆಶ್ರಯಿಸಿ ಅಮೃತತ್ವವನ್ನು ಸಾಧಿಸಬೇಕೆಂಬುದು ಕಾದಂಬರಿಯಲ್ಲಿ ಧ್ವನಿತವಾಗುವ ಸಂದೇಶ. ನಾನಾ ಬಗೆಯ ರಾಜಕೀಯದಿಂದ ಕಲುಷಿತವಾಗಿರುವ ಇಂದಿನ ಸಮಾಜಕ್ಕೆ, ಅತ್ಯಂತ ಪ್ರಸ್ತುತವಾದದ್ದು"[೪೬] ಎಂಬ ಸಿ.ಪಿ. ಕೃಷ್ಣಕುಮಾರ ಅವರ ಮಾತನ್ನು ಒಪ್ಪಬೇಕಾಗುತ್ತದೆ. ಯಾಕೆಂದರೆ, ಈ ಕಾದಂಬರಿಯಲ್ಲಿ ರಾಜಕಾರಣದ ಸಂಘರ್ಷಕ್ಕಿಂತಲೂ ಧರ್ಮ, ಸಾಹಿತ್ಯ, ಸಾಂಸ್ಕೃತಿಕ ಬದುಕಿನ ಮಹೋನ್ನತಿಯನ್ನೇ ಕಾಣುತ್ತೇವೆ.

**ಅಗ್ನಿರಥ ಮುಕ್ತಿಪಥ :**

ತ.ರಾ.ಸು. ಅವರ ಐದನೆಯ ಐತಿಹಾಸಿಕ ಕಾದಂಬರಿ ಅಗ್ನಿರಥ-ಮುಕ್ತಿಪಥ. ಇದನ್ನು ೧೯೬೬ರಲ್ಲಿ ಪ್ರಕಟಿಸಿದರು. ಇದು ೧೨ನೇ ಶತಮಾನದಲ್ಲಿ ಆಗಿಹೋದ ಜ್ಞಾನಯೋಗಿ

ಅಲ್ಲಮಪ್ರಭುವಿನ ಜೀವನ ಮತ್ತು ಸಂದೇಶದ ಹಿನ್ನೆಲೆಯಲ್ಲಿ ರಚಿಸಲ್ಪಟ್ಟ ಕಾದಂಬರಿಯಾಗಿದೆ. ವಸ್ತುವಿನ್ಯಾಸದಲ್ಲೇನೂ ವೈವಿಧ್ಯತೆಯಿಲ್ಲ. ಹರಿಹರನ 'ಪ್ರಭುದೇವರ ರಗಳೆ' ಮತ್ತು ಚಾಮರಸನ ಪ್ರಭುಲಿಂಗ ಲೀಲೆಗಳು' ಈ ಕಾದಂಬರಿಗೆ ಪ್ರಮುಖ ಆಕರಗಳಾಗಿವೆ. ಅಲ್ಲಮನ ಬದುಕು ಎರಡು ಭಾಗಗಳಲ್ಲಿ ಚಿತ್ರಿಸಲ್ಪಟ್ಟಿದೆ. ಮೊದಲ ಭಾಗದಲ್ಲಿ ಹರಿಹರನ ಪ್ರೇರಣೆಯನ್ನು ಕಂಡರೆ, ಎರಡನೇ ಭಾಗದಲ್ಲಿ ಚಾಮರಸನ ಪ್ರೇರಣೆಯನ್ನು ಹೆಚ್ಚಾಗಿ ಕಾಣುತ್ತೇವೆ.

'ಅಗ್ನಿರಥ-ಮುಕ್ತಿಪಥ' ಎಂಬ ಶೀರ್ಷಿಕೆಯೇ ಅರ್ಥಪೂರ್ಣವಾಗಿದೆ. ಅದು ಅಲ್ಲಮಪ್ರಭುವಿನ ಬದುಕಿನ ಅನ್ವರ್ಥಕವೆನಿಸುತ್ತದೆ. "ಇಡೀ ವಚನ ಚಳುವಳಿಗೆ ಭಕ್ತ ಬಸವಣ್ಣನವರಿಗೆ ಗುರು ಅಲ್ಲಮ ಪ್ರಭುವಾದದ್ದು ಇಲ್ಲಿ ಕಾಣುತ್ತೇವೆ. ಅಗ್ನಿರಥದ ಜೀವನದಲ್ಲಿ ನಾನಾ ಅನುಭವಗಳನ್ನು ಹೊಂದಿ ಕಷ್ಟನಷ್ಟಗಳನ್ನು ಉಂಡು ಬದುಕಿನ ಎಲ್ಲ ಆಗುಹೋಗುಗಳನ್ನು ಕಂಡು ನೊಂದುಬೆಂದು ಬದುಕಿನ ಎಲ್ಲ ಮೂಲೆಗಳ ಹಿಂಸೆ ಸಹಿಸಿ ಅಗ್ನಿರಥವಾದ ಅಲ್ಲಮನ ಬದುಕು ಈ ಅಂಶಗಳಿಂದ ಮುಕ್ತಿಪಥದ ಕಡೆಗೆ ಸಾಗಿದ್ದು ಈ ಕಾದಂಬರಿ ಉದ್ದಕ್ಕೂ ಕಾಣಬಹುದಾದ ಸಂಗತಿಯಾಗಿದೆ."[೪೭] ಎಂದು ಚೆನ್ನಣ್ಣ ವಾಲೀಕಾರರು ಹೇಳಿರುವುದು ಸಮಂಜಸವಾಗಿದೆ. ಅಷ್ಟೇಕೆ ತ.ರಾ.ಸು. ಅವರೇ ತಮ್ಮ ಮುನ್ನುಡಿಯಲ್ಲಿ ಆಡಿದ ಈ ಮಾತುಗಳು ಕಾದಂಬರಿಗೆ ಕಳಸಪ್ರಾಯವಾಗಿವೆ. "ಈ ಕಾದಂಬರಿಯನ್ನು ಬರೆಯುವಲ್ಲಿ ನಾನು ಅಲ್ಲಮಪ್ರಭುವಿನ ಜೀವನವನ್ನು ಒಂದು ಐತಿಹಾಸಿಕ ವ್ಯಕ್ತಿಯಾಗಿ, ಅಂದಿನ ಇತಿಹಾಸ, ಸಮಾಜ, ಮತೀಯ ಪದ್ಧತಿಗಳ ಶಿಶುವಾಗಿ ಜನಿಸಿದ ವ್ಯಕ್ತಿಯಂತೆ ಬೆಳೆಸುವ ಹಾದಿಯನ್ನು ಹಿಡಿದಿಲ್ಲ. ಆ ಕಾಲದಲ್ಲಿ ಅಲ್ಲಮಪ್ರಭುಗಳೊಂದಿಗೆ ಒಡನಾಡಿದ ಹಿರಿಯ ಶರಣರನ್ನು ಕಾದಂಬರಿಯಲ್ಲಿ ತಂದಿದ್ದೇನಾದರೂ, ಆ ವ್ಯಕ್ತಿತ್ವಗಳಿಗೆ ಇತಿಹಾಸದ ಮೆರಗು ಕಟ್ಟುವ ಪ್ರಯತ್ನವನ್ನು ಮಾಡಿಲ್ಲ. ಸಮಕಾಲೀನ ಅರಸರ ಆ ಕಾಲದಲ್ಲಿ ನಡೆದ ರಾಜಕೀಯ, ಧಾರ್ಮಿಕ, ಕ್ರಾಂತಿಗಳ ಸುದ್ದಿಯನ್ನೇ ಎತ್ತಿಲ್ಲ. ಅದಕ್ಕೆ ಕಾರಣವಿಷ್ಟೇ ಅಲ್ಲಮ ಪ್ರಭುವಿನಂಥ, ಎಲ್ಲ ಕಾಲಕ್ಕೂ ಜ್ಞಾನದ ಗುರುವಾಗಿ ನಿಲ್ಲಬಲ್ಲಂಥ ವ್ಯಕ್ತಿತ್ವದ ಬಗ್ಗೆ ಇತಿಹಾಸ ಬಹಳ ಗೌಣ, ಆತನ ಬಾಳು ಕಾಲದ ಸೃಷ್ಟಿಯಲ್ಲ ಸಹಜ ಶಕ್ತಿಯಿಂದ ವಿಕಸಿಸುವ ವ್ಯಕ್ತಿತ್ವದ ಪವಾಡ ಅದನ್ನೇ ಈ ಕಾದಂಬರಿ ರೂಪದ ವ್ಯಕ್ತಿ ಚಿತ್ರಣದಲ್ಲಿ ಚಿತ್ರಿಸಲು ಯತ್ನಿಸಿದ್ದೇನೆ"[೪೮] ಎಂದಿದ್ದು ಕಾದಂಬರಿಯ ಬೆಳವಣಿಗೆಗೆ ಪೂರಕಾಗಿದೆ.

ನಾಗರಖಂಡದ ಬಳ್ಳಿಗಾಮೆಯಲ್ಲಿ ಅರಸು ಮಕ್ಕಳಿಗೆ ನೃತ್ಯ ಕಲಿಸುವ ನಿರಹಂಕಾರಯ್ಯನ ಮಗನೇ ಅಲ್ಲಯ್ಯ. ಈತನ ತಾಯಿ ಸುಜ್ಞಾನಿ. ಈತನ ಹಿನ್ನೆಲೆ ಕುರಿತಾಗಿ ಹತ್ತು ಹಲವು ಕತೆಗಳು ಜನರ ಬಾಯಲ್ಲಿ ಹರಿದಾಡುತ್ತಿದ್ದರೂ ಅದಾವುದಕ್ಕೂ ತಲೆಕೆಡಿಸಿಕೊಳ್ಳದ ಅಲ್ಲಯ್ಯ ನಿಶ್ಚಲ ಸ್ಥಿತಿಯಲ್ಲಿರುತ್ತಾನೆ. ಉಳಿದ ಮಕ್ಕಳಂತೆ ಅಲ್ಲಯ್ಯನ ಸ್ವಭಾವವಿಲ್ಲ. ಈತನ ಪವಿತ್ರ ಸ್ವಭಾವವನ್ನು ಕಂಡು ಅವನ ತಂದೆ-ತಾಯಿಗಳು ಚಿಂತಾಕ್ರಾಂತರಾಗುತ್ತಾರೆ. ಒಂದು

ಸಂದರ್ಭದಲ್ಲಿ ಅಲ್ಲಯ್ಯನ ನಿರ್ಲಿಪ್ತ ಮನಸ್ಥಿತಿಯನ್ನು ಕಂಡು ಆತನ ತಾಯಿ, "ಜೊತೆಯ, ನಿನ್ನ ವಯಸ್ಸಿನ ಹತ್ತು ಹುಡುಗರು ಇರುವ ಹಾಗೆ, ವಯಸ್ಸಿಗೆ ತಕ್ಕ ಹಾಗೆ ಇರದೆ, ಮೂರು ಹೊತ್ತು ಆಕಾಶದ ನಕ್ಷತ್ರಗಳನ್ನು ಎಣಿಸಿಕೊಂಡು ಅಲೆಯುವ ಹಂಬಲವೇ, ಎಂಬ ಮಾತು, ಬಯಲ ಗಾಳಿಯ ಎಳೆ ಎಳೆಯಲ್ಲೂ ನುಡಿದು ಅವನ ಮಿದುಳಿನ ತಂತಿಗಳನ್ನು ಮಿಡಿಯುತ್ತಿತ್ತು. 'ನಾನೇಕೆ ಹತ್ತು ಜನರಂತಿಲ್ಲ, ಅವರು ತೃಪ್ತಿಪಡುವ ಆಟಪಾಟಗಳಲ್ಲೇಕೆ ನನಗೆ ಅಭಿರುಚಿಯಿಲ್ಲ"[೪೯] ಎಂದು ತನ್ನ ತಾಯಿಯ ಮಾತಿಗನುಗುಣವಾಗಿ ತನ್ನಷ್ಟಕ್ಕೆ ತಾನೇ ಪ್ರಶ್ನಿಸಿಕೊಂಡಿದ್ದು ಇದೆ.

ಅಲ್ಲಯ್ಯನ ವಿದ್ಯಾಭ್ಯಾಸವೂ ಪ್ರಾರಂಭವಾಗುತ್ತದೆ. ಆರಂಭದಲ್ಲಿ ಗುರುಗಳು ಅಲ್ಲಯ್ಯನಿಗೆ ವಿಘ್ನ ನಿವಾರಕನಾದ ಗಣೇಶನ ಪ್ರಾರ್ಥನೆಯನ್ನು ಹೇಳಿಕೊಡುತ್ತಾರೆ. ಈ ಸಂದರ್ಭದಲ್ಲಿ ಅಲ್ಲಯ್ಯನು ಗುರುಗಳಿಗೆ ಹಾಕುವ ಪ್ರಶ್ನೆಯು ತರ್ಕಬದ್ಧವಾಗಿಯೇ ಕಾಣುತ್ತದೆ. "ನೀವು ಹೇಳಿದುದೆಲ್ಲವನ್ನೂ ನಾನು ಒಪ್ಪುತ್ತೇನೆ, ಗುರುಗಳೇ. ಆದರೆ ಈ ವಿದ್ಯೆ ಮನುಷ್ಯನಿಗೆ ಏಕೆ ಬೇಕು. ಇಷ್ಟೇಲ್ಲಾ ಕಷ್ಟದಲ್ಲಿ ಅದನ್ನು ಕಲಿಯುವುದರಿಂದ ಏನು ಸಾರ್ಥಕ? ....... ಪ್ರಶ್ನೆಯನ್ನು ಕೇಳಿದ ಆ ಮುಖದಲ್ಲಿ, ಉದ್ಧಟತನವಾಗಲಿ, ಕಿಡಿಗೇಡಿತನವಾಗಲಿ ಕಾಣದೆ ಆ ಪ್ರಶ್ನೆಯನ್ನು ಕೇಳಿ, ಅದಕ್ಕೆ ಓಜರು ಏನು ಉತ್ತರ ಹೇಳುವರೋ ಕೇಳಬೇಕೆಂದು, ಅವರ ಮುಖವನ್ನೇ ನಿರೀಕ್ಷೆಯಿಂದ ದಿಟ್ಟಿಸಿ ನೋಡುತ್ತಿದ್ದ ಅಲ್ಲಯ್ಯನ ಕಣ್ಣುಗಳಲ್ಲಿ ಉತ್ತರ ತಿಳಿಯುವ ತವಕದ ಬೆಳಕು ಮಿನುಗುತ್ತಿತ್ತು"[೫೦] ಹೀಗೆ ಅಲ್ಲಮನಲ್ಲಿ ಜ್ಞಾನ ದಾಹವು ಹೆಚ್ಚುತ್ತ ಹೋಗುತ್ತದೆ. ಗುರುವಿನಿಂದ ಅದಕ್ಕೆ ತಕ್ಕುದಾದ ಉತ್ತರವು ಸಿಕ್ಕು, ಅವನ ಕುತೂಹಲ ಹೆಚ್ಚಲು ಕಾರಣವಾಗುತ್ತದೆ. 'ಕಣ್ಣಿಲ್ಲದವನು ಕುರುಡು, ವಿದ್ಯೆ ಇಲ್ಲದವನ ಬುದ್ಧಿ ಕುರುಡು' ಎಂದು ತಿಳಿ ಹೇಳುವ ಗುರುಗಳ ಮಾತು ಅಲ್ಲಯ್ಯನ ಮೇಲೆ ಪ್ರಭಾವ ಬೀರುತ್ತದೆ. ಇದರಿಂದ ಚತುರ್ವೇದಗಳಲ್ಲಿ ಅಲ್ಲಯ್ಯನು ಪಾರಂಗತನಾಗುತ್ತಾನೆ.

ಇತ್ತ ಮಗ ಪ್ರಾಪ್ತ ವಯಸ್ಕನಾದದ್ದನ್ನು ಕಂಡು ನಿರಹಂಕಾರಯ್ಯನು ತನ್ನ ಮಗನಿಗೆ ನಾಗವಾಸದ ಅಧಿಕಾರವನ್ನು ಒಪ್ಪಿಸಿ, ತಾನು ವಯೋ ಸಹಜವಾದ ವಿಶ್ರಾಂತಿಯನ್ನು ಪಡೆಯಬೇಕೆಂಬ ಬಯಕೆಯನ್ನು ವ್ಯಕ್ತಪಡಿಸುತ್ತಾನೆ. ಜೊತೆಗೆ ಅಲ್ಲಯ್ಯನ ತಾಯಿಯು, ಮಗನಿಗೆ ಒಂದು ಒಳ್ಳೆಯ ಹೆಣ್ಣನ್ನು ನೋಡಿ, ಸಂಸಾರದ ಜವಾಬ್ದಾರಿಯನ್ನು ಸೊಸೆಗೆ ಒಪ್ಪಿಸಬೇಕೆಂಬ ಆಸೆಯನ್ನು ಹೊರಹಾಕುತ್ತಾಳೆ. ಆದರೆ ಲೌಕಿಕ ಬದುಕಿನಾಸಕ್ತಿಗೆ ಅಲ್ಲಯ್ಯನ ಮನವು ಹಿಂಜರಿಯುತ್ತಲೇ ನಡೆಸುವ ಧರ್ಮ ಮತ್ತು ವೃತ್ತಿ ಕುರಿತಾದ ಧೀರ್ಘವಾದ ಚರ್ಚೆಯು ಬರುತ್ತದೆ. ತನ್ನ ತಂದೆಯ ಒತ್ತಾಯಕ್ಕೆ ಮಣಿದು, ಶಾಸ್ತ್ರಗಳ ವಿಚಾರವಾಗಿ ಚರ್ಚಿಸಲು ಅಲ್ಲಯ್ಯನು ಗುರುಗಳ ಹತ್ತಿರ ಬರುತ್ತಾನೆ. "ಅಪ್ಪಾಜಿಯವರು, ಈ ವಿದ್ಯೆಗಳನ್ನೆಲ್ಲಾ ನಾನು ಕಲಿಯಬೇಕು ಎನ್ನುತ್ತಾರೆ. ಆದರೆ ನನಗೆ ಅವು ಅವಶ್ಯಕವಲ್ಲ ಎಂದು ತೋರುವುದಷ್ಟೇ

ಅಲ್ಲ, ಅವು ತಕ್ಕುವಲ್ಲ, ಎಂದೇ ತೋರುತ್ತದೆ. ಅದಕ್ಕಾಗಿ, ಅವುಗಳನ್ನು ಕಲಿಯಲು ಕೈಹಾಕುವ ಮುನ್ನ ಅಭಿಪ್ರಾಯವನ್ನು ತಿಳಿದು ಹೋಗೋಣವೆಂದು ಬಂದೆ.' ಎಂದು ತನ್ನ ಚಿಂತೆಗೆ ಸಹಜ ಕಾರಣವನ್ನು ಹೇಳಿದ. ಅವನ ಹೇಳಿದುದನ್ನು ಸಮಾಧಾನವಾಗಿ ಕುಳಿತು ಕೇಳಿದ ಗುರುಗಳು, ಅವನ ಮಾತಿನ ಕೊನೆಯಲ್ಲಿ 'ಅಂದರೆ, ನಿನ್ನ ದೃಷ್ಟಿಯಲ್ಲಿ ಭರತಾಗಮ, ಸಂಗೀತಶಾಸ್ತ್ರ, ಕಾಮಶಾಸ್ತ್ರಗಳು, ದೂಷಿತ ವಿದ್ಯೆಗಳೆಂದೇ ಅರ್ಥವೇ?' ಎಂದು ಕೇಳಿದರು. 'ಅಲ್ಲವೇ? ತಮ್ಮ ಉದರಂಭರಣಕ್ಕಾಗಿ, ದೇವದಾಸಿಯರು ಕಲಿಯಬೇಕಾದ ವಿದ್ಯೆಗಳನ್ನು ನಾನು ಕಲಿಯುವ ಅಗತ್ಯವೇನು?'[೫೧] ಸಂವಾದವು ಮುಂದುವರೆಯುತ್ತದೆ.

ಕೊನೆಗೆ ಅಲ್ಲಯ್ಯ ಮೃದಂಗವಾದನದಲ್ಲಿ ಪಾರಂಗತನಾದಾಗ, ಅವನ ಗುರು, ಅಲ್ಲಯ್ಯ, ಒಂದು ಶುಭದಿವಸ, ನಿನ್ನ ವಿದ್ಯೆಯಿಂದ ತ್ರಿಪುರಾಂತಕೇಶ್ವರನ ಸೇವೆ ಮಾಡಿ, ಆತನನ್ನು ಒಲಿಸಿ, ಇದನ್ನು ಜೀವನೋಪಾಯಕ್ಕೆ ಬಳಸಿಕೋ' ಎಂದು ಹೇಳಿದಾಗ ಅಲ್ಲಮನಿಗೆ ಈ ಮಾತು ಹೇಯವೆನಿಸುತ್ತದೆ. ಆದರೆ ತ್ರಿಪುರಾಂತಕೇಶ್ವರ ದೇವಾಲಯದಲ್ಲಿ ಮೃದಂಗವಾದನವನ್ನು ಪ್ರದರ್ಶಿಸಿ ಅಲ್ಲಮನು ಎಲ್ಲರಿಂದ ಮೆಚ್ಚುಗೆ ಗಳಿಸುತ್ತಾನೆ. ಅದೇ ರಾತ್ರಿ ಅಲ್ಲಮನ ಕನಸಿನಲ್ಲಿ ವೃದ್ಧ ತೇಜಸ್ವಿಗಳೊಬ್ಬರು ಕಾಣಿಸಿಕೊಂಡು, 'ನಿನ್ನದು ಎನ್ನುವ ಎಲ್ಲವನ್ನು ಬಿಟ್ಟು, ಬಳ್ಳಿಗಾಮೆಯನ್ನು ತೊರೆದು ಬನವಾಸಿಗೆ ಹೋಗಿ, ಅಲ್ಲಿ ಮಧುಕೇಶ್ವರನ ಸೇವೆ ಮಾಡು. ಆತ ಒಲಿದು ಅನುಗ್ರಹಿಸುತ್ತಾನೆ' ಎಂದು ನುಡಿಯುತ್ತಾನೆ.

'ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ' ಎಂಬ ಮಾತಿನಂತೆ ಬಳ್ಳಿಗಾವೆಯಿಂದ ಬನವಾಸಿಗೆ ಹೊರಟು ಅಲ್ಲಿರುವ ಮಧುಕೇಶ್ವರ ದೇವಾಲಯದಲ್ಲಿ ರಾಜನ ಮಗಳಾದ ಮಾಯಾದೇವಿಗೆ ನೃತ್ಯ ಸಂಗೀತವನ್ನು ಹೇಳಿಕೊಡುವ ಸಂದರ್ಭದಲ್ಲಿ ಅವಳು ಅಲ್ಲಯ್ಯನ ರೂಪಿಗೆ ಮನಸೋತು, ತನ್ನನ್ನು ಒಲಿದು ಕೂಡುವಂತೆ ಒತ್ತಾಯಿಸುವ ಪ್ರಸಂಗವು ಅಲ್ಲಯ್ಯನಿಗೆ ಬೇಸರ ತರುತ್ತದೆ. ಅಲ್ಲಿ ಮಾಯೆಯನ್ನು ಗೆದ್ದು ಲೋಕಸಂಚಾರ ಕೈಗೊಳ್ಳುತ್ತಾನೆ. ಕಾಡು–ಮೇಡು ಅಲೆಯುತ್ತ, "ಗುರುವನ್ನು ಅರಸುತ್ತ, ಅವನ ಅನುಗ್ರಹಕ್ಕಾಗಿ ಹಾತೊರೆಯುತ್ತಾನೆ. "ಗುರುವನ್ನು ಕಾಣಬೇಕು, ಗುರುವಿನ ಅನುಗ್ರಹವನ್ನು ದೊರಕಿಸಬೇಕು. ಅದೊಂದು ಆಗದೆ, ಉಳಿದಾವುದೂ ಸಾಧ್ಯವಿಲ್ಲ' ಎಂಬ ನಂಬಿಕೆಯೊಂದು ಆತನಲ್ಲಿ ಉಳಿದಿತ್ತು..... ಇಷ್ಟು ದಿನ ನನ್ನಲ್ಲೇಕೆ ಗುರುಕರುಣೆಯನ್ನು ದೊರಕಿಸಬೇಕೆಂಬ ಬುದ್ಧಿ ಬರಲಿಲ್ಲ. ಗುರುವೇ ಹರನಲ್ಲವೇ? ಅದನ್ನು ಅರಸದೆ, ನಾನೆಂಥ ತಪ್ಪು ಕೆಲಸ ಮಾಡಿದೆ? ಕಂಡುದ ಹಿಡಿಯಲೊಲ್ಲದೆ ಕಾಣದುದನರಸಿ ಹಿಡಿದಿಹೆನೆಂದರೆ ಸಿಕ್ಕದೆಂಬ ಬಳಲಿಕೆಯ ನೋಡಾ। ಕಂಡುದನೆ ಕಂಡು ಗುರುಪಾದವ ಹಿಡಿದಲ್ಲಿ ಕಾಣದುದ ಕಾಣಬಹುದು."[೫೨]

ಲೋಕಸಂಚಾರದ ಮಧ್ಯೆದಲ್ಲಿ ಸಾಮಾನ್ಯ ತೋಟಗಾರ ಗೊಗ್ಗಯ್ಯನ ಮೇಲೆ ತನ್ನ ಪ್ರಭಾವ ಬೀರುವ ಅಲ್ಲಯ್ಯ ಮುಂದೆ ಲಕ್ಕುಂಡಿಯಲ್ಲಿ ತನ್ನ ಅಣ್ಣ ಅಜಗಣ್ಣನ ಶವವನ್ನು

ತನ್ನ ತೊಡೆಯ ಮೇಲೆ ಇಟ್ಟುಕೊಂಡು ದುಃಖಿಸುತ್ತಿದ್ದ ಮುಕ್ತಾಯಕ್ಕನಿಗೆ ನಿಜವಾದ ಸಾವು-ನೋವಿನ ದಾರಿದೀಪವಾಗಿ, ಬಯಲು ಬೆಳಕಲ್ಲಿ ಸಾಗಲು ಅವಳಿಗೆ ತಿಳಿಹೇಳಿ ಅರಿವಿನ ದಾರಿತೋರುತ್ತಾನೆ. ಹಾಗೆಯೆ ಸಾಗುತ್ತ ಸೊನ್ನಲಾಪುರಕ್ಕೆ ಬಂದು ಸಿದ್ಧರಾಮನನ್ನು ಸಂದರ್ಶಿಸುತ್ತಾನೆ. ಅಲ್ಲಿ ಕೆರೆಕಟ್ಟೆ ಕಟ್ಟುವುದರಲ್ಲಿ ನಿರತನಾಗಿದ್ದ ಆತನೊಂದಿಗೆ ಸಂವಾದ ನಡೆಸಿ, ನಿಜವಾದ ಕೆರೆಕಟ್ಟೆ ಕಟ್ಟುವುದು ಯಾವುದು. ಅರಿವಿನ ಕೆರೆ ಕಟ್ಟದಾಗಲೇ ಲೌಕಿಕ ಕೆರೆಕಟ್ಟ ಕಟ್ಟುವುದು ಜನರಿಗೆ ಮುಖ್ಯವಾಗಿ ಕಾಣುತ್ತದೆ ಎಂದು ಹೇಳಿ, ಅವನನ್ನು ಕಲ್ಯಾಣಕ್ಕೆ ಕರೆತರುತ್ತಾನೆ. ಅಲ್ಲಿ ಚೆನ್ನಬಸವಣ್ಣನಿಂದ ಅವನಿಗೆ ಧೀಕ್ಷೆ ಕೊಡಿಸುತ್ತಾನೆ. ಕಲ್ಯಾಣದಲ್ಲಿ ಅನೇಕ ಪವಾಡಗಳನ್ನು ಮೆರೆಯುವ ಅಲ್ಲಮಪ್ರಭು, ಬಸವಣ್ಣ ಮತ್ತು ಚೆನ್ನಬಸವಣ್ಣನಲ್ಲಿದ್ದ ಅಹಂಕಾರವನ್ನು ತೊಡೆದುಹಾಕುತ್ತಾನೆ. ತಾನು ಶೂನ್ಯಪೀಠದ ಅಧ್ಯಕ್ಷನಾಗುತ್ತಾನೆ, ಜೊತೆಗೆ ಮಹಾದೇವಿ ಅಕ್ಕನಿಗೆ ಮುಕ್ತಿಯಪಥವನ್ನು ತೋರಿಸುವ ಅಲ್ಲಮಪ್ರಭು, ಬೇಕಾದವರಿಗೆ ಬೇಕಾದ ಉಪದೇಶವನ್ನು ಮಾಡಿ ತಾನು ಶ್ರೀಶೈಲದ ಕದಳಿವನದತ್ತ ನಡೆಯುತ್ತಾನೆ. ಬಯಲಲ್ಲಿ ಬಯಲಾಗುತ್ತಾನೆ. ಅಲ್ಲಮಪ್ರಭು ಕಲ್ಯಾಣದಿಂದ ಹೊರಬೀಳುವಾಗ ತನಗೆ ತಾನೇ ಹೇಳಿಕೊಂಡ

ಬಯಲು ಬಯಲನೆ ಬಿತ್ತಿ
ಬಯಲು ಬಯಲನೆ ಬೆಳೆದು
ಬಯಲು ಬಯಲಾಗಿ ಬಯಲಾಯಿತ್ತಯ್ಯ
ಬಯಲು ಜೀವನ, ಬಯಲ ಭಾವನೆ,
ಬಯಲು ಬಯಲಾಗಿ ಬಯಲಾಯಿತ್ತಯ್ಯಾ,
ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು
ನಾ ನಿಮ್ಮ ನಂಬಿ ಬಯಲಾದೆ, ಗುಹೇಶ್ವರ
ಕರ್ಪೂರದ ಗಿರಿಯ ಉರಿಯ ಹಿಡಿದಡೆ, ಇದ್ದಲುಂಟೆ?
ಕೆಂಡದಗಿರಿಯನವರಗಿನಬಾಣದಲೆಚ್ಚೆಡೆಬಾಳವನು ಅರಸಲುಂಟೆ?
ಗುಹೇಶ್ವನೆಂಬ ಲಿಂಗವನರಿದು ಮರಳಿ ನೆನೆಯಲುಂಟೇ?

– ಎಂಬ ವಚನಗೀತೆ ಅಲ್ಲಮಪ್ರಭುವಿನ ಶುಭನಿರ್ಗಮನದ ಸೂಚಕವಾಗಿ ಮಾರ್ದನಿಸಿತು.

**ಕಂಬನಿಯ ಕುಯಿಲು:**

ಚಿತ್ರದುರ್ಗ ಇತಿಹಾಸವನ್ನು ಆಧರಿಸಿ ತ.ರಾ.ಸು. ಅವರು ಬರೆದ ಕಾದಂಬರಿಗಳ ವಿಷಯ ವಸ್ತುವಿನ ಮೇಲೆ ಬೆಳಕು ಚೆಲ್ಲುವ ಮೊದಲು ಚಿತ್ರದುರ್ಗದ ಇತಿಹಾಸದ ಎಳೆಯನ್ನು ರೇಖಿಸುವುದು. ಈ ಸಂದರ್ಭದಲ್ಲಿ ಸೂಕ್ತವೆನಿಸುತ್ತದೆ. ಚಿತ್ರದುರ್ಗ ಜಿಲ್ಲೆಗೆ ಕರ್ನಾಟಕದ ಇತಿಹಾಸದಲ್ಲಿ ಒಂದು ವಿಶಿಷ್ಟವಾದ ಸ್ಥಾನವಿದೆ. 'ಚಿತ್ರದುರ್ಗದ ಜನರಿಗೆ ಚಿತ್ರದುರ್ಗ

ಎಂದರೆ ಒಂದು ಊರಲ್ಲ, ಕೋಟೆಯಲ್ಲ, ಬೆಟ್ಟವಲ್ಲ, ತಮ್ಮ ಕರುಳಿಗೆ ಹೊಂದಿಕೊಂಡು ಬೆಳೆದ ಜೀವಂತವಸ್ತು' ಎಂದು ತ.ರಾ.ಸು. ಅವರೇ ತಮ್ಮ ದುರ್ಗಾಸ್ತಮಾನ ಕಾದಂಬರಿಯಲ್ಲಿ ಹೇಳಿದ್ದನ್ನು ಈ ಸಮಯದಲ್ಲಿ ಸ್ಮರಿಸಬಹುದಾಗಿದೆ. ಜೊತೆಗೆ "ಚಿತ್ರದುರ್ಗದ ಪಾಳೆಗಾರರು ಒಂದು ಕಾಲದಲ್ಲಿ ವಿಜಯನಗರದ ಅರಸರ ಪ್ರತಿನಿಧಿಗಳಾಗಿದ್ದವರು. ಈ ವಂಶದ ಮೂಲ ಪುರುಷನಾದ ಮತ್ತಿ ತಿಮ್ಮಣ್ಣ ನಾಯಕನನ್ನು ವಿಜಯನಗರದ ಅರಸರು ಮೊದಲು ಹೊಳಲ್ಕೆರೆ ಅನಂತರ ಹಿರಿಯೂರಿಗೆ ನಾಯಕನನ್ನಾಗಿ ನೇಮಿಸಿದರು. ಇಲ್ಲಿ ತಿಮ್ಮಣ್ಣ ನಾಯಕನು ಏಳು ಸುತ್ತಿನ ಕೋಟೆಯನ್ನು ಕಟ್ಟಿಸಿದ. ಸ್ವಾಭಿಮಾನಿಯಾದ ತಿಮ್ಮಣ್ಣ ನಾಯಕ ತಿರುಗಿ ಬಿದ್ದ ವಿಜಯನಗರದ ಚಕ್ರವರ್ತಿಗಳ ಬಲದ ಮುಂದೆ ಇವನ ಬಲ ಸಾಕಾಗಲಿಲ್ಲ. ತಿಮ್ಮಣ್ಣ ನಾಯಕನನ್ನು ಬಂಧಿಸಿ ಸೆರೆಯಲ್ಲಿ ಇಡಲಾಯಿತು. ಅವನು ಅಲ್ಲಿಯೇ ಸತ್ತ. ಕ್ರಿ.ಶ. ೧೫೬೫ರಲ್ಲಿ ವಿಜಯನಗರ ಪತನವಾದ ನಂತರ ಚಿತ್ರದುರ್ಗದ ಪಾಳೆಗಾರರು ಸ್ವತಂತ್ರ್ಯ ಘೋಷಿಸಿಕೊಂಡರು."[೫೩] ಇಂತಹ ಇತಿಹಾಸದ ಎಳೆಗಳನ್ನು ಆಕರವಾಗಿರಿಸಿಕೊಂಡು ತ.ರಾ.ಸು. ಅವರು ಏಳೆಂಟು ಕಾದಂಬರಿಗಳನ್ನು ರಚಿಸಿದ್ದು ಗಮನಾರ್ಹಸಂಗತಿಯಾಗಿದೆ.

ಚಿತ್ರದುರ್ಗದ ಪಾಳೆಗಾರರ ಇತಿಹಾಸವನ್ನು ಆಧರಿಸಿ ತ.ರಾ.ಸು. ಅವರು ಬರೆದ ಮೊದಲ ಕಾದಂಬರಿ 'ಕಂಬನಿಯ ಕುಯಿಲು' ಇದು ೧೯೫೩ರಲ್ಲಿ ಪ್ರಕಟಗೊಂಡಿತು. ಈ ಹಿನ್ನೆಲೆಯನ್ನು ಕುರಿತು ತ.ರಾ.ಸು. ಅವರು "ಈ ಕಾದಂಬರಿಯ ಕಥಾವಸ್ತು ಚಿತ್ರದುರ್ಗದ ಇತಿಹಾಸಕ್ಕೆ ಸಂಬಂಧಿಸಿದುದು. ಚಿತ್ರದುರ್ಗದ ಇತಿಹಾಸದ ಆಕರ ಗ್ರಂಥಗಳಲ್ಲಿ ಈ ಘಟನೆಯ ಬಗ್ಗೆ ದೊರೆಯುವಂಥ ವಿವರ ತೀರಾ ಅಲ್ಪ. ದಿವಂಗತ ಶ್ರೀ. ಎಂ.ಎಸ್. ಪುಟ್ಟಣ್ಣನವರು ಬರೆದ 'ಚಿತ್ರದುರ್ಗದ ಪಾಳೆಯಗಾರರು' ಎಂಬ ಗ್ರಂಥದಲ್ಲಿ ದೊರೆಯುವುದು ಕೇವಲ ನಾಲ್ಕು ಸಾಲು. 'ಚಿತ್ರದುರ್ಗದ ಬಖೈರು' ಎಂಬ ಕೈಬರೆಹದ ಪುಸ್ತಕದಲ್ಲಿ ದೊರೆತುದೂ ಇಷ್ಟೆ. ಅಷ್ಟು ಕಥಾವಸ್ತುವಿಗೆ, ಇತಿಹಾಸದಲ್ಲಿ ದೊರಕುವ ಬೇರಷ್ಟು ವಿವರವನ್ನು ಬೆರೆಸಿ, ಅದರೊಂದಿಗೆ ನನ್ನ ಕಲ್ಪನೆಯನ್ನು ಧಾರಾಳವಾಗಿ ಬೆರೆಸಿ ಈ ಕಾದಂಬರಿಯನ್ನು ಹೆಣೆದಿದ್ದೇನೆ"[೫೪] ಎಂದು ಸ್ಪಷ್ಟಪಡಿಸಿದ್ದಾರೆ.

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷಗಳು ಸಾವಿರದ ಐದನೂರ ತೊಂಬತ್ತಾರನೆಯ ಆನಂದ ಸಂವತ್ಸರ ಪುಷ್ಯ ಶುದ್ಧ ಪೌರ್ಣಮಿಯ ದಿನ. ಇದು ಚಿತ್ರದುರ್ಗದ ಇತಿಹಾಸ ಪ್ರಸಿದ್ಧ ದೊರೆ ಇಮ್ಮಡಿ ಮದಕರಿನಾಯಕನು ಮರಣ ಹೊಂದಿದ ಸಂದರ್ಭವಾಗಿದೆ. ಈ ಇಮ್ಮಡಿ ಮದಕರಿಯ ಸಾವು ಹಲವು ಸಮಸ್ಯೆಗಳನ್ನು ಹುಟ್ಟು ಹಾಕುತ್ತದೆ. ಇದಕ್ಕೆ ಕಾರಣ, ಅವನಿಗೆ ಮಕ್ಕಳಿಲ್ಲದ್ದು. ಇದರಿಂದ ಉತ್ತರಾಧಿಕಾರಿಯ ಸಮಸ್ಯೆ ತಲೆದೋರುತ್ತದೆ. ಕೆಲವರು ದೊರೆಯ ಸಾವಿನ ದು:ಖದಲ್ಲಿ ಮುಳುಗಿದರೆ, ಇನ್ನೂ ಕೆಲವರು ಮುಂದಿನ ಚಿಂತೆಯ ಭಾರವನ್ನು ಹೊತ್ತುಕೊಂಡು ಕುಸಿದು ನಿಂತಿದ್ದಾರೆ.

ಈ ನಡುವೆ ಅರಮನೆಯ ಅಂತಃಪುರದಲ್ಲಿ ಶವಸಂಸ್ಕಾರ ಮತ್ತು ಉತ್ತರಾಧಿಕಾರದ ಚರ್ಚೆಯು ನಡೆಯುತ್ತದೆ. "ಅದಕ್ಕೆ ಅಷ್ಟು ಚಿಂತೆ ಮಾಡುವುದೇಕೆ? ಹೇಗೂ ದೊರೆಗಳಿಗೆ ಹೊಟ್ಟೆಯಲ್ಲಿ ಹುಟ್ಟಿದ ಉತ್ತರಾಧಿಕಾರಿಗಳಿಲ್ಲ, ಅವರ ಅಣ್ಣಂದಿರ ಮಕ್ಕಳೂ, ಪ್ರಭುಗಳಿಗೆ ಮಕ್ಕಳೇ, ಆದ್ದರಿಂದ ಎಲ್ಲರೂ ಒಪ್ಪುದಾದರೆ, ಲಿಂಗಣ್ಣನಾಯಕರೇ ಅಂತ್ಯಕ್ರಿಯೆಯನ್ನು ನಡೆಸಬಹುದು".[೫೫] ಎಂದು ನುಡಿದ ದಳವಾಯಿ ಮುದ್ದಣ್ಣನ ಮಾತು ದುಃಖದಲ್ಲಿ ಮೈಮರೆತಿದ್ದ ನಾಯಕರ ಕಿರಿಯ ಹೆಂಡತಿ ಗೌರವ್ವನಾಗತಿಯನ್ನು ಕೆರಳಿಸುತ್ತದೆ.

ನಾಯಕ ಅಳಿದ ಬಳಿಕ ನಾಗತಿಯರು ಯಾರು ಜೀವಿಸುವ ಚಿಂತೆ ಮಾಡುವುದಿಲ್ಲ. ಎಲ್ಲರೂ ಸಹಗಮನ ಮಾಡಿ ಅವನನ್ನು ಹಿಂಬಾಲಿಸುವ ಚಿಂತೆಯನ್ನೇ ಮಾಡುತ್ತಾರೆ. ಇದಕ್ಕೆ ಗೌರವ್ವನಾಗತಿಯೂ ಹೊರತಲ್ಲ. ಆದರೆ ಆಕೆಗೆ ಇದ್ದ ಆಸೆವೊಂದೇ ತನ್ನ ಸಾಕುಮಗ ಓಬಣ್ಣ ಪಟ್ಟಕ್ಕೆ ಬರಬೇಕೆಂಬುದು. ಶವ ಸಂಸ್ಕಾರದಕಾರ್ಯ ನೇರವೇರಿಸಿದವರಿಗೆ ಪಟ್ಟಾಧಿಕಾರದ ಹಕ್ಕು ದೊರೆಯುತ್ತದೆಂಬುದು ಅವಳ ಬಲವಾದ ನಂಬಿಕೆಯಾಗಿರುತ್ತದೆ. ಅದಕ್ಕಾಗಿಯೇ ಉತ್ತರಾಧಿಕಾರಿಯ ಪ್ರಶ್ನೆ ಬಗೆಹರಿದ ನಂತರವೇ ಶವಸಂಸ್ಕಾರ ಕಾರ್ಯ ನಡೆಯಬೇಕೆಂದು ಪಟ್ಟು ಹಿಡಿಯುತ್ತಾಳೆ. ಈ ಮಧ್ಯೆ ದುರ್ಗದ ಹಿರಿಯ ಮಂತ್ರಿಗಳಾದ ಭುವನಪ್ಪನವರ ಸಂಧಾನದಿಂದ ಕಿರಿಯನಾಗತಿಯು ಶವಸಂಸ್ಕಾರಕ್ಕೆ ಒಪ್ಪಿಗೆ ಸೂಚಿಸುತ್ತಾಳೆ. ೧೬ ವರ್ಷದ ಓಬಣ್ಣ ನಾಯಕನನ್ನು ದತ್ತು ಸ್ವೀಕಾರ ಮಾಡಿ ಪಟ್ಟಕ್ಕೆ ತರುವ ಜವಾಬ್ದಾರಿಯನ್ನು ಹಿರಿಯಳಾದ ಓಬವ್ವ ನಾಗತಿಗೆ ಹೊರಿಸುತ್ತಾಳೆ. ನಂತರ ಸಹಗಮನ ಮಾಡಲು ನಿರ್ಧರಿಸುತ್ತಾಳೆ. ಮುಂದೆ ಓಬವ್ವ ನಾಗತಿಯು ಲಿಂಗಣ್ಣ ನಾಯಕನನ್ನು ಒಪ್ಪಿಸಿ, ಪೀಠತ್ಯಾಗ ಮಾಡುವಂತೆ ಮಾಡುತ್ತಾಳೆ.

ಈ ನಡುವೆ ರಾಜ್ಯದಲ್ಲಿ ರಾಜಕೀಯ ಅಂತಃಕಲಹಗಳು ಉದ್ಭವಿಸುತ್ತವೆ. ಹಿರಿಯ ನಾಗತಿ ಸಹಗಮನ ಮಾಡದೆ ಇದ್ದದ್ದೊಂದು ಹೊಸ ಸಮಸ್ಯೆಯಾಗಿ ಕಾಣುತ್ತದೆ. "ಅನಿರೀಕ್ಷಿತವಾಗಿ ಉದ್ಭವಿಸಿದ ಈ ಸಮಸ್ಯೆ ಉಳಿದವರಿಗಿಂತಲೂ ಹೆಚ್ಚಾಗಿ ದಳವಾಯಿ ದೇಸಣ್ಣನ ತಲೆಯನ್ನು ತಿನ್ನುತ್ತಿತ್ತು. ಇದನ್ನು ಚರ್ಚಿಸಲೆಂದೆ ಉಳಿದ ದಳವಾಯಿಗಳನ್ನು ಕರೆಕಳಿಸಿದ ದೇಸಣ್ಣ ತನ್ನ ಮನೆಯ ಮೇಲುಪ್ಪರಿಗೆಯ ಹಜಾರದಲ್ಲಿ ಅತ್ತಿಂದಿತ್ತ, ಇತ್ತಿಂದತ್ತ ಶತಪಥ ಹಾಕುತ್ತಿದ್ದ. ಆತನ ಬಿಗಿದ ಮುಖಮುದ್ರೆ, ಹೆಣೆದುಕೊಂಡ ದಟ್ಟವಾದ ಹುಬ್ಬು, ತುಟಿಗಳ ನಡುವೆ ಸಿಕ್ಕ ಗಂಡುಮೀಸೆ, ಆತನ ಚಿತ್ತದ ಕ್ಷೋಭೆಗೆ ಪ್ರತ್ಯಕ್ಷ ಸಾಕ್ಷಿಗಳಂತಿದ್ದವು. ಆತನ ಕಣ್ಣುಗಳು ಗೋಡೆಗೆ ಸಾಲಾಗಿ ತೂಗು ಹಾಕಿದ್ದ ಕತ್ತಿ, ಗುರಾಣಿ, ಕವಚ, ಭಲ್ಲೆ, ಕಠಾರಿಗಳನ್ನು ದಿಟ್ಟಿಸುತ್ತಿದ್ದರೂ. ಆತನ ಮನಸ್ಸು ಆ ಗೋಡೆಯಾಚೆ ತೂರಿ, ಮತ್ತಾವುದೋ ರಹಸ್ಯವನ್ನು ಭೇದಿಸಲು ತವಕಿಸುತ್ತಿತ್ತು."[೫೬] ಈ ಕಾರಣಕ್ಕಾಗಿ ಸರ್ಜೇರಾಯನ ಮಕ್ಕಳ ಪಕ್ಷವನ್ನು ವಹಿಸಿ ಅದರ ಮುಖ್ಯಸ್ಥನೆನಿಸಿಕೊಳ್ಳುತ್ತಾನೆ. ಎಲ್ಲ ದಳವಾಯಿಗಳನ್ನು ಕರೆದು,

ಸರ್ಜೇರಾಯನ ಮಕ್ಕಳಿಗೆ ಅಧಿಕಾರ ಸಿಗಬೇಕೆಂದು ಪ್ರತಿಭಟಿಸುತ್ತಾನೆ. ಜೊತೆ ಮುದ್ದಣ್ಣನು ದಳವಾಯಿಗಳ ನಾಯತ್ವವನ್ನು ವಹಿಸುತ್ತಾನೆ.

ಆದರೆ ಲಿಂಗಣ್ಣ ನಾಯಕನು ಸ್ವ ಇಚ್ಛೆಯಿಂದ ಅಧಿಕಾರವನ್ನು ತ್ಯಾಗ ಮಾಡಿರುವುದಾಗಿ ಹಿರಿಯರ ಸಭೆಯಲ್ಲಿ ಘೋಷಿಸುತ್ತಾನೆ. ಇದರಿಂದ ಅವನ ಬೆನ್ನಿಗೆ ನಿಂತ ದಳವಾಯಿಗಳಲ್ಲಿ ಭಿನ್ನಾಭಿಪ್ರಾಯವೂ ಉಂಟಾಗುತ್ತದೆ. ದೇಸಣ್ಣನು ಸಭೆಯ ನಿರ್ಧಾರಕ್ಕೆ ತಲೆಬಾಗುತ್ತಾನೆ. ಈ ಸಮಯದಲ್ಲಿ ದೇಸಣ್ಣನು ಮುದ್ದಣ್ಣನು ಹೇಳುವ ಈ ಮಾತನ್ನು ನೋಡಿ, "ನಾನು ಹಿಡಿದ ದಾಳ ಅಂದುಕೊಂಡು ಗರ ಉರುಳಿಸಲಿಲ್ಲ. ಯಾರಿಗೆ ಸಿಂಹಾಸನ ಬೇಕಾಗಬೆಕೋ ಅವರಿಗೆ ಬೇಡವಾದ ಮೇಲೆ ನಮಗೆ ತಾನು ಆ ಜಗಳ ಏಕೆ ಬೇಕು ಮುದ್ದಣ್ಣ"[೫೭] ಎಂದು ನುಡಿಯುತ್ತಾನೆ. ಇದರಿಂದ ಅಸಮಾಧಾನಗೊಳ್ಳುವ ಮುದ್ದಣ್ಣನು, ಇದು ಬರೀ ಸಿಂಹಾಸನಾರೋಹಣದ ಪ್ರಶ್ನೆಯೇ ಅಲ್ಲ, ದೇಸಣ್ಣನವರೇ, ದಳವಾಯಿಗಳ ಮಾನಾಪಮಾನದ ಪ್ರಶ್ನೆ. ಮತ್ತೊಮ್ಮೆ ಸಂಚು ನಡೆಸಿ, ಅರಮನೆಯವರು, ಮಂತ್ರಿಗಳ ಗುಂಪಿನವರು ನಮ್ಮ ಮೇರೆಗೆ ಕಪ್ಪು ಬಳಿದಿದ್ದಾರೆ, ನಾನು ಕೇಳುವುದಿಷ್ಟೇ, ನೀವು ಮೌನವಾಗಿ ಕುಳಿತು ಈ ಅಸಮಾಧಾನವನ್ನು ಸಹಿಸುತ್ತೀರಾ, ಇಲ್ಲವೇ ಗುಂಡಿನಂತೆ ಸಿಡಿದೆದ್ದು ಇದನ್ನು ಪ್ರತಿಭಟಿಸುತ್ತೀರಾ?"[೫೮] ಎಂದು ದೇಸಣ್ಣನಿಗೆ ಪ್ರಶ್ನಿಸುತ್ತಾನೆ. ಇದಕ್ಕೆ ಅವನು ಒಪ್ಪದಿದ್ದಾಗ ಅವನ ಮೇಲೆ ದ್ವೇಷಕಾರುತ್ತಾನೆ ಮುದ್ದಣ್ಣ.

ಓಬಣ್ಣ ನಾಯಕ ದುರ್ಗದ ನಾಯಕನಾಗುತ್ತಾನೆ. ಅಲ್ಲಿಗೆ ಮದಕರಿನಾಯಕನ ಆಸೆ ಈಡೇರಿತೆಂದೇ ಸಂಭ್ರಮಿಸಲಾಗುತ್ತದೆ. ನಾಗತಿ ತಾನು ಹೊತ್ತ ತಲೆಯಭಾರ ಕೆಳಗಿಳಿಯಿತೆಂದು ಸಂತೋಷಪಡುತ್ತಾಳೆ. ಆದರೆ ಮುಂದಿನ ಕರಾಳ ಚಿತ್ರವನ್ನು ತ.ರಾ.ಸು. ಅವರು ಓದುಗರ ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾರೆ. ಪಟ್ಟಾಭಿಷೇಕ ಸಂದರ್ಭದಲ್ಲಿ ಮಾಮೂಲು ಕಪ್ಪುಕಾಣಿಕೆಯನ್ನು ಪಡೆಯಲು ಹೋದ ಸೈನಿಕರನ್ನು ಅರಮನೆಯವರು ಭಿಕ್ಷುಕರಂತೆ ಕಂಡರೆಂಬ ಅವಮಾನದ ಹೊಗೆ ಸೈನಿಕರಲ್ಲಿ ಕಾಣಿಸಿಕೊಳ್ಳುತ್ತದೆ. ಇದೇ ಸಂದರ್ಭವನ್ನು ಬಳಸಿಕೊಂಡು ದಳವಾಯಿ ಮುದ್ದಣ್ಣನು ರಾಜ್ಯಾಧಿಕಾರದ ವಿರುದ್ಧ ಬಲವಾದ ಸಂಚು ರೂಪಿಸುತ್ತಾನೆ. ಎಲ್ಲ ದಳವಾಯಿಗಳ ರಹಸ್ಯಸಭೆಕರೆದು ಆ ಕುರಿತು ಚರ್ಚಿಸುತ್ತಾನೆ. ಈ ಕಾರ್ಯಕ್ಕೆ ಅರಮನೆಯವರಿಗೆ ನಿಷ್ಠೆಯಿಂದಿದ್ದ ವೀರಣ್ಣನೆಂಬ ಯೋಧನನ್ನು ಹುರುದುಂಬಿಸುತ್ತಾನೆ. "ನಾಳೆಯಿಂದ ನಮ್ಮ ಕೆಲಸ ಚುರುಕಾಗಿ ಆರಂಭವಾಗಬೇಕು. ಇದರಲ್ಲಿ ಯಾರೂ ಒಪ್ಪಿಸಿದ ಕೆಲಸ ಮಾಡಲು ಹಿಂಜರಿಯಬಾರದು. ನಾವು ಕೈಗೊಂಡ ಕೆಲಸ ಸಫಲವಾಗಲು, ವೀರಣ್ಣಾ ನಿನ್ನಿಂದ ಆಗಬೇಕಾದ ಕೆಲಸ ಹೆಚ್ಚಿನದಾಗಿದೆ. ನಾನು ಹಿಂದೆ ಹೇಳಿದ ಕೆಲಸವನ್ನು ನೀನು ಮಾಡಲೇಬೇಕು. ಅರಮನೆಯ ಚಲನವಲನಗಳನ್ನು ಕಾಣಲು ನೀನೇ ನಮ್ಮ ಕಣ್ಣು. ಅಲ್ಲಿ ನಮಗಾರಿಗೂ ಪ್ರವೇಶವಿಲ್ಲ. ಆ ಕೆಲಸವನ್ನು

ಸಮರ್ಪಕವಾಗಿ ಮಾಡು. ಅದು ಮುಗಿದ ಮರುದಿನವೇ ನಾಯಕರಿಗೆ ಹೇಳಿ ನಿನಗೆ ದಳವಾಯಿ ಪಟ್ಟಕೊಡಿಸುವ ಭಾರ ನನ್ನದು."[೫೯] ಎಂದು ಹೇಳುತ್ತಾನೆ. ಮುದ್ದಣನು ನಡೆಸುವ ಮಾರಣಹೋಮಕ್ಕೆ ಮೊದಲ ಪ್ರಾಣಾಹುತಿ ಆಗುವುದು ದೇಸಣ್ಣನದು.

ಮುದ್ದಣ್ಣನು ಭೂಗತನಾಗಿದ್ದುಕೊಂಡು ಚಿಕ್ಕಣ್ಣನಾಯಕನ ಮೂಲಕ ಸಂಧಾನವನ್ನು ಏರ್ಪಡಿಸುತ್ತಾನೆ. ಈ ಸಮಯದಲ್ಲಿ ಓಲಗದಲ್ಲಿ ಕ್ಷಮೆ ಕೋರುವುದಾಗಿ ನಟಿಸುತ್ತಾನೆ. ಆದರೆ ಮೋಸದಿಂದ ಓಬಣ್ಣನಾಯಕನನ್ನು ಅಲ್ಲಿಯೇ ಕೊಲೆಗೈಯುತ್ತಾನೆ. ಈ ಒಂದು ಘಟನೆ ನಾಗತಿಯ ಮರ್ಮಾಘಾತಕ್ಕೆ ತಾಗಿ ಅವಳು ಹೊಂಡಕ್ಕೆ ಬಿದ್ದು ಸಾಯುತ್ತಾಳೆ. ಈ ಸುದ್ದಿ ಎಲ್ಲೆಡೆ ಹರಡುತ್ತದೆ. ಇದೇ ಸಮಯದಲ್ಲಿ ಕಸ್ತೂರಿನಾಯಕನ ಕೊಲೆಯು ಸಂಭವಿಸುತ್ತದೆ. ಈ ಒಂದು ದುರಂತದಲ್ಲಿ ಕಸ್ತೂರಿನಾಯಕ ಮತ್ತು ವೀರಣ್ಣ ನಾಯಕನ ಕುಟುಂಬ ಬಲಿಪಶುಗಳಾಗುತ್ತವೆ. ಇಂತಹ ಪ್ರಸಂಗಗಳ ಮೂಲಕ ತ.ರಾ.ಸು. ಅವರು ಜನಸಾಮಾನ್ಯರ ಬದುಕಿನ ಬವಣೆಗಳನ್ನು ಚಿತ್ರಿಸುವ ಪ್ರಯತ್ನ ಮಾಡಿದ್ದಾರೆಂದರೆ ತಪ್ಪಾಗಲಿಕ್ಕಿಲ್ಲ. ಈ ಬವಣೆಯು ಹಿಂದೆಯೂ ಇತ್ತು. ಇಂದಿಗೂ ಕೂಡ ಇರುವುದು ಸ್ಪಷ್ಟವಾಗಿದೆ. ಆ ಕಾರಣದಿಂದಾಗಿಯೇ ಅವರ ಕಾದಂಬರಿಗಳು ಹೊಸ ಆಯಾಮಗಳನ್ನು ಪಡೆದುಕೊಳ್ಳುತ್ತವೆ. ಈ ಸತ್ಯವನ್ನು ಅವರೇ ಸೃಷ್ಟಿಸಿದ ಕಾಲ್ಪನಿಕ ಪಾತ್ರಗಳ ಜೀವಂತಿಕೆಯೊಂದಿಗೆ ಗುರುತಿಸಬಹುದಾಗಿದೆ.

**ರಕ್ತರಾತ್ರಿ :**

ರಕ್ತರಾತ್ರಿಯು ಚಿತ್ರದುರ್ಗದ ಇತಿಹಾಸ ಸಾರುವ ತ.ರಾ.ಸು. ಅವರ ಎರಡನೆಯ ಕಾದಂಬರಿ. 'ಕಂಬನಿಯ ಕುಯಿಲು' ಕಾದಂಬರಿಗೆ ಪೂರಕವಾದ ಐತಿಹಾಸಿಕ ವಸ್ತುವನ್ನು ಇದು ಪಡೆದಿದೆ. ಇದನ್ನೂ ಕೂಡ ತ.ರಾ.ಸು. ಅವರು ೧೯೫೩ರಲ್ಲಿಯೇ ಪ್ರಕಟಿಸಿದರು. "ಕಂಬನಿಯ ಕುಯಿಲು' ನಲ್ಲಿ ಇರುವಂತೆ, ಈ ಕಾದಂಬರಿಗೂ ಇರುವ ಚಾರಿತ್ರಿಕ ಆಧಾರಗಳು ಅಲ್ಪ. ಲಿಂಗಣ್ಣ ನಾಯಕ ಮುದ್ದಣ್ಣ ಆತನ ಸಹೋದರರು, ಉಗ್ರಚನ್ನವೀರಸ್ವಾಮಿಗಳು, ಮಲ್ಲವ್ವನಾಗತಿ, ಹೊರಕೆನಾಯಕ, ಭರಮಣ್ಣ ಇವರಿಷ್ಟೂ ಜನ ಚಾರಿತ್ರಿಕ ವ್ಯಕ್ತಿಗಳು. ಕಾದಂಬರಿಯ ಮೂಲವಸ್ತು ಮುದ್ದಣ್ಣನಿಂದಾದ ಲಿಂಗಣ್ಣನಾಯಕನ ಕರಾಳ ಕೊಲೆಯೂ, ಐತಿಹಾಸಿಕ ವಸ್ತುವೇ. ಆದರೆ ಇತಿಹಾಸದಲ್ಲಿ ಬರಡು ಎಲುಬಿನ ಗೂಡಾಗಿ ಕಾಣುವ ಪಾತ್ರಗಳಿಗೆ, ನನ್ನ ಕಲ್ಪನೆಯಿಂದ ವಿಶಿಷ್ಟ ವ್ಯಕ್ತಿತ್ವನ್ನು ತುಂಬಿದ್ದೇನೆ. ಹಾಗೇ, ಕಾದಂಬರಿಯನ್ನು ಓದುವ ಆ ಜನಕ್ಕೆ ಆ ಕಾಲದ ಜನಜೀವನದ ಪರಿಚಯವೂ ಅಷ್ಟಿಷ್ಟು ಆಗುವಂತೆ ಶ್ರಮಿಸಿದ್ದೇನೆ"[೬೦] ಎಂದು ತ.ರಾ.ಸು. ಅವರು ಕಾದಂಬರಿಯ ಹಿನ್ನೆಲೆ ಮತ್ತು ಉದ್ದೇಶವನ್ನು ಕುರಿತು ತಮ್ಮ ಮುನ್ನುಡಿಯಲ್ಲಿ ಸ್ಪಷ್ಟಪಡಿಸಿದ್ದಾರೆ.

ಓಬಣ್ಣ ನಾಯಕನ ಸಾವು ಮತ್ತು ಅದರ ಆಘಾತದಿಂದ ಹೊಂಡದಲ್ಲಿ ಬಿದ್ದು ಜೀವತೆತ್ತ ಹಿರಿಯ ನಾಗತಿಯ ಕರಾಳ ನೆನಪುಗಳೊಂದಿಗೆ ಕಾದಂಬರಿ ಆರಂಭವಾಗುತ್ತದೆ. ದಳವಾಯಿ ಮುದ್ದಣ್ಣನ ಸಂಚಿನ ಕತ್ತಿಗೆ ಬಲಿಯಾದ ಓಬಣ್ಣ ನಾಯಕನ ರುಂಡ–ಮುಂಡಗಳ ರಕ್ತ ಪಿಪಾಶವನ್ನು ಕಣ್ಣಾರೆಕಂಡು ಆಘಾತಕ್ಕೊಳಗಾದ ಲಿಂಗಣ್ಣ ನಾಯಕನು ಜರ್ಜಿತನಾಗಿ ಮತ್ತೇ ಕ್ರೋಧ ತುಂಬಿ ತನ್ನ ಕತ್ತಿಯನ್ನು ಝಳಪಿಸ ಹೋದಾಗ ಸೆರೆಸಿಕ್ಕು ಕಾರಾಗೃಹದ ಕತ್ತಲಲ್ಲಿ ಕರಗಿಹೋದುದರ ಆ ಭೂತದ ನೆನಪು ಅವನನ್ನು ಆವರಿಸಿಕೊಂಡಿದೆ. ಯಾವ ಕಿರೀಟವೂ ಓಬಣ್ಣ ನಾಯಕನ ಬಲಿ ತೆಗೆದುಕೊಂಡಿತ್ತೋ ಅದೇ ಕಿರೀಟವನ್ನು ಇಂದು ತನ್ನ ತಮ್ಮ ಚಿಕ್ಕಣ್ಣ ನಾಯಕ ಬಯಸಿ ಹೊತ್ತುಕೊಂಡಿದ್ದಾನೆಂದು ಭಾವಿಸುತ್ತಾನೆ.

ಚಿಕ್ಕಣ್ಣ ನಾಯಕನು ಅಧಿಕಾರಕ್ಕೆ ಬಂದು ಸುಪುತ್ರರಿಲ್ಲದೆ ನಿಗೂಢವಾಗಿ ಸಾವನ್ನಪ್ಪುತ್ತಾನೆ. ಇವನ ನಂತರ ನಿರಂಕುಶಾಧಿಕಾರದ ದಳವಾಯಿ ಮುದ್ದಣ್ಣನು ಅಧಿಕಾರಕ್ಕೆ ಬರಲು ಯತ್ನಿಸುತ್ತಾನೆ. ಆದರೆ ಪಾಳೆಯಪಟ್ಟಿನ ಹಿರಿಯ ವ್ಯಕ್ತಿಗಳು ಲಿಂಗಣ್ಣ ನಾಯಕನನ್ನು ಪಟ್ಟಕ್ಕೆ ತರಲು ಪ್ರಯತ್ನಿಸುತ್ತಾರೆ. ವಿರಕ್ತಭಾವ ತಳೆದ ಅವನನ್ನು ಮನವೊಲಿಸಲು ಮುಂದಾಗುತ್ತಾರೆ. ಇವರಲ್ಲಿ ಪರಶುರಾಮಪ್ಪ, ಭರಮಣ್ಣ, ಗೋಪಾಲಗೌಡ ಮುಂತಾದವರು ಈ ಕಾರ್ಯ ಮಾಡುತ್ತಾರೆ. "ಚಿಕ್ಕಣ್ಣ ನಾಯಕರ ಮರಣದಿಂದ ಕೈಕಟ್ಟಿದಂತಾಗಿರುವ ದಳವಾಯಿ ಮುದ್ದಣ್ಣನೂ ಏನೇನೋ ಹಂಚಿಕೆಮಾಡುತ್ತಿದ್ದಾನೆಂದು ಸುದ್ದಿ ಬಂದಿದೆ. ಆದರೆ ಅದಾವುದಕ್ಕೂ ಅವಕಾಶಕೊಡದೆ, ನಮ್ಮೆಲ್ಲರ ಮಾತು ನಡೆಯಲು ಅವಕಾಶವಿರುವಾಗಲೇ, ನಿಮ್ಮನ್ನು ಸಿಂಹಾಸನದ ಮೇಲೆ ಕೂರಿಸಿ, ಆ ಒಳಸಂಚುಗಳನ್ನು ಮೊಳಕೆಯಲ್ಲೇ ಮುರಿಯಬೇಕೆಂಬುದು ದುರ್ಗದ ಹಿತೈಸಿಗಳ ಬಯಕೆ. ಹಿರಿಯರೆಲ್ಲರ ಅಭಿಪ್ರಾಯವೂ ಹಾಗೇ ಇದೆ. ಆದ್ದರಿಂದಲೇ ನಾನು ನಿಮ್ಮನ್ನು ಕೇಳುತ್ತಿರುವುದು ನಿಮ್ಮ ಮನಸ್ಸಿಗೆ ಎಷ್ಟೇ ಬೇಡವಾದರೂ ದುರ್ಗದ ಹಿತದೃಷ್ಟಿಯಿಂದ ಇದಕ್ಕೆ ಒಪ್ಪಿಕೊಳ್ಳಿ," ಭುವನಪ್ಪನವರ ಮಗ ಪರಶುರಾಮಪ್ಪ ಹೇಳಿದ. "ನೀವೂ ಈ ಮಾತು ಹೇಳುತ್ತೀರಾ ಪರಶುರಾಮಪ್ಪನವರೇ?" ಪರಶುರಾಮಪ್ಪನ ಮಾತು ಕೇಳಿ ವ್ಯಥೆಗೊಂಡು ಕೇಳಿದ ಲಿಂಗಣ್ಣನಾಯಕ. "ನಿಮಗಿನ್ನೂ ಈ ಸಿಂಹಾಸನದ ಭ್ರಾಂತಿ ತೊಲಗಿಲ್ಲವೇ? ಹುಟ್ಟಿದಂದಿನಿಂದಲೂ ಸಾಯುವವರೆಗೂ, ಎಪ್ಪತ್ತು ವರ್ಷಗಳ ಕಾಲ ಈ ಸಿಂಹಾಸನಕ್ಕೇ ಜೀವವನ್ನು ತೇಯ್ದ ಭುವನಪ್ಪನವರನ್ನು ಬೀದಿಯ ಭಿಕಾರಿ ಹೆಣವನ್ನಾಗಿ ಮಾಡಿದ ಈ ಸಿಂಹಾಸನದ ಬಗ್ಗೆ ಇನ್ನೂ ನಿಮಗೆ ಮೋಹವಿದೆಯೇ? ನೀವೆಲ್ಲರೂ ನನ್ನ ಹಿತೈಷಿಗಳು, ದುರ್ಗದ ಹಿತೈಷಿಗಳು; ನಾನು ಬಲ್ಲೆ. ನಿಮ್ಮ ಮಾತಿಗೆ ಇಲ್ಲವೆನ್ನುವ ಯೋಗ್ಯತೆಯೂ ನನ್ನದಲ್ಲ. ಅದಕ್ಕಾಗಿಯೇ ನಿಮ್ಮಲ್ಲಿ ಸೆರಗೊಡ್ಡಿ ಬೇಡುತ್ತೇನೆ. ತಾನಾಗಿಯೇ ತೊಲಗಿ ಹೋಗಿರುವ ಈ ಪಿಶಾಚಿಯನ್ನು ಮತ್ತೆ ನನಗೆ ಕಟ್ಟಬೇಡಿ"[೨೧] ಎಂದು ಲಿಂಗಣ್ಣನಾಯಕ ತನ್ನ ಹಿತೈಷಿಗಳ ಮನವಿಯನ್ನು ನಯವಾಗಿಯೇ ತಿರಸ್ಕರಿಸಲು ಯತ್ನಿಸುತ್ತಾನೆ.

ಆದರೆ ಪಟ್ಟಾಭಿಷೇಕ ಕುರಿತಾಗಿ ಹಟ್ಟಿಮಲ್ಲಪ್ಪ ನಾಗತಿ ಹಾಗೂ ಉಗ್ರಚನ್ನವೀರ ಸ್ವಾಮಿಗಳು ಮಹತ್ವದ ಪಾತ್ರ ನಿರ್ವಹಿಸುತ್ತಾರೆ. ವಿರಕ್ತಗೊಂಡ ಲಿಂಗಣ್ಣ ನಾಯಕನ ಅಳುಕನ್ನೂ ನಿವಾರಣೆ ಮಾಡಿ, ಪಟ್ಟಕ್ಕೆ ಸಮ್ಮತಿಸುವಂತೆ ಅವನ ಮನವೊಲಿಸುತ್ತಾರೆ. ಈ ಒಂದು ಸುದ್ದಿಯಿಂದ ದಳವಾಯಿ ಮುದ್ದಣ್ಣನಿಗೆ ಸಿಡಿಲು ಬಡಿದಂತಾಗುತ್ತದೆ. 'ವಿಭವ ಸಂವತ್ಸರ ಆಶ್ವಯುಜ ಶುದ್ಧ ವಿಜಯಮಿಯ ಶುಭ ಮಹೂರ್ತದಂದು ಲಿಂಗಣ್ಣ ನಾಯಕರ ಪಟ್ಟಾಭಿಷೇಕವಾಗುತ್ತದೆ. ಆ ದಿನದಂದು ತಾವು ದುರ್ಗಕ್ಕೆ ದಯಮಾಡಿಸಿ, ಹೊಸ ನಾಯಕರಿಗೆ ಸಲ್ಲಬೇಕಾದ ಜನರು, ಪಟ್ಟಾಭಿಷೇಕದ ಕಾಣಿಕೆ ಒಪ್ಪಿಸಿ, ಉತ್ಸವದಲ್ಲಿ ಭಾಗಿಗಳಾಗಬೇಕು' ಎಂಬ ನಿರೂಪದ ಪತ್ರವನ್ನು ಓಲೆಕಾರರು ಹಳ್ಳಿ ಹಳ್ಳಿಯ ಗೌಡರಿಗೂ ಸುದ್ದಿಯನ್ನು ಮುಟ್ಟಿಸುತ್ತಾರೆ. ಈ ಒಂದು ಸುದ್ದಿಯನ್ನು ಕೇಳಿದ ಜನ ಸಂಭ್ರಮದಲ್ಲಿ ತೇಲಾಡುತ್ತಾರೆ. "ಎಂಥ ಪ್ರಳಯ ವೃಷ್ಟಿ ಕರೆಯುವುದೋ, ಮತ್ತೇನು ಅನಾಹುತ ಪರಂಪರೆ ಯಾಗುವುದೋ ಎಂದು ಹೆದರಿದ್ದ ಜನ ಪಟ್ಟಾಭಿಷೇಕದ ಖಂಡಿತ ವಾರ್ತೆಯನ್ನು ಕೇಳಿ, ಮೈ ಹಿಡಿದ ಛಳಿ ಬಿಟ್ಟಂತಾಗಿ, ಅವರ ಹರ್ಷಕ್ಕೆ ರೆಕ್ಕೆ ಮೂಡಿದಂತಾಯಿತು. ದುರ್ಗದ ಜನರಂತೂ ಆ ಸಂತೋಷದಲ್ಲಿ ನಾಲ್ಕು ತೋಳಾಗಿ, ಅವಸರದಲ್ಲಾದರೂ ದುರ್ಗವನ್ನು ಆದಷ್ಟು ಸಿಂಗರಿಸತೊಡಗಿದ್ದರು. ಕೋಟೆ, ಪೇಟೆಗಳಲ್ಲೆಲ್ಲಾ ಆ ಉತ್ಸಾಹದ ಸಡಗರವೇ, ಎಲ್ಲೆಡೆಯಲ್ಲೂ ಅದರ ಗಡಿಬಿಡಿಯೇ".[೨] ಹೀಗೆ ಪಟ್ಟಾಭೀಷೇಕದ ಸಂಭ್ರಮ ಎಲ್ಲೆಡೆ ಕಾಣುವಂತಾಯಿತು.

"ಆಶೀರ್ವಾದ ಮಂತ್ರಪಠಿಸುತ್ತಿರುವ ಬ್ರಾಹ್ಮಣರು, ಕನ್ನಡಿ, ಕಳಶ ಮೊದಲಾದ ಮಂಗಳ ದ್ರವ್ಯಗಳನ್ನು ಹಿಡಿದು ಸುಹಾಸಿನಿಯರು, ರಾಜಲಾಂಛನಗಳನ್ನು ಹಿಡಿದ ಆಳುಗಳು. ಪರಾಕು ಹೇಳುವ ರಾಜಭಟರು ಮತ್ತು ಆಪ್ತರು ಅಂಗರಕ್ಷಕರೊಂದಿಗೆ ನಾಯಕರು ಪ್ರವೇಶಿಸಿದರು. ನೆರೆದವರೆಲ್ಲರೂ ಒಮ್ಮೆ ಎದ್ದುನಿಂತು ಮುಜರೆ ಮಾಡಿ, ಕುಳಿತುಕೊಳ್ಳಬಹುದೆಂದು ಸೂಚನೆಯಾದ ಮೇಲೆ ಕುಳಿತುಕೊಂಡರು. ಬಳಿಕ ಪಟ್ಟಾಭಿಷೇಕ ಶಿಲೆಯ ಮೇಲೆ ಕುಳಿತುಕೊಂಡು ನಾಯಕರಿಗೆ ಪುರೋಹಿತರು ಮಂತ್ರೋಕ್ತವಾಗಿ ಪಟ್ಟಾಭಿಷೇಕ ಸ್ನಾನಮಾಡಿಸಿ, ಮುಡಿಯುಡಿಸಿ, ಆ ಸಮಾರಂಭದಲ್ಲಿ ಮಾಡಬೇಕಾದ ಹೋಮ ಹವನಗಳನ್ನು ಮುಗಿಸಿ ಬಳಿಕ ನಾಯಕರು ಪುರೋಹಿತರಿತ್ತ ಕಿರೀಟವನ್ನು ಧರಿಸಿ ರಾಜದಂಡ, ಪಟ್ಟದ ಕತ್ತಿಗಳನ್ನು ಹಿಡಿದು, ರಾಜ್ಯ ಸ್ವೀಕಾರದ ಪ್ರಮಾಣ ವಚನವನ್ನು ಹೇಳಿದ ಬಳಿಕ ಪುರೋಹಿತರು ಅವರ ಹಣೆಗೆ ಸಿದ್ಧರ ಪ್ರಸಾದವಾದ ದೆಸೆಗಟ್ಟಿನ ಧೂಳಿತನವನ್ನು ಹಚ್ಚಿ ಲಿಂಗಣ್ಣ ನಾಯಕರು ದುರ್ಗದ ದೊರೆಗಳಾದರೆಂದು ಸಾರಿದರು."[೩] ಸಂಪಿಗೆ ಸಿದ್ದೇಶ್ವರ ದೇವಾಲಯದಲ್ಲಿ ನಡೆದ ಈ ಸಮಾರಂಭವೂ ಅತ್ಯಂತ ಅದ್ದೂರಿಯಾಗಿ ಜರುಗಿತು. ರಾಜ್ಯದ ಮೂಂದಿನ ಕಾರ್ಯಕಲಾಪಗಳಿಗೆ ದಾರಿಸುಗಮವಾಗುವಂತೆ ಮೂಡಿತು.

ಲಿಂಗಣ್ಣನಾಯಕ ದೊರೆಯಾದುದಕ್ಕೆ, ಎಲ್ಲರಿಗೂ ಸಂತೋಷವೇನೋ ಆಯಿತು. ಆದರೆ ಈ ಸಂತೋಷ-ಸಂಭ್ರಮ ಮಾತ್ರ ಲಿಂಗಣ್ಣನಾಯಕನಲ್ಲಿರಲಿಲ್ಲ. ರಾಜ್ಯಾಡಳಿತ ಕುರಿತಾಗಿ ಅವನಲ್ಲಿ ನಿರುತ್ಸಾಹ ಹೆಚ್ಚಾಗುತ್ತ ಹೋಗುತ್ತದೆ. ಇದನ್ನರಿತ ಭರಮಣ್ಣ, ಪರಶುರಾಮಪ್ಪ ಮತ್ತು ಸ್ವಾಮಿಗಳು ಲಿಂಗಣ್ಣ ನಾಯಕನಲ್ಲಿ ಉತ್ಸಾಹ ತುಂಬುವ ಪ್ರಯತ್ನಮಾಡುತ್ತಾರೆ. ಇದರಿಂದಲೂ ಪ್ರಯೋಜನವಾಗುವುದಿಲ್ಲ. ಇದೇ ಸುಸಂಧಿಯೆಂದು ಭಾವಿಸುವ ದಳವಾಯಿ ಮುದ್ದಣ್ಣನು ರಾಜ್ಯದ ಆಡಳಿತವನ್ನು ತನ್ನ ಅಂಕೆಯಲ್ಲಿರಿಸಿಕೊಳ್ಳಲು ಮುಂದಾಗುತ್ತಾನೆ. ತನ್ನ ಸರ್ವಾಧಿಕಾರತ್ವನ್ನು ಮುಂದುವರೆಸುತ್ತಾನೆ. ಇದರಿಂದ ತಪ್ಪಿಸಿಕೊಳ್ಳಲು ಲಿಂಗಣ್ಣ ನಾಯಕನು ದುರ್ಗದ ನಿಷ್ಠಾವಂತ ಹಿರಿಯರೊಂದಿಗೆ ಸಮಾಲೋಚಿಸುತ್ತಾನೆ ಪ್ರಯೋಜನವಾಗುವುದಿಲ್ಲ. ಕೊನೆಗೆ ಮುದ್ದಣ್ಣನು ಈ ದುರ್ಗದ ಹಿರಿಯರಾದ ಮಠದಸ್ವಾಮಿಗಳು, ಭರಮಣ್ಣ ಹಾಗೂ ಪರಶುರಾಮಪ್ಪ ಮುಂತಾದವರಿಗೆ ದಿಗ್ಬಂಧನವನ್ನು ಹಾಕಿಸುತ್ತಾನೆ. ಲಿಂಗಣ್ಣ ನಾಯಕನನ್ನು ಇವರೆಲ್ಲರೂ ಭೇಟಿ ಆಗದಂತೆ ನೋಡಿಕೊಳ್ಳುತ್ತಾನೆ.

ಅರಮನೆಯಲ್ಲಿ ಸೆರೆಯಾಳಿನಂತೆ ಬದುಕಲಾರದ ಲಿಂಗಣ್ಣ ನಾಯಕನು ಮುದ್ದಣ್ಣನ ವಿರುದ್ಧ ತಿರುಗಿಬೀಳುತ್ತಾನೆ. ಆದರೆ ಮುದ್ದಣ್ಣ ತನ್ನ ಸೇನಾಬಲದೊಂದಿಗೆ ಅರಮನೆಯನ್ನು ಮುತ್ತಿಗೆ ಹಾಕುತ್ತಾನೆ. ನಾಯಕನನ್ನು ಸೆರೆಹಿಡಿದು ಹಿಂಸಿಸುತ್ತಾನೆ. "ಜೀವಂತವಾಗಿ ನನ್ನನ್ನು ಸೆರೆಹಿಡಿದ ಅಳಿಯಾಸೆಯನ್ನು ಬಿಡು' ಎಂದ ಲಿಂಗಣ್ಣ ನಾಯಕ, ಸುತ್ತುವರೆದ ಸೈನಿಕರನ್ನು ಹತ್ತಿರಬರಲು ಬಿಡದೆ ಪಟ್ಟಾವರೆಸೆಯಿಂದ ಕತ್ತಿ ಬೀಸುತ್ತಾ. ಹೋರಾಡುವವರ ಗುಂಪಿನಿಂದ ಅಷ್ಟು ದೂರ ನಿಂತ ಮುದ್ದಣ್ಣ ತನ್ನ ಬಳಿಯಿದ್ದ ದಾಸಣ್ಣನಿಗೆ ಕಣ್ಣು ಸನ್ನೆ ಮಾಡಿದ. ದಾಸಣ್ಣ ಗುಂಪಿನಲ್ಲಿ ನುಸುಳಿ, ನಾಯಕನ ಹಿಂಭಾಗ ಸೇರಿ, ಹೊತ್ತು ಕಾಯುತ್ತಾ ನಿಂತು, ನಾಯಕನ ಬೆನ್ನು ತನ್ನತ್ತ ತಿರುಗಿದಾಗ, ಗುರಿಯಿಟ್ಟು ನಾಯಕನ ಕತ್ತಿ ಹಿಡಿದ ತೋಳುಗಳಿಗೆ ಕತ್ತಿಯಿಂದ ಹೊಡೆದ. ಕತ್ತಿ ಹಿಡಿದ ನಾಯಕನ ತೋಳು ಕತ್ತರಿಸಿ ಅಷ್ಟು ದೂರ ಹಾರಿಬಿತ್ತು. ಆ ನೋವಿಗೆ ನಾಯಕನ ಕಣ್ಣಲ್ಲಿ ಕತ್ತಲು ತುಂಬಿತು. ಆ ಕತ್ತಲಡಗಿದ ನಾಯಕ ಕಣ್ಣುಬಿಡುವುದರೊಳಗಾಗಿ, ಹತ್ತಾರು ಕೈಗಳು ಅವನನ್ನು ಹಿಡಿದಿದ್ದವು"[೬೪] ಹೀಗೆ ಲಿಂಗಣ್ಣನಾಯಕನನ್ನು ಹಿಂಸಿಸುತ್ತ ದುರ್ಗದ ಹೊರವಲಯದ ಉದ್ಯಾನವನದವರೆಗೆ ಮೆರವಣಿಗೆ ಮಾಡಿಸಿ, ಅಲ್ಲಿಯೇ ಕೊಲೆಗೈಯುತ್ತಾನೆ ಮುದ್ದಣ್ಣ. ಈ ಅಮಾಯಕ ಕೃತ್ಯವನ್ನು ದುರ್ಗದ ಜನರು ಅಸಹಾಕರಾಗಿಯೇ ನೋಡುತ್ತಿದ್ದರು. ಆದರೆ ಮುದ್ದಣ್ಣನ ಪಿಶಾಚ ತೃಪ್ತಿಯ ನಗು ಮಾತ್ರ ದುರ್ಗದ ತುಂಬ ಮಾರ್ದನಿಸಿತು.

ತ.ರಾ.ಸು. ಅವರ ಈ ಕಾದಂಬರಿಯ ಹಿನ್ನೆಲೆಯಲ್ಲಿ ಎನ್.ಎಸ್. ಶ್ರೀಧರಮೂರ್ತಿಯವರು ಹೇಳಿದ ಮಾತುಗಳು ಉಲ್ಲೇಖಾರ್ಹವಾಗಿವೆ. "ಚಿಕ್ಕಣ್ಣನಾಯಕನು

ನಿಗೂಢವಾಗಿ ಕ್ರಿ.ಶ. ೧೬೮೬ರಲ್ಲಿ ಮೃತನಾದನು. ಇವನಿಗೂ ಸಂತಾನವಿರದಿದ್ದರಿಂದ ಸಹೋದರ ಲಿಂಗಣ್ಣ ನಾಯಕನು ಅರಸನಾದನು. ಇವನು ಮೂರನೇ ಮದಕರಿ ನಾಯಕ ಎಂದು ತನ್ನನ್ನು ಕರೆದುಕೊಂಡನು. ಇವನ್ನು ಕೈಗೊಂಬೆಯಾಗಿಸಿಕೊಂಡು ರಾಜ್ಯವನ್ನು ಆಳಬೇಕು ಎನ್ನುವುದು ದಳವಾಯಿ ಮುದ್ದಣ್ಣನ ಹಂಚಿಕೆಯಾಗಿತ್ತು. ಆದರೆ ಸ್ವತಂತ್ರ ಪ್ರೇಮಿಯಾದ ಲಿಂಗಣ್ಣನಾಯಕನು ತನ್ನ ಸ್ವಂತಿಕೆ ತೋರಿಸಲು ಪ್ರಯತ್ನಿಸಿದನು. ಆದರೆ ಇವನು ರಾಜಕೀಯ ತಂತ್ರಗಾರಿಕೆಯಲ್ಲಿ ದುರ್ಬಲನಾಗಿದ್ದನು. ಜನಬೆಂಬಲವನ್ನೂ ಪಡೆದಿರಲಿಲ್ಲ. ದಳವಾಯಿ ಮುದ್ದಣ್ಣನು ತನ್ನ ತಂತ್ರಗಾರಿಕೆಯನ್ನು ಬಳಸಿ ಲಿಂಗಣ್ಣ ನಾಯಕನ ಕಗ್ಗೊಲೆಯನ್ನು ಮಾಡಿದನು. ಇದಿಷ್ಟೇ ಈ ಕಾಲಘಟ್ಟದ ಕುರಿತು ಸಿಕ್ಕುವ ಚಾರಿತ್ರಿಕ ಮಾಹಿತಿ. ಇದನ್ನು ತ.ರಾ.ಸು. ತಮ್ಮ ಕಲ್ಪನೆಯಿಂದ ವಿಪುಲವಾಗಿ ಬೆಳೆಸಿದ್ದಾರೆ."[೬] ಎಂದು ಶೋಧಿಸಿರುವುದು ಸೂಕ್ತವಾಗಿದೆ.

**ತಿರುಗುಬಾಣ:**

ಚಿತ್ರದುರ್ಗದ ಐತಿಹಾಸಿಕ ವಿವರಗಳನ್ನೊಳಗೊಂಡ ತ.ರಾ.ಸು. ಅವರ ಮೂರನೆಯ ಸರಣಿ ಕಾದಂಬರಿ ತಿರುಗುಬಾಣ. ಇದು ೧೯೬೩ರಲ್ಲಿ ಪ್ರಕಟಗೊಂಡಿತು. ಖಳನಾಯಕ ದಳವಾಯಿ ಮುದ್ದಣ್ಣನ ಅವನತಿಯನ್ನು ಚಿತ್ರಿಸುವ ಕಾದಂಬರಿಯಾಗಿದೆ. 'ಅಂತ್ಯದ ಆರಂಭ', 'ಮಸೆ, ಮಸೆ ಕೊಡಲಿ ಮಸೆ' ಮತ್ತು 'ತಿರುಗುಬಾಣ' ಎಂಬ ಮೂರು ಭಾಗಗಳಲ್ಲಿ ತನ್ನ ವಿಸ್ತಾರವನ್ನು ಪಡೆದುಕೊಂಡಿದೆ. "ತಿರುಗುಬಾಣ' ಸತ್ಯಕ್ಕೆ ಎಂದಿಗೂ ಜಯ ಎನ್ನುವ ಭಾರತೀಯ ನಂಬಿಕೆಗೆ ಅನುಗುಣವಾಗಿ ರೂಪುಗೊಂಡಿರುವ ಕಾದಂಬರಿ. ಮೊದಲೆರಡು ಕಾದಂಬರಿಗಳಲ್ಲಿನ ದುರಂತಗಳನ್ನು ಕಂಡು ನಲುಗಿ ಹೋಗಿದ್ದ ಓದುಗರ ಸಂತಸಕ್ಕೆ ಎಂದು ಬರೆದಂತಿರುವ ಈ ಕಾದಂಬರಿಯಲ್ಲಿ ರಂಜನೀಯವಾಗಿ ಸರ್ವಾಧಿಕಾರಿಯ ಪತನವನ್ನು ಚಿತ್ರಿಸಲಾಗಿದೆ. ಗಮನಿಸಬೇಕಾದ ಸಂಗತಿ ಎಂದರೆ ಸಾಮಾನ್ಯವಾಗಿ ಐತಿಹಾಸಿಕ ಕಾದಂಬರಿಗಳಲ್ಲಿ ಆಗುವಂತೆ ಇಲ್ಲಿ ಎರಡು ಪಕ್ಷಗಳ ನಡುವಿನ ಹೋರಾಟ ಚಿತ್ರಿತವಾಗಿಲ್ಲ. ಜನಸಾಮಾನ್ಯರ ಅಕ್ರೋಶವನ್ನು ವ್ಯವಸ್ಥಿತವಾಗಿ ಸಾಂದ್ರೀಕರಿಸುವ ಕೆಲಸ ಇಲ್ಲಿ ನಡೆದಿದೆ. ಈ ಮೂಲಕ ತ.ರಾ.ಸು. ಚಾರಿತ್ರಿಕ ಚೌಕಟ್ಟಿನಲ್ಲಿಯೇ ಪ್ರಜಾಪ್ರಭುತ್ವದ ಮೌಲ್ಯಗಳನ್ನು ಬಿಂಬಿಸಿದ್ದಾರೆ.... ಸರ್ವಾಧಿಕಾರಿ ದಳವಾಯಿ ಮುದ್ದಣ್ಣನನ್ನು ಕೊಲ್ಲುವುದು ಅವನ ಎದುರಾಳಿಯಾದ ಭರಮಣ್ಣ ನಾಯಕನಲ್ಲ. ಬದಲಾಗಿ ಜನಸಮಾನ್ಯ ಪ್ರತಿನಿಧಿಯಾದ ಗಿರಿಜೆ. ಈ ಅಂಶದಲ್ಲಿಯೇ ತ.ರಾ.ಸು. ಅವರ ಉದ್ದೇಶ ಸ್ಪಷ್ಟವಾಗಿದೆ.... ಅವರ ಕಾದಂಬರಿಯ ಉದ್ದೇಶ ಸರ್ವಾಧಿಕಾರಿಯ ಹುಟ್ಟು ಅಟ್ಟಹಾಸ ಮತ್ತು ಪತನ. ಇದು ಹಿಟ್ಲರ್, ಮುಸಲೋನಿಯರಿಂದ ಸದ್ದಾಂ ಹುಸೇನ್‌ರವರೆಗೆ ಜಗತ್ತಿನ ಎಲ್ಲಾ ಸರ್ವಾಧಿಕಾರಿಗಳ ಕಥೆ ಕೂಡ ಆಗುತ್ತದೆ. ಈ ಸಂರಚನೆಯ ಕಾರಣಕ್ಕೆ 'ಕಂಬನಿಯ ಕುಯಿಲು, ರಕ್ತರಾತ್ರಿ,

ತಿರುಗುಬಾಣ' ಕಾದಂಬರಿ ತ್ರಿವಳಿಗಳು ಚಿತ್ರದುರ್ಗದ ಸೀಮಿತ ಪ್ರಾದೇಶಿಕತೆಯನ್ನು ಮೀರಿ ಕನ್ನಡಿಗರಿಗೆಲ್ಲವೂ ಪ್ರಿಯವಾದ ಕೃತಿಗಳಾಗಿವೆ."[೬೬] ಎಂಬ ಮಾತುಗಳು ಸತ್ಯಕ್ಕೆ ಹತ್ತಿರವಾಗಿವೆ. ಯಾಕೆಂದರೆ, ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳ ಪಾತ್ರಗಳ ಜೀವಂತಿಕೆಯನ್ನು ವಾಸ್ತವಿಕ ನೆಲೆಗಟ್ಟಿನಲ್ಲಿರಿಸಿಕೊಂಡು ಚಿಂತಿಸಲು ಅವಕಾಶವಿದೆ.

ಸರ್ವಾಧಿಕಾರಿ ಮುದ್ದಣ್ಣನ ದೆಸೆಯಿಂದ ಪ್ರಜಾನುರಾಗಿ ಲಿಂಗಣ್ಣ ನಾಯಕನ ಹತ್ಯೆ ನಡೆಯುತ್ತದೆ. ಇದರ ಭೀಭತ್ಸ ಮೆರವಣಿಗೆಯ ದೃಶ್ಯದೊಂದಿಗೆ ಕಾದಂಬರಿ ಪ್ರಾರಂಭವಾಗುತ್ತದೆ. ಎಲ್ಲಡೆ ಭಯಾನಕ ವಾತಾವರಣ ನಿರ್ಮಾಣಗೊಂಡಂತೆ, ಕಾರ್ಗತ್ತಲಿನ ನೆರಳು ಆವರಿಸಿಕೊಂಡಿದೆ. ದುರ್ಗದ ನಿಷ್ಠಾವಂತ ವ್ಯಕ್ತಿಗಳಲ್ಲಿ ದುಃಖವು ಮಡುಗಟ್ಟಿದೆ, ಜೊತೆಗೆ ಕ್ರೋಧವೂ ತುಂಬಿಕೊಂಡಿದೆ. ಅದರಲ್ಲೂ ಹೆಡೆತುಳಿದ ಸರ್ಪದಂತೆ ಗಿರಿಜೆಯು ಕೋಪಾಗ್ನಿಯಲ್ಲಿ ಕುದಿಯುತ್ತಾಳೆ. 'ಮುದ್ದಣ್ಣನಿಂದಾದ ಲಿಂಗಣ್ಣ ನಾಯಕನ ಕೊಲೆಯ ದಾರುಣ ವಾರ್ತೆಯನ್ನು ಕೇಳಿ ಒಂದು ಗಳಿಗೆ ಸಿಡಿಲು ಬಡಿದಂತೆ ನಿಶ್ಚೇಜಿತಳಾಗಿ ನೆಲಕ್ಕೊರಗಿದ್ದಳು ಗಿರಿಜೆ. ಆದರೆ ಮರುಗಳಿಗೆಯೇ ಎಚ್ಚರವಾಯಿತು. ಎಚ್ಚರವಾಗುತ್ತಿದ್ದ ಹಾಗೆ, ಹೆಡೆ ತುಳಿದ ಸರ್ಪದಂತೆ ಕ್ರೋಧದಿಂದ ಬುಸುಗುಟ್ಟುತ್ತ ಕುಳಿತಿದ್ದಳು"[೬೭] ಎಂಬಂತೆ ಗಿರಿಜೆಯ ಅಂತರಂಗದಲ್ಲಿ ಜ್ವಾಲಾಗ್ನಿ ತುಂಬಿಕೊಂಡಿದೆ. ಲಿಂಗಣ್ಣ ನಾಯಕನ ಕೊಲೆಯ ನಂತರ ಮುದ್ದಣ್ಣನು ದುರ್ಗದ ನಾಯಕನಾಗುವ ತನ್ನ ಕನಸಿಗೆ ಜೀವ ತುಂಬುತ್ತಾನೆ. ಅದಕ್ಕಾಗಿ ವಿವಿಧ ಬಗೆಯ ಸಂಚು ರೂಪಿಸುತ್ತಾನೆ. ಲಿಂಗಣ್ಣ ನಾಯಕನಿಗೆ ನಿಷ್ಠರಾದ ಪರಶುರಾಮಪ್ಪ ಮತ್ತು ಭರಮಣ್ಣರನ್ನು ಕಾರಾಗೃಹದಲ್ಲಿಡಿಸುತ್ತಾನೆ. "ಕಬ್ಬಿಣದ ಸರಳುಗಳು ಬಿಗಿದ ಗವಾಕ್ಷದಿಂದ ನುಸುಳಿ ಬಂದ ಮಂಕಾದ ಬೆಳಕು, ನೆಲಮನೆಯಲ್ಲಿ ಕತ್ತಲು ತುಂಬಿದ ನೆಲದ ಮೇಲೆ ಗವಾಕ್ಷಿಯ ಚಿತ್ರವನ್ನು ಚಿತ್ರಿಸಿತ್ತು. ಆ ಬೆಳಕಿನ ವರ್ತುಲದತ್ತಲೇ ಬೆಳಕಿಳಿದು ಮಂಕಾದ ಕಣ್ಣುಗಳಿಂದ ನೋಡುತ್ತ ಕುಳಿತಿದ್ದ, ದಪ್ಪವಾದ ಗಡ್ಡ ಬೆಳೆದು, ಕೂದಲು ಕೆದರಿ, ಅಸ್ತವ್ಯಸ್ತವಾದ ಬಟ್ಟೆಯನ್ನು ಧರಿಸಿ ಗುರುತು ಹಿಡಿಯಲೂ ಕಷ್ಟವಾದ ಸ್ಥಿತಿಯಲ್ಲಿದ್ದ ಪರಶುರಾಮಪ್ಪ ಅವನ ಕಣ್ಣುಗಳಿಂದ ಇಳಿಯುತ್ತಿದ್ದ ಕಂಬನಿ, ಗಡ್ಡದ ಕೂದಲುಗಳ ಪೊದೆಯಲ್ಲಿ ನಿಧಾನವಾಗಿ ಇಳಿದು ನೆಲದ ಮೇಲೆ ತೊಟ್ಟಿಕ್ಕುತ್ತಿತ್ತು. ನೆಲ ಮನೆಯ ಮತ್ತೊಂದು ಮೂಲೆಯಲ್ಲಿ, ಕೈಕಾಲುಗಳಿಗೆ ಭಾರವಾದ ಕಬ್ಬಿಣದ ಸರಪಳಿ ಬಿಗಿದು ದಳವಾಯಿ ಭರಮಣ್ಣ ಅರೆಪೆಟ್ಟಾದ ಸರ್ಪದಂತೆ ಬುಸುಗುಟ್ಟುತ್ತಿದ್ದ"[೬೮] ಈ ಸಮಯದಲ್ಲಿ ತಮ್ಮ ನಾಯಕನಾದ ಲಿಂಗಣ್ಣ ನಾಯಕನ ಕೊಲೆಯ ಪಾಪದ ಪ್ರಜ್ಞೆ ಅವರನ್ನು ಕಾಡುತ್ತಿತ್ತು. ಈ ಕೊಲೆಗೆ ಪ್ರತೀಕಾರ ತೀರಿಸಲೇಬೇಕೆಂಬ ಛಲವೂ ಅವರಲ್ಲಿ ಮೂಡುತ್ತದೆ. ಒಂದುಕಡೆ ದುಃಖ ಮತ್ತೊಂದೆಡೆ ಕ್ರೋಧ ಅವರಿಬ್ಬರನ್ನೂ ಆವರಿಸಿಕೊಂಡಿದೆ. ಆದರೆ ಗಿರಿಜೆ ಮುದ್ದಣ್ಣನ ಕೈಗೆ ಸಿಗದೆ ನಾಯಕ ನಿಷ್ಠರಾದ ಪ್ರಜೆಗಳನ್ನು ಸಂಘಟಿಸುವ ಕಾರ್ಯದಲ್ಲಿ ತೊಡಗುತ್ತಾಳೆ.

ಒಂದು ಸಂದರ್ಭದಲ್ಲಿ ಮುದ್ದಣ್ಣನು ಪರಶುರಾಮಪ್ಪ ಮತ್ತು ಭರಮಣ್ಣರೊಂದಿಗೆ ಸಂಧಾನಕ್ಕೆ ಮುಂದಾಗುತ್ತಾನೆ. ಆದರೆ ಇದಕ್ಕೆ ಅವರು ಒಪ್ಪದಿದ್ದಾಗ ಮುದ್ದಣ್ಣನು ಚಿಂತೆಗೆ ಒಳಗಾಗುತ್ತಾನೆ. ಅವರಿಬ್ಬರಲ್ಲಿನ ದಾವಾನಿಲವನ್ನು ಕಂಡು ದಂಗಾಗುತ್ತಾನೆ. ಈ ಮಧ್ಯೆ ಅವರಿಬ್ಬರೂ ತಪ್ಪಿಸಿಕೊಂಡರೆಂಬ ಸುದ್ದಿ ಮುದ್ದಣ್ಣನಿಗೆ ತಲುಪಿದಾಗ ಮತ್ತಷ್ಟು ಹುಚ್ಚನಂತಾಗುತ್ತಾನೆ. "ತನ್ನ ಕೈಯಿಂದ ಪರಶುರಾಮಪ್ಪ, ಭರಮಣ್ಣ ತಪ್ಪಿಸಿಕೊಂಡು ಹೋದುದು ಮುದ್ದಣ್ಣನ ಕ್ರೋಧಕ್ಕೆ ಕಳ್ಳು ಕುಡಿಸಿದಂತಾಗಿತ್ತು. ಹಾಗೇ ಸುಲಭವಾಗಿ ಅವರ ತಲೆಯನ್ನು ತೆಗೆಯಬಹುದಾದ ಅವಕಾಶವಿದ್ದಾಗ ಆ ಕೆಲಸವನ್ನು ಮಾಡಿ ಮುಗಿಸದ ತನ್ನ ದೌರ್ಬಲ್ಯದ ಬಗ್ಗೆಯೂ ಅವನಲ್ಲಿ ಸಿಟ್ಟಿತ್ತು. "ಆ ಕೆಲಸ ಮಾಡದೆ ಮಹಾ ಮೂರ್ಖತನ ಮಾಡಿದೆ" ಎಂದು ಹಳಹಳಿಸುತ್ತಾ, ಎದೆಯಲ್ಲಿ ತೆರೆಯಪ್ಪಳಿಸುವ ಷಂಡಕ್ರೋಧದ ಉದ್ವೇಗದಲ್ಲಿ ಕೈಗಳನ್ನು ಹಿಸುಕಿಕೊಳ್ಳುತ್ತಾ ಅಂತಿಂದಿತ್ತ ಇತ್ತಿಂದಿತ್ತ ಅಲೆದಾಡುತ್ತಿದ್ದ, ಅವರಿಬ್ಬರೂ ಸೆರೆಯಿಂದ ತಪ್ಪಿಸಿಕೊಂಡು ಹೋದರೆಂಬುದನ್ನು ಕೇಳಿದಾಗಿನಿಂದ ಕ್ರೋಧದೊಂದಿಗೆ ಮುದ್ದಣ್ಣನ ಜೀವನದಲ್ಲಿ ಹಿಂದೆಂದೂ ಮೂಡದಂಥ ಭೀತಿಯೊಂದು ಮೊಟ್ಟ ಮೊದಲ ಬಾರಿಗೆ ಮೂಡಿ, ಆತನ ಚಿತ್ತರಂಗವನ್ನು ಪ್ರಕ್ಷುಬ್ಧಗೊಳಿಸಿತ್ತು. ಅವನ ಮಿದುಳಿನಾಳದಲ್ಲಿ ಹುದುಗಿದ ಯಾವುದೋ ಧ್ವನಿ "ಬೇಗ ಮಾಡು, ಬೇಗ ಮಾಡು" ಎಂದು ಚೀರಿ ಹೇಳುತ್ತಿತ್ತು."[೬೮] ಈ ಕಾರಣದಿಂದಾಗಿ ಮುದ್ದಣ್ಣನು ಕೊಲೆ, ಸುಲಿಗೆ, ಅತ್ಯಾಚಾರಗಳಿಗೆ ಕುಮ್ಮಕ್ಕು ನೀಡುತ್ತಾನೆ. ತಡಮಾಡದೆ ಪೆದ್ದನಾದ ರಂಗಪ್ಪ ನಾಯಕನನ್ನು ಪಟ್ಟಕ್ಕೇರಿಸಿ, ತಾನಂದುಕೊಂಡದ್ದನ್ನು ಸಾಧಿಸಬೇಕೆಂಬ ಹವಣಿಕೆಯಲ್ಲಿರುತ್ತಾನೆ ಮುದ್ದಣ್ಣನು. ಈ ನಡುವೆ ಪರಶುರಾಮಪ್ಪ, ಭರಮಣ್ಣರನ್ನು ಪಾರುಮಾಡುವಲ್ಲಿ ಗೋಪಾಲಪುರದ ಗೌಡನ ಪಾತ್ರವಿದೆಯೆಂದು ಅನುಮಾನ ಪಡುವ ಮುದ್ದಣ್ಣನು ಅವನ ಹಳ್ಳಿಗೆ ಮುತ್ತಿಗೆ ಹಾಕಿ ಅವನಿಗೆ ಚಿತ್ರಹಿಂಸೆ ನೀಡಿ ಕೊಲೆ ಮಾಡಿಸುತ್ತಾನೆ. ಜೊತೆಗೆ ಹಳ್ಳಿಯ ಪ್ರತಿಯೊಂದು ಮನೆಯನ್ನು ಶೋಧಿಸಲು ಆಜ್ಞೆಮಾಡಿ ಲೂಟಿ ಮಾಡಿಸುತ್ತಾನೆ.

ಮುದ್ದಣ್ಣನ ದರ್ಪ, ದಬ್ಬಾಳಿಕೆಯು ಎಲ್ಲಡೆ ಕಂಡು ಬಂದಾಗ, ಇದಕ್ಕೆ ಜನರ ವಿರೋಧವೂ ವ್ಯಕ್ತವಾಗುತ್ತ ಹೋಗುತ್ತದೆ. ಮನೋವಿಕಾರಗೊಂಡ ಮುದ್ದಣ್ಣನು ತರಾತುರಿಯಲ್ಲಿ ರಂಗಪ್ಪನಾಯಕನನ್ನು ಪಟ್ಟಕ್ಕೇರಿಸಲು ಮುಂದಾಗುತ್ತಾನೆ. ಪಟ್ಟಾಭಿಷೇಕದ ಖರ್ಚುವೆಚ್ಚಕ್ಕಾಗಿ ಪ್ರತಿಯೊಂದು ಹಳ್ಳಿಯ ಗೌಡರಿಗೂ ಪತ್ರವೊಂದನ್ನು ರವಾಣಿಸಿ, ಪಟ್ಟಗಾಣಿಕೆ ಕೊಡಬೇಕೆಂದು, ಒಂದು ವೇಳೆ ಕೊಡದಿದ್ದರೆ ಅಂಥವರನ್ನು ರಾಜದ್ರೋಹಿಗಳೆಂದು ಕರೆದು ದಂಡಿಸಲು ಸೂಚಿಸುತ್ತಾನೆ. ಇದಕ್ಕೆ ಪ್ರತಿರೋಧ ವ್ಯಕ್ತವಾದಾಗ, ಸೈನಿಕರಿಂದ ಅತಿಕ್ರಮಣ, ಅತ್ಯಾಚಾರಗಳಂಥ ಕ್ರೂರ ಕೃತ್ಯಗಳನ್ನು ಎಸಗಲು ಅಪ್ಪಣೆ ಕೊಡುತ್ತಾನೆ. ಇದರಿಂದ ಜನರಲ್ಲಿ ಕ್ರೋಧ-ಆವೇಶಗಳು ಹೆಚ್ಚಾಗುತ್ತವೆ. ಅವರೆಲ್ಲ ಮುದ್ದಣ್ಣನ ಸರ್ವಾಧಿಕಾರದ

ವಿರುದ್ಧ ಬಂಡೇಳಲು ಮುಂದಾಗುತ್ತಾರೆ. ಇಂಥ ವಿಷಮ ಪರಿಸ್ಥಿತಿಯಲ್ಲಿಯೇ ಮುದ್ದಣ್ಣನು ರಂಗಪ್ಪ ನಾಯಕನಿಗೆ ಪಟ್ಟಕಟ್ಟಿಸುತ್ತಾನೆ.

ಇತ್ತ ಕಡೆ ಗಿರಿಜೆಯ ಸಂಘಟನಾ ಸಾಮರ್ಥ್ಯವೂ ಎಲ್ಲೆಡೆ ಹೆಚ್ಚಾಗುತ್ತ ಹೋಗುತ್ತದೆ. ರಾಜ್ಯದ ಮೂಲೆ ಮೂಲೆಗಳಿಗೂ ಸಂಚರಿಸಿ ಜನರನ್ನು ಹುರುದುಂಬಿಸುವ ಕಾರ್ಯವನ್ನು ಅವಳು ಮಾಡುತ್ತಲೇ ಇರುತ್ತಾಳೆ. ಇದರಿಂದಾಗಿ, "ಬಿರುಸಾದ ಸಂಘಟನೆ, ಸಭೆಗಳ ಚಟುವಟಿಕೆಗಳು ಚುರುಕುಗೊಳ್ಳುತ್ತದೆ. ರಾಜಭಕ್ತಿ, ಸ್ವಾಮಿಭಕ್ತಿ ಪ್ರತಿಯೊಬ್ಬರ ಮನದಲ್ಲಿಯೂ ಪುಟದೇಳುತ್ತದೆ. ಅಲ್ಲಲ್ಲಿ ಸಭೆಗಳು ನಡೆದು ಮುದ್ದಣ್ಣನ ದುರಾಡಳಿತದ ವೈಖರಿ ಚರ್ಚೆಯಾಗುತ್ತದೆ. ಪ್ರತಿಯೊಬ್ಬರೂ ತಮ್ಮ ಕರ್ತವ್ಯವೇನು ಎಂಬುದರ ಬಗ್ಗೆ ಆತ್ಮಾವಲೋಕನ ಮಾಡಿಕೊಳ್ಳುವಂತಾಗುತ್ತದೆ. ಮುದ್ದಣ್ಣನ ಆಡಳಿತವನ್ನು ಕೊನೆಗಾಣಿಸಲು ಅನುಸರಿಸಬೇಕಾದ ವಿಧಾನಗಳ ಬಗ್ಗೆ ಯಾರು ಯಾವ ರೀತಿಯ ಕರ್ತವ್ಯಗಳನ್ನು ನಿರ್ವಹಿಸಬೇಕು ಎಂಬುದರ ಬಗ್ಗೆ ಚರ್ಚೆಯಾಗುತ್ತದೆ."[೨೦] ಹಳ್ಳಿಯ ಗರಡಿಮನೆಗಳು ಮಲ್ಲಯುದ್ಧದ ತರಬೇತಿ ಸ್ಥಳಗಳಾಗುತ್ತವೆ. ಅಲ್ಲಿ ಯುವ ಸೈನಿಕರ ಗುಂಪುಗಳು ನಿರ್ಮಾಣವಾಗುತ್ತವೆ. ಈ ನಡುವೆ ಮುದ್ದಣ್ಣನಿಗೆ ತನ್ನ ಬಲಗೈ ಬಂಟನಾಗಿದ್ದ ದಾಸನಾಯಕ ಮತ್ತು ತನ್ನ ಸಹೋದರರು ದೊಡ್ಡ ತಲೆನೋವಾಗಿ ಪರಿಣಮಿಸುತ್ತಾರೆ. ದುರ್ಗದ ನಾಯಕ ನಿಷ್ಠ ಸೈನಿಕರು ಮುದ್ದಣ್ಣನಿಗೆ ತಿರುಗಿಬೀಳುತ್ತಾರೆ. ದಾಸನಾಯಕನು ಮುದ್ದಣ್ಣನ ವಿರೋಧಿಗಳಿಗೆ ಎಲ್ಲ ರೀತಿಯ ಸಹಕಾರ ನೀಡುತ್ತಾನೆ. ಈ ಎಲ್ಲದರ ಪರಿಣಾಮವಾಗಿ ಮುದ್ದಣ್ಣನ ಸರ್ವಾಧಿಕಾರದ ಅಂತ್ಯದ ದಿನಗಳು ಹತ್ತಿರವಾಗುತ್ತವೆ.

ಭರಮಣ್ಣನು ಮುದ್ದಣ್ಣನನ್ನು ಮುಗಿಸಲು ಮುಖಾಮುಖಿಯಾಗಿ, 'ನಿನ್ನೊಂದಿಗೆ ಮಾತನಾಡಲು ನಾನು ಸಿದ್ಧವಾಗಿಲ್ಲ ಮುದ್ದಣ್ಣ, ಅದಕ್ಕೆ ಈ ನನ್ನ ಕತ್ತಿ ಹಾತೊರೆಯುತ್ತಿದೆ. ಮೊದಲು ಅದರ ಪ್ರಶ್ನೆಗೆ ನಿನ್ನ ತಲೆ ಉತ್ತರ ಕೊಡಲಿ' ಎಂದು ತನ್ನ ಕತ್ತಿಯನ್ನು ತೆಗೆದು ನುಗ್ಗುವಾಗ, ಅಜ್ಞಾತಳಾಗಿದ್ದ ಗಿರಿಜೆ ಪ್ರತ್ಯಕ್ಷಳಾಗುತ್ತಾಳೆ. "ಅದಾಗುವುದಿಲ್ಲ ಭರಮಣ್ಣ – ನಾಗತಿಯವರ ಸಾವಿಗೆ ಕಾರಣನಾದ ಇವನು ನನ್ನ ಬೇಟೆ ಪಶು ದೂ ಸರಿದು ನಿಲ್ಲಿ' ಎಂದು, ಭರಮಣ್ಣನನ್ನು ಗದರಿ, ಗಿರಿಜೆ, ಚಿನ್ನಯ್ಯ ಹಿಡಿದ ಮುದ್ದಣ್ಣನ ಹತ್ತಿರ ಸರಿದು, ಅವನ ಕಣ್ಣುಗಳಲ್ಲಿಯೇ ತನ್ನ ಕಣ್ಣುಗಳನ್ನು ಊರಿ "ಎಲ್ಲಿ ಮತ್ತೊಮ್ಮೆ ಬೊಗಳು" ಎಂದವಳೇ ರಪ್ಪನೆ ಮುದ್ದಣ್ಣನ ಬಾಯಿ ಮೇಲೆ ಹೊಡೆದಳು. ಆ ಹೊಡೆತಕ್ಕ ಮುದ್ದಣ್ಣ ತುಟಿ ಬಿರಿದು ರಕ್ತ ಸೂಸಿತು. ಆಗ ರಕ್ತವನ್ನು ಒರೆಸಲು, ಮುದ್ದಣ್ಣ ನಾಲಿಗೆಯನ್ನು ಚಾಚಿದ ಅವನ ನಾಲಿಗೆ ಹೊರಗೆ ಸುಳಿಯುತ್ತಿದ್ದ ಹಾಗೆ, ಮಿಂಚಿನಂತೆ ಅದನ್ನು ಹಿಡಿದೆಳೆದು ಕತ್ತರಿಸಿ, ರಕ್ತ ಸೋರುವ ನಾಲಗೆಯ ತುಂಡನ್ನು ಅವನ ಕಣ್ಣ ಮುಂದೆಯೇ ಆಡಿಸುತ್ತಾ 'ಹೂ ಈಗ ಹೇಳು, ಮಾತಾಡು' ಎಂದಳು ಗಿರಿಜಾ"[೨೧] ಹೀಗೆ ನುಡಿದವಳೇ ಮುದ್ದಣ್ಣನ ಎದೆಯ

ರಕ್ತವನ್ನು ಒಗೆದು ಕೊಲ್ಲುತ್ತಾಳೆ. ತನ್ನ ಪ್ರತಿಜ್ಞೆಯ ಸೇಡನ್ನು ತೀರಿಸಿಕೊಳ್ಳುತ್ತಾಳೆ. ಇಲ್ಲಿಗೆ ದುರ್ಗವನ್ನು ಕಪಿದಿದ್ದ ಬಹುವರ್ಷಗಳ ಕಾಳರಾತ್ರಿಯ ರಾಹುಕಾಲ ಕಳೆದು, ಹೊಸ ಹಗಲು ಮೂಡುತ್ತದೆ.

**ಹೊಸಹಗಲು:**

ಹೊಸಹಗಲು ಕಾದಂಬರಿಯ ಚಿತ್ರದುರ್ಗದ ಇತಿಹಾಸಕ್ಕೆ ಸಂಬಂಧಿಸಿದ ತ.ರಾ.ಸು. ಅವರ ನಾಲ್ಕನೆಯ ಕಾದಂಬರಿ. ಮತ್ತಿವಂಶದ ಅವಸಾನದ ನಂತರ ಬಿಳಿಜೋಡು ಮನೆತನದ ಭರಮಣ್ಣ ನಾಯಕನಿಗೆ ಪಟ್ಟಕಟ್ಟಲಾಗುತ್ತದೆ. ಅವನ ಕಾಲಕ್ಕೆ ಸಂಬಂಧಿಸಿದ ಚಾರಿತ್ರಿಕ ವಿವರಗಳನ್ನು ಈ ಕಾದಂಬರಿ ಪಡೆದುಕೊಂಡಿದೆ. ಇದರ ನಂತರ 'ವಿಜಯೋತ್ಸವ' ಎಂಬ ಬೃಹತ್ ಕಾದಂಬರಿಯನ್ನು ತ.ರಾ.ಸು. ಅವರು ರಚಿಸಿದ್ದಾರೆ. ಈ ಕಾದಂಬರಿ ಕೂಡ ಹೊಸಹಗಲು ಕಾದಂಬರಿಗೆ ಪೂರಕವಾಗಿ ರಚನೆಗೊಂಡಿದೆ.

"ಕಂಬನಿಯ ಕುಯಿಲು', 'ರಕ್ತರಾತ್ರಿ', 'ತಿರುಗುಬಾಣ' ಕಾದಂಬರಿಗಳಿಗೂ ಇದಕ್ಕೂ ಒಂದು ದೊಡ್ಡ ವ್ಯತ್ಯಾಸವನ್ನು ಓದುಗರು ಕಾಣಬಹುದು. ಅಲ್ಲಿ ಕಾಣುವುದು ವಿನಾಶೋನ್ಮುಖ ಉಲ್ಕೆಯ ಕಣ್ಣು ಕೋರೈಸುವ ಬೆಳಕು: ಇಲ್ಲಿನದು ದೇಶಕ್ಕೆ ಬೆಳಕು ನೀಡಿ ಹೊರಟ ದೀಪದ ಪ್ರಶಾಂತ ಕಾಂತಿ. ಮುದ್ದಣ್ಣನಂತೆ ಭರಮಣ್ಣ ನಾಯಕ, ರಕ್ತಕ್ಕೆ ಹಸಿದ ಹೆಬ್ಬುಲಿಯಲ್ಲ. ಈ ವ್ಯತ್ಯಾಸವನ್ನು ಗಮನದಲ್ಲಿಟ್ಟುಕೊಂಡು ಓದಿದರೆ, ಈ ಕೃತಿ ಹೆಚ್ಚು ರುಚಿಸಿತೆಂದು ನನ್ನ ನಂಬಿಕೆ."[೨] ಎಂದು ತ.ರಾ.ಸು. ಅವರು ಈ ಕಾದಂಬರಿಯ ದೃಷ್ಟಿಕೋನದ ಹಿನ್ನೆಲೆಯನ್ನು ಸ್ಪಷ್ಟಪಡಿಸಿದ್ದಾರೆ. ಭರಮಣ್ಣ ನಾಯಕ ಸಾಧಿಸಿದ ಸಮರ ವಿಜಯ, ಚಿತ್ರದುರ್ಗದ ನಿರ್ಮಾಣ, ನಗರ ವ್ಯವಸ್ಥೆ, ಅಭಿವೃದ್ಧಿ, ಸಾಮ್ರಾಜ್ಯ ವಿಸ್ತರಣೆ ಅದಕ್ಕಾಗಿ ನಡೆಯುವ ಯುದ್ಧ ಸಾಮಾಜಿಕ ಸುಧಾರಣಾ ಕಾರ್ಯಗಳ ವಿವರಣೆಗಳು ಈ ಕಾದಂಬರಿಯಲ್ಲಿ ಕಾಣಸಿಗುತ್ತವೆ.

ಕುರಿಗಾಹಿಯಾದ ಭರಮಣ್ಣನ ಸ್ವಪ್ನ ಸುಂದರ ವಿವರಣೆಯೊಂದಿಗೆ ಕಾದಂಬರಿಯು ಪ್ರಾರಂಭವಾಗುತ್ತದೆ. ಒಂದು ದಿನ ಬಿಸಿಲ ಧಗೆಯನ್ನು ತಾಳಲಾಗದೆ ಭರಮಣ್ಣನು ಬೇವಿನಮರದ ಕೆಳಗೆ ಮಲಗಿಕೊಂಡಾಗ, ತಲೆಯ ಮೇಲೆ ಸರ್ಪವೊಂದು ಹೆಡೆಯೆತ್ತಿ ಆಡುವಂತೆ ಭಾಸವಾಗುತ್ತದೆ. ಅದನ್ನು ನೋಡನೋಡುತ್ತ ನಿದ್ರೆಗೆ ಹಾರುವ ಭರಮಣ್ಣನು ಕನಸಿನ ಲೋಕದಲ್ಲಿ ತೇಲಾಡುತ್ತಾನೆ. "ಇಲ್ಲಿ ಮಲಗಬೇಡ ಮುಂದೆ ನಡೆ, ಮುಂದೆ ನಡೆ. ಇದು ನೀನು ಮಲಗುವ ಸ್ಥಳವಲ್ಲ. ಸುತ್ತಲೂ ಬಿಸಿಲಿನ ಝಳವೂ ಸುಳಿಯದಂತೆ, ಸುಳಿದು ಬರುವ ಗಾಳಿಯೂ ತಂಪಾಗಿರುವಂತೆ, ನೀರಿನಲ್ಲಿ ತೋಯಿಸಿದ ಲಾಮಂಚದ ತೆರೆಗಳು ಕಟ್ಟಿದ ಅಂಗಳದ ತಂಪು ನೆರಳಿನಲ್ಲಿ, ತಣ್ಣನೆಯ ನೀರು ಪುಟಿ ಪುಟಿದು. ಪನ್ನೀರಿನ ತುಂತುರುಗಳನ್ನು ಚೆಲ್ಲುವ ಕಾರಂಜಿಗಳ ಮಧ್ಯದಲ್ಲಿ, ಚಂದ್ರಕಾಂತ ಶಿಲೆಯಲ್ಲಿ ಕಡೆದ ವಿಗ್ರಹಗಳಂತಿರುವ ದಾಸಿಯರು. ಗಂಧದ ಗರಿಯ ದೊಡ್ಡ ಬೀಸಣಿಕೆಗಳನ್ನು

ಹಿಡಿದು ಗಾಳಿ ಹಾಕುತ್ತಿರಲು, ತಣ್ಣಗೆ, ಕೋಮಲವಾಗಿ ಮೈಯನ್ನು ನೇವರಿಸುವ, ಮೃದುವಾದ, ಮಂಜಿನಂತೆ ಬೆಳ್ಳಗಿರುವ ರೇಶಿಮೆಯ ಮೇಲುದುಪ್ಪಟ ಹಾಸಿದ, ಮೆತ್ತನೆಯ ಹಾಸಿಗೆ ಹರಡಿದ ಮಂಚದ ಮೇಲೆ ಹಿಮಖಂಡದಿಂದ ತಣ್ಣಗೆ ಕೊರೆಯುವ ದ್ರಾಕ್ಷಾರಸವನ್ನು, ಹನಿಹನಿಯಾಗಿ ಹೀರುತ್ತಾ ಮಲಗುವೆಯಂತೆ......."[೨೩] ಎಂಬಂತೆ ಭರಮಣ್ಣ ಮಿದುಳೂ ಕರಗುವಂತಹ ಬಿಸಿಲಿನ ಮಧ್ಯೆದಲ್ಲೂ ಅರೆಪ್ರಜ್ಞೆಯಲ್ಲಿ ಕನಸಿನಲ್ಲಿ ಮುಂದೆ ಮುಂದೆ ನಡೆಯುತ್ತಾನೆ. ತಾನು ದುರ್ಗದ ದೊರೆಯಾಗುವಂತಹ ಕನಸುಕಾಣುತ್ತಾನೆ. ಇದೇ ಸಮಯದಲ್ಲಿ ಕಾವಿಧರಿಸಿದ ಸನ್ಯಾಸಿಯೊಬ್ಬರ ದರುಶನವಾಗಿ, ಅವರಿಗೆ ತನಗೆ ಬಿದ್ದ ಕನಸಿನ ವಿವರವನ್ನು ನೀಡುತ್ತಾನೆ ಭರಮಣ್ಣ. ಇದೆಲ್ಲವನ್ನೂ ಆಲಿಸಿದ ಸ್ವಾಮಿಗಳು, 'ನಿನ್ನ ಕನಸು ನನಸಾಗುತ್ತದೆ. 'ಕತ್ತಿಯ ಮೇಲೆ ನಡೆದಂತೆ ಎಚ್ಚರವಾಗಿ, ಭೀತಿಯಿಂದ ರಾಜ್ಯವಾಳಬೇಕು. ಅಷ್ಟೆ ನನ್ನ ಮಾತು ತಿಳಿಯಿತೆ?' ಎಂದು ಹೇಳಿ, ಭರಮಣ್ಣನಿಗೆ ಆಶೀರ್ವದಿಸುತ್ತಾರೆ.

ಒಂದು ದಿನ ಪ್ರಧಾನಿ ಪರಶುರಾಮಪ್ಪನು, ದುರ್ಗದ ದೊರೆ ಯಾರಾಗಬೇಕೆಂದು ಚರ್ಚಿಸಲು ತನ್ನ ಮನೆಯಲ್ಲೇ ನಾಡ ಹಿರಿಯರ ಸಭೆಯನ್ನು ಕರೆಯುತ್ತಾನೆ. ಆ ಸಭೆಯಲ್ಲಿ ಸೇರಿದ ಎಲ್ಲ ಹಿರಿಯರು ಭರಮಣ್ಣನೇ ದುರ್ಗದ ದೊರೆಯಾಗಲೆಂದು ತಮ್ಮ ಒಪ್ಪಿಗೆ ಸೂಚಿಸುತ್ತಾರೆ. ಎಲ್ಲರೂ ದುರ್ಗದ ಹಿತಕ್ಕಾಗಿ ಭರಮಣ್ಣನ ಮೇಲೆ ನಂಬಿಕೆಯಿಟ್ಟು ಅವನನ್ನು ದೊರೆಯನ್ನಾಗಿ ಮಾಡಲು ಮುಂದಾಗುತ್ತಾರೆ. "ಬಿಳಿಚೋಡಿನ ಭರಮಣ್ಣ ದುರ್ಗದ ನಾಯಕನಾಗುತ್ತಾನೆ. ಅಷ್ಟು ದಿನ ಬರಿದಾಗಿದ್ದ ಸಿಂಹಾಸನ ತುಂಬುತ್ತದೆ ಎಂಬ ಸುದ್ದಿ, ಅದನ್ನು ಪರಶುರಾಮಪ್ಪ ಮೊದಲಾದವರು ಎಷ್ಟೇ ಮುಚ್ಚಿಡಲು ಯತ್ನಸಿದರೂ ಸಾಧ್ಯವಾಗದೆ ಚಿತ್ರದುರ್ಗದಲ್ಲೆಲ್ಲಾ ಮಳೆಯ ಮುಂಚಿನ ತಂಪು ಗಾಳಿಯಂತೆ ಹರಡಿ ಎಲ್ಲರನ್ನೂ ಸಂತೋಷಗೊಳಿಸಿತು".[೨೪]

ಈ ಕಾರಣದಿಂದ ಏನಾದರೂ ಸದ್ದುಗದ್ದಲವಾಗಬಹುದೆಂಬ ಆತಂಕದಲ್ಲಿದ್ದ ಭರಮಣ್ಣ ಜನರ ಈ ಸಂತೋಷವನ್ನು ಕಂಡು ನಿಟ್ಟುಸಿರು ಬಿಡುತ್ತಾನೆ. "ಚಿತ್ರದುರ್ಗವನ್ನು ಆಳಿದ ವಂಶದ ಕುಡಿಯಾಗಿದ್ದರೂ ಸಾಮಾನ್ಯ ಬದುಕನ್ನು ಬಾಳುತ್ತಿದ್ದ ಕುರಿಗಾಹಿ ಭರಮಣ್ಣ "ನಾಯಕ"ನಾಗಿ ಬೆಳೆದ ಪರಿಯನ್ನು ಈ ಕಾದಂಬರಿಯು ಚಿತ್ರಿಸಿದೆ"[೨೫] ಎಂಬ ಬಿ.ಎ.ಅನ್ನದೇಶ ಅವರ ಅಭಿಪ್ರಾಯ ಸೂಕ್ತವಾದುದ್ದಾಗಿದೆ. ಶತ್ರು ಹೃದಯವನ್ನು ತಲ್ಲಣಗೊಳಿಸುವ ರುದ್ರಪ್ರಕಾಶದೊಂದಿಗೆ ಚಿತ್ರದುರ್ಗದ ಗಂಡುಮೆಟ್ಟಿದ ನಾಡಲ್ಲಿ ಭರಮಪ್ಪ ನಾಯಕನ ಆಳ್ವಿಕೆ ಪ್ರಾರಂಭವಾಗುತ್ತದೆ. ಶ್ರೀಸಾಮಾನ್ಯ ವ್ಯಕ್ತಿಯೊಬ್ಬನಿಗೆ ದೊರೆತ ಅಧಿಕಾರದಂತೆ ತ.ರಾ.ಸು. ಅವರು ಇದರ ಚಿತ್ರಣವನ್ನು ಕೊಡುತ್ತಾರೆ. ಇಲ್ಲಿಯತನಕ ರಕ್ತಪಿಪಾಸತನದ ವ್ಯಕ್ತಿಗಳನ್ನೇ ನೋಡಿದ ದುರ್ಗದ ಜನತೆ ಒಬ್ಬ ಹೃದಯವಂತ, ಜನಾನುರಾಗಿ ಪ್ರಭುವನ್ನು ಭರಮಪ್ಪ ನಾಯಕನಲ್ಲಿ ಕಾಣುವಂತಾಯಿತು.

ಈ ನಡುವೆ ಮತ್ತಿ ವಂಶಸ್ಥನಾದ ಸೂರ್ಯಕಾಂತಪ್ಪನ ಮಗ ರಂಗಪ್ಪನಾಯಕನು, ಜೈಲಿನಲ್ಲಿರುತ್ತಾನೆ. ದುರ್ಗದ ಪಟ್ಟಾಧಿಕಾರ ತನಗೆ ಒಲಿಯಬಹುದೆಂಬ ಆಸೆಯಲ್ಲಿದ್ದ ಈತನು ಭರಮಪ್ಪನಾಯಕ ಪಟ್ಟಕ್ಕೆ ಬಂದ ಸುದ್ದಿ ಕೇಳಿ ದ್ವೇಷಕಾರಲು ಪ್ರಾರಂಭಿಸುತ್ತಾನೆ. "ಮತ್ತಿ ಮನೆತನದ ಏಕೈಕ ಉತ್ತರಾಧಿಕಾರಿಯಾದ ತನಗೇ ಪುನ: ಪಟ್ಟವಾಗಬಹುದು ಎಂಬ ಭಾವನೆ ಯಾವ ಪರಿಸ್ಥಿತಿಯಲ್ಲೂ ಅವನ ಮನಸ್ಸಿನಿಂದ ಮಾಯವಾಗಿರಲಿಲ್ಲ. ಆದರೆ ತನ್ನೆಲ್ಲ ನಿರೀಕ್ಷೆಗೆ ವಿರುದ್ಧವಾಗಿ, ಬೇರೆಯ ವಂಶದವರೇ ದುರ್ಗದ ದೊರೆಗಳಾಗುತ್ತಾರೆಂದು ಕೇಳಿದಾಗಿನಿಂದ ಅವನ ಹೃದಯದಲ್ಲಿ ಭಯಂಕರ ದ್ವೇಷ ಹೊತ್ತಿ ಉರಿಯಲಾರಂಭಿಸಿತು. ಭರಮಪ್ಪನಾಯಕನ ಹೆಸರು ಕಿವಿಗೆ ಬಿದ್ದರೂ, ಆ ದ್ವೇಷದ ಜ್ವಾಲೆಗೆ ಗಾಳಿ ಬೀಸಿದಂತಾಗುತ್ತಿತ್ತು".[೨೧] ಈ ಕಾರಣದಿಂದ ಇವನು ಚದುರಗೋಳದ ಶಾನುಭೋಗನಾದ ಕೆಂಚಯ್ಯನ ಸಹಾಯದಿಂದ ಸೆರೆಯಿಂದ ತಪ್ಪಿಸಿಕೊಳ್ಳುತ್ತಾನೆ. ತನ್ಮೂಲಕ ಕೆಂಚಯ್ಯನು ದುರ್ಗದ ಉಪ್ಪು ಉಂಡರೂ ಹರಪನಹಳ್ಳಿಯವರಿಗೆ ಆಳಾಗಿ ದುರ್ಗಕ್ಕೆ ದ್ರೋಹ ಬಗೆಯುತ್ತಾನೆ. ಯಾಕೆಂದರೆ, ರಂಗಪ್ಪನಾಯಕ ಸೆರೆಯಿಂದ ತಪ್ಪಿಸಿಕೊಂಡಿದ್ದು ಹರಪನಹಳ್ಳಿಯವರಿಗೆ ದುರ್ಗದ ವಿರುದ್ಧ ಸಂಚು ರೂಪಿಸಲು ದಾರಿ ತೆರೆದಂತಾಗುತ್ತದೆ. ಇದರ ಪರಿಣಾಮವೆಂಬಂತೆ, ಹರಪನಹಳ್ಳಿ ಹಾಗೂ ಬಿದನೂರಿನವರು ಸೇರಿ ದುರ್ಗಕ್ಕೆ ಮುತ್ತಿಗೆ ಹಾಕಿ ಅಣಜಿಕೋಟೆಯನ್ನು ವಶಪಡಿಸಿಕೊಳ್ಳುತ್ತಾರೆ. ಈ ಕೋಟೆಯನ್ನು ಉಳಿಸಿಕೊಳ್ಳುವುದಕ್ಕಾಗಿ ಭರಮಪ್ಪ ನಾಯಕನು ಮಾಡಿದ ಪ್ರಯತ್ನ ವಿಫಲವಾಗುತ್ತದೆ. ಇದು ದುರ್ಗದ ಸೋಲಾಗಿ ಕಾಣುತ್ತದೆ. ಯಾವುದು ಮುನ್ಸೂಚನೆ ಇಲ್ಲದೆ ಹರಪನಹಳ್ಳಿಯವರು ನಡೆಸಿದ ಈ ಯುದ್ಧದಿಂದಾಗಿ ಮತ್ತು ಅಣಜಿಕೋಟೆ ಕೈತಪ್ಪಿಹೋದದ್ದರಿಂದಾಗಿ ಭರಮಪ್ಪ ನಾಯಕನು ಮಾನಸಿಕ ಆಘಾತಕ್ಕೆ ಒಳಗಾಗುತ್ತಾನೆ. ದುರ್ಗದ ಜನತೆಗೆ ತಾನು ಕೊಟ್ಟ ಮಾತನ್ನು ಉಳಿಸಿಕೊಳ್ಳಲಾಗಲಿಲ್ಲವೆಂಬ ವೇದನೆ ಅವನನ್ನು ಕಾಡುತ್ತದೆ.

"ಈ ಘೋರ ಅಪಜಯದ ಜೀವಂತ ದೃಶ್ಯವನ್ನು ಕಂಡ ದುರ್ಗ ನಿರಾಶೆ, ಕ್ರೋಧ, ದು:ಖಗಳ ತೆರೆಗಳಲ್ಲಿ ಹೊಯ್ದಾಡಿತು. ದುರ್ಗದ ಮುಖದ ಹೊಳಪು ಸತ್ತು, ಕತ್ತಲು ಕವಿಯಿತು. ಮಾತನಾಡುವ ನಾಲಗೆಯೂ ಉಡುಗಿ ಹೋಯಿತು. ನೂರಾರು ಮನೆಗಳಿಂದ ಅಳುವಿನ ಧ್ವನಿ ಹೊರ ಹೊಮ್ಮಿ, ದುರ್ಗದ ಬೀದಿ ಬೀದಿಗಳಲ್ಲೂ ಹರಿಯಿತು"[೨೨] ಈ ಆರ್ತನಾದವನ್ನು ಕೇಳಿ ಭರಮಣ್ಣ ನಾಯಕನಿಗೆ ಸಿಡಿಲು ಬಡಿದಂತಾಗುತ್ತದೆ. ಇದು ಅವನ ಆಳ್ವಿಕೆಯ ಮೊದಲ ಸಮರದ ಸೋಲಾಗಿ, ಅವನ ಮನವನ್ನು ಹಿಂಸಿಸುತ್ತದೆ. ಇದರಿಂದ ವಿಚಲಿತನಾದರೂ ಬಹುಬೇಗನೆ ಎಚ್ಚೆತ್ತುಕೊಳ್ಳುವ ಭರಮಣ್ಣ ನಾಯಕ ಅಣಜಿ ಕೋಟೆಯನ್ನು ಮರಳಿ ಪಡೆಯಲು ಮುಂದಾಗುತ್ತಾನೆ. ಇದಕ್ಕೆ ಮುರುಘರಾಜೇಂದ್ರ

ಸ್ವಾಮಿಗಳ ದರ್ಶನದ ಪ್ರಭಾವವೇ ಪ್ರಮುಖ ಕಾರಣವಾಗುತ್ತದೆ. ಪ್ರಧಾನಿ ಪರಶುರಾಮಪ್ಪ ಮತ್ತು ದಳವಾಯಿ ಭರಮಣ್ಣ ಮುಂತಾದವರೊಂದಿಗೆ ಸಮಾಲೋಚಿಸಿ, ದುರ್ಗದ ಸುತ್ತಮುತ್ತಲಿನ ಪಾಳೆಗಾರರ ನೆರವನ್ನು ಪಡೆದು, ಹರಪನಹಳ್ಳಿಯವರೊಂದಿಗೆ ಯುದ್ಧವನ್ನು ಸಾರಿ, ಅಣಜಿ ಕೋಟೆಯನ್ನು ವಶಪಡಿಸಕೊಳ್ಳಬೇಕೆಂಬ ನಿರ್ಣಯಕ್ಕೆ ಬರುತ್ತಾನೆ. ಇದಕ್ಕಾಗಿ ತುಂಬಿದ ಓಲಗದಲ್ಲಿ ದಳವಾಯಿ ಭರಮಣ್ಣನಿಗೆ ಭರಮಪ್ಪ ನಾಯಕನು ರಣವೀಳಯವನ್ನು ಕೊಟ್ಟು, "ಈ ವೀಳಯದ ರೂಪದಲ್ಲಿ ಇಂದು, ನಮ್ಮೆಲ್ಲರ ಹಿರಿಯರು ತಮ್ಮ ಪ್ರಾಣ ಒಪ್ಪಿಸಿ ಕಟ್ಟಿದ ಚಿತ್ರದುರ್ಗದ ಕೀರ್ತಿಯನ್ನು, ದಳವಾಯಿಗಳ ಕೈಗೆ ಒಪ್ಪಿಸುತ್ತಿದ್ದೇವೆ. ಅದನ್ನು ಉಳಿಸುವುದೂ, ಅಳಿಸುವುದೂ ಇಂದು ದಳವಾಯಿಗಳ ಕೈಯಲ್ಲಿದೆ. ಅವರು ಶತ್ರುದರ್ಶನದಿಂದ ಕಲಂಕಿತವಾದ ಅಣಜಿಯ ಕೋಟೆಯ ಮೇಲೆ ಪುನ: ಚಿತ್ರದುರ್ಗದ ಯಶೋಪತಾಕೆಯನ್ನು ಹಾರಿಸಿ, ಬಹುಬೇಗ ನಮ್ಮಿಂದ ಗೆಲುವಿನ ಉಡುಗೊರೆಯನ್ನು ಪಡೆಯಲು ಹಿಂದಿರುಗುತ್ತಾರೆಂದು ಆಶಿಸಿದ್ದೇವೆ. ಏಕನಾಥೇಶ್ವರಿ, ಉತ್ಸವಾಂಬಾ, ಸಿದ್ದೇಶ್ವರರ ಕೃಪೆಯಿಂದ ನಮ್ಮ ಹಾರೈಕೆ ಸಾರ್ಥಕವಾಗಲಿ ಎಂದು ಬಯಸುತ್ತೇವೆ."[೭೮] ಎಂದು ಹೇಳಿ, ಶುಭ ಹಾರೈಸುತ್ತಾನೆ ಭರಮಪ್ಪ ನಾಯಕ. ಸೂಕ್ತ ಸೇನಾಬಲದ ಸಿದ್ಧತೆಯೊಂದಿಗೆ ಹರಪನಹಳ್ಳಿಯವರೊಂದಿಗೆ ಹೋರಾಡಿ, ಕೈತಪ್ಪಿ ಹೋಗಿದ್ದ ಅಣಜಿ ಕೋಟೆಯನ್ನು ಮತ್ತೆ ಗೆದ್ದುಕೊಂಡು ವಿಜಯದ ನಗೆಯೊಂದಿಗೆ ದುರ್ಗ ಪ್ರವೇಶ ಮಾಡುತ್ತಾನೆ ದಳವಾಯಿ ಭರಮಣ್ಣ. ಇದನ್ನು ಕಂಡ ಭರಮಪ್ಪ ನಾಯಕರಿಗೆ ಸಂತೋಷವೇ ಸಂತೋಷ. ದುರ್ಗದ ಜನತೆಯಲ್ಲಿ ಹರ್ಷ ಮನೆಮಾಡುತ್ತದೆ. ಆದರೆ ವಿಜಯೋತ್ಸವದ ಸಂದರ್ಭದಲ್ಲಿ ಸ್ವಾಮಿಗಳು ಆಡುವ ನುಡಿ, ಅವರ ಪಲಾಯಣವನ್ನು ಕಂಡು ಭರಮಪ್ಪ ನಾಯಕ ಗಾಢವಾದ ಚಿಂತೆಯಲ್ಲಿ ಮುಳುಗುತ್ತಾನೆ. ಈ ಮೂಲಕ ತ.ರಾ.ಸು. ಅವರು ಯುದ್ಧವು ಮನುಕುಲದ ಮೇಲೆ ಬೀರಬಹುದಾದ ದುಷ್ಪರಿಣಾಮಗಳ ಮೇಲೆ ಬೆಳಕು ಚೆಲ್ಲುತ್ತಾರೆ. ಅಂತಹ ವಿಷಾದದ ವರ್ಣನೆಯು ಕಾದಂಬರಿಯ ಅಂತ್ಯದಲ್ಲಿ ಕಾಣಸಿಗುತ್ತದೆ.

**ವಿಜಯೋತ್ಸವ:**

'ಹೊಸಹಗಲು' ಕಾದಂಬರಿಗೆ ಪೂರಕವಾಗಿ, ಅದರ ಮುಂದುವರೆದ ಕಥಾನಕ ಭಾಗದಂತೆ ರಚಿಸಲ್ಪಟ್ಟ ಕಾದಂಬರಿಯೇ ವಿಜಯೋತ್ಸವ. ಇದನ್ನು ತ.ರಾ.ಸು. ಅವರು ೧೯೬೭ರಲ್ಲಿ ಪ್ರಕಟಿಸಿದರು. "ಈ ಕಾದಂಬರಿಯ ನಾಯಕನಾದ ಭರಮಣ್ಣ ನಾಯಕ, ಚಿತ್ರದುರ್ಗದ ಇತಿಹಾಸದಲ್ಲೇ ಅತ್ಯಂತ ಭವ್ಯವಾದ ವ್ಯಕ್ತಿ: ಚಿತ್ರದುರ್ಗದ ಕೀರ್ತಿಯನ್ನು ಹಿರಿಮೆಯ ಶಿಖರಕ್ಕೆ ಏರಿಸಿದಾತ. ಅದು ಕೀರ್ತಿಯ ಕಾಲವೂ ಅಹುದು: ಸಾಲು ಕಾಳಗಗಳ ಕಾಲವೂ ಅಹುದು. ಆದರೆ ಆತನ ಬಾಳು ಬರೀ ಕಾಳಗಕ್ಕೆ ಮೀಸಲಾಗದೆ, ಚಿತ್ರದುರ್ಗದ ಜಿಲ್ಲೆಯ ಹತ್ತಾರು ದೊಡ್ಡ ಕೆರೆಗಳು, ಇಪ್ಪತ್ತು ಮೂವತ್ತು ಸಣ್ಣಪುಟ್ಟ ಕೆರೆಗಳು,

ಚಿತ್ರದುರ್ಗದ ಹಲವಾರು ಭವ್ಯ ಮಂದಿರಗಳು ಆತನ ಕೀರ್ತಿಗೆ ಸ್ಮಾರಕವಾಗಿವೆ."[೬೯] ಎಂದು ಅಭಿಪ್ರಾಯ ಪಡುವ ತ.ರಾ.ಸು. ಅವರು ಚಿತ್ರದುರ್ಗದ ಇತಿಹಾಸದಲ್ಲಿ ಭವ್ಯ ವ್ಯಕ್ತಿತ್ವವನ್ನು ಪಡೆದ ಭರಮಣ್ಣ ನಾಯಕನ ಧೀರೋದಾತ್ತ ಬದುಕಿನ ಚಿತ್ರಣವನ್ನು 'ಹೊಸಹಗಲು' ಮತ್ತು 'ವಿಜಯೋತ್ಸವ' ಕಾದಂಬರಿಗಳ ಮೂಲಕ ಕೊಡುವ ಪ್ರಯತ್ನವನ್ನು ಮಾಡಿದ್ದಾರೆ.

ಭರಮಣ್ಣ ನಾಯಕನ ಯುದ್ಧ ವೈರಾಗ್ಯತೆಯಿಂದ ಕಾದಂಬರಿಯು ಮೊದಲಾಗುತ್ತದೆ. ಮುರುಘರಾಜೇಂದ್ರ ಸ್ವಾಮಿಗಳ ದರ್ಶನದಿಂದ ಉಂಟಾದ ಈ ವೈರಾಗ್ಯ ಭಾವನೆಯ ಭರಮಪ್ಪ ನಾಯಕನಲ್ಲಿ ಅಗಾಧವಾದ ಪರಿಣಾಮವನ್ನು ಸೂಚಿಸುತ್ತದೆ. ಅಣಜಿಯ ವಿಜಯೋತ್ಸವದ ದಿನ ಅವನು ತನಗೆ ತಾನೇ ಯುದ್ಧ ಭಾವನೆಯಿಂದ ಹೊರಬರಲು ನಿಶ್ಚಯಿಸಿರುತ್ತಾನೆ. "ಆದಿನ ಗೆಲುವಿನಲ್ಲಿ ಗರ್ಜಿಸುವ ದುರ್ಗದ ಸೇನೆ, ಸಿದ್ದಯ್ಯನ ಬಾಗಿಲಿನಿಂದ ದುರ್ಗವನ್ನು ಪ್ರವೇಶಿಸಿದಾಗ, ದುರ್ಗದ ಮನೆಮನೆಯಲ್ಲೂ ಗೆಲುವಿನ ಗೀತೆ ಮೊಳಗಿದಂದು ಎಲ್ಲರೂ ಹರ್ಷದಿಂದ ನಲಿದಂದು ಮುರುಘರಾಜೇಂದ್ರ ಸ್ವಾಮಿಗಳು ಮಾತ್ರ ಆ ವಿಜಯದಿಂದ ಉಬ್ಬದೆ "ನಿನ್ನ ಕಣ್ಣು ಕಣ್ಣ ಮುಂದೆ ನಡೆಯುತ್ತಿರುವ ಗೆಲುವಿನ ನರ್ತನವನ್ನು ಮಾತ್ರ ಕಾಣುತ್ತಿದೆ ಭರಮಣ್ಣ. ಆದರೆ ಆ ಮೆರವಣಿಗೆಯನ್ನು ಹಿಂಬಾಲಿಸಿ ಬರುತ್ತಿರುವ ಕಂಕಾಳಗಗಳ ಕರಾಳ ಛಾಯೆ ಕಾಣುತ್ತಿಲ್ಲ" ಎಂದು ಹೇಳಿದರು"[೭೦] ಈ ಮಾತಿನ ಸ್ಮರಣೆಯಿಂದ ಕುಗ್ಗಿ ಹೋದ ಭರಮಣ್ಣ ನಾಯಕನು, ಯುದ್ಧದ ಭಯಾನಕತೆಯನ್ನು ನೆನೆಸಿಕೊಂಡು ನೋವನ್ನು ಅನುಭವಿಸುತ್ತಿರುತ್ತಾನೆ. ದೆಹಲಿಯ ಬಾದಷಹನ ಪ್ರತಿನಿಧಿಯಾಗಿ ಸೀರ್ಯದಲ್ಲಿ ದಿವಾನ್ ಫೌಜುದಾರ ಖಾಸಿಂಖಾನನು ಅಧಿಕಾರದಲ್ಲಿರುತ್ತಾನೆ. ಇವನ ಕಡೆಯ ವಕೀಲರು ದುರ್ಗದ ನಾಯಕರನ್ನು ಭೇಟಿಯಾಗಲು, ಖಾಸಿಂ ಖಾನರ ಪತ್ರದೊಂದಿಗೆ ಬರುತ್ತಿದ್ದಾರೆಂಬ ಸುದ್ದಿಯು ದುರ್ಗದ ನಾಯಕರಿಗೆ ತಲುಪುತ್ತದೆ. ಇದಕ್ಕಾಗಿ ದುರ್ಗದಲ್ಲಿ ಎಲ್ಲ ರೀತಿಯ ವ್ಯವಸ್ಥೆಯನ್ನು ಮಾಡಲಾಗುತ್ತದೆ. ಪ್ರಧಾನಿ ಪರಶುರಾಮಪ್ಪ ಮತ್ತು ಭರಮಣ್ಣ ನಾಯಕರ ಮಧ್ಯೆ ಈ ಕುರಿತು ಸಮಾಲೋಚನೆ ನಡೆಯುತ್ತದೆ. ಬಂದ ಕಾರಣವೇನಿರಬಹುದೆಂಬ ಕುರಿತಾಗಿ ಆಲೋಚಿಸುತ್ತಾರೆ. "ಇಷ್ಟು ವರ್ಷ ದುರ್ಗದಲ್ಲಿ ಒಳಜಗಳಗಳು ನಡೆದುದು, ಈಗ ಹೊಸ ಮನೆತನ ಪಟ್ಟಕ್ಕೆ ಬಂದಿರುವುದು. ಈ ಸಂಧಿಕಾಲದಲ್ಲಿ ಸ್ನೇಹದ ಮಾತನ್ನೋ ಅಥವಾ ಬೆದರಿಕೆಯ ಮಾತನ್ನೋ ಆಡಿದರೆ, ಸುಲಭವಾಗಿ ತಮ್ಮ ಅಧಿಕಾರವನ್ನು ಸ್ಥಾಪಿಸಬಹುದು ಎಂಬ ಚಪಲ ಸೀರ್ಯದವರಿಗೆ ಇದ್ದರೂ ಇರಬಹುದು.' ಎಂದು ಪರಶುರಾಮಪ್ಪನವರು ಪರಿಸ್ಥಿತಿ ವಿವರಿಸಿ ಹೇಳಿದರು."[೭೧] ಮುಂದೆ ದುರ್ಗದ ಅರಮನೆಯಲ್ಲಿ ಮಂತ್ರಾಲೋಚನೆಯ ಗೃಹದ ಓಲಗದಲ್ಲಿ ನಾಯಕರು ಸೀರ್ಯದ ವಕೀಲರ ಮುಖ್ಯಸ್ಥನಾದ ಜುಲ್‌ಫಿಕಾರಖಾನ್‌ನನ್ನು ಭೇಟಿಮಾಡುತ್ತಾರೆ. ಈ ಸಂದರ್ಭದಲ್ಲಿ ಖಾಸಿಂಖಾನನು ಕಳುಹಿಸಿಕೊಟ್ಟ ಪತ್ರದ ಸಾರಾಂಶವನ್ನು ಮುನ್‌ಷಿಯು ಓದಿ ಹೇಳುತ್ತಾನೆ. "ಚಿತ್ರದುರ್ಗದಿಂದ

ಬರಬೇಕಾದ ಕಪ್ಪಕಾಣಿಕೆ ಬಹುವರ್ಷಗಳಿಂದ ಬಾಕಿಯಾಗಿ ನಿಂತಿದೆ, ಇದರಿಂದ ಅಲಂಗಿರ್ ಬಾದಷಹನ ಮನಸ್ಸು ಪ್ರಕ್ಷುಬ್ಧವಾಗಿದೆ. ಆದಷ್ಟು ಬೇಗ ಕಪ್ಪಕಾಣಿಕೆಯ ಬಾಕಿಯನ್ನು ತೀರಿಸಿ, ಸೇನೆಗೆ ಕಳಿಸಬೇಕಾದ, ಆಳು, ಕುದುರೆ, ಹುಲ್ಲು, ಹುರುಳಿ ಮೊದಲಾದ ಸಾಮಗ್ರಿಗಳನ್ನು ಕಳಿಸಿಕೊಟ್ಟು ಸ್ನೇಹವನ್ನು ಕಾಪಾಡಿಕೊಳ್ಳುವುದು, ಎಂದು ದೆಹಲಿ ದರಬಾರಿನಿಂದ ಆದ ಆಜ್ಞೆಯನ್ನು ಈ ಮೂಲಕ ತಿಳಿಯಪಡಿಸಲಾಗಿದೆ. ದರಬಾರಿನ ಹುಕುಮನ್ನು ಕೂಡಲೇ ಅಮಲಿಗೆ ತರತಕ್ಕದ್ದು"[೮೨] ಎಂಬ ಪತ್ರದ ಒಕ್ಕಣಿಯನ್ನು ಕೇಳಿದಾಗ ನಾಯಕರ ಕಣ್ಣುಗಳು ಕೆಂಪಾದವು. ಈ ಪತ್ರದ ಸುದ್ದಿಸಾರವನ್ನು ಕುರಿತು ನಾಯಕರು ದುರ್ಗದ ಹಿರಿಯರೆಲ್ಲರೊಂದಿಗೆ ಪರ್ಯಾಲೋಚಿಸಲು ಮುಂದಾಗುತ್ತಾರೆ. ಶ್ರೀ ಮುರುಘರಾಜೇಂದ್ರ ಸ್ವಾಮಿಗಳ ಚಿತ್ತದಂತೆ ನಡೆಯಲಿ ಎಂದು ಎಲ್ಲರೂ ಅಂದುಕೊಳ್ಳುತ್ತಾರೆ. ಈ ನಿರ್ಧಾರದಿಂದ ಖಾಸಿಂಖಾನ ಆಶಯದಂತೆ ದುರ್ಗವನ್ನು ತಮ್ಮ ಹಿಡಿತದಲ್ಲಿರಿಸಿಕೊಳ್ಳಬೇಕೆಂಬ ಸೀರ್ಯಾದ ನಾಯಕ ಜುಲ್‌ಫಿಕಾರ್‌ಖಾನನ ಕನಸು ಭಗ್ನವಾಗುತ್ತದೆ. ದಿವಾನ್ ಸಾಹೇಬರ ಪತ್ರಕ್ಕೆ ಪ್ರತಿಕ್ರಿಯೆಯೆಂಬಂತೆ ಭರಮಣ್ಣ ನಾಯಕನು ಮರು ಪತ್ರವೊಂದನ್ನು ದಿವಾನರ ವಕೀಲ ನಾಯಕ ಜುಲ್‌ಫಿಕಾರ್‌ಖಾನನಿಗೆ ಒಪ್ಪಿಸುತ್ತಾನೆ. ಆಗ ಪರಶುರಾಮಪ್ಪನವರು ಆ ಪತ್ರವನ್ನು ಒಪ್ಪಿಸುತ್ತಾ, "ಇದು ದಿವಾನ್‌ಸಾಹೇಬರಿಗೆ, ಮಹಾ ಪ್ರಭುಗಳ ಉತ್ತರ, ತೆಗೆದುಕೊಳ್ಳಬೇಕು. ಹಾಗೇ ಈ 'ಕರ್ನಾಟಕದ ಬಾಕು.' ಇದು ದಿವಾನ್‌ಸಾಹೇಬರಿಗೆ ಸನ್ನಿಧಾನದದ ಖಾಸಾ ಉಡುಗೊರೆ. ನಮ್ಮ ಪರವಾಗಿ ದಿವಾನ್‌ಸಾಹೇಬರಿಗೆ ಒಪ್ಪಿಸಬೇಕು. ಆ ಸಂದರ್ಭದಲ್ಲಿ ಒಂದು ಮಾತು ಹೇಳಬೇಕು' ಎಂದರು. "ಏನು ಅಪ್ಪಣೆಯಾಗಲಿ" 'ಈ ಬಾಕು ದುರ್ಗದಲ್ಲಿಯೇ ತಯಾರಾದುದು. ಇದು ಬಹು ಹರಿತವಾದದ್ದು ಎಚ್ಚರಿಕೆಯಿಂದ ಉಪಯೋಗಿಸಿದಲ್ಲಿ, ಅಗತ್ಯ ಬಿದ್ದಾಗ ಪ್ರಾಣ ಸಂರಕ್ಷಣೆ ಮಾಡುತ್ತದೆ ಎಂದು ನಾವು ತಿಳಿಸಿದ್ದೇವೆ ಎಂದೂ ನಮ್ಮ ಪರವಾಗಿ ದಿವಾನ್‌ಸಾಹೇಬರಲ್ಲಿ ಅರಿಕೆ ಮಾಡಿಕೊಳ್ಳಬೇಕು"[೮೩] ಎಂದು ಹೇಳಿದಾಗ, ಜುಲ್‌ಫಿಕಾರ್‌ಖಾನನು ತನಗರಿಯದಂತೆ ಬೆವರುಗೊಂಡಿದ್ದನು.

ಈ ನಡುವೆ ಫ್ರೆಂಚ್ ದೇಶದ ಜಾನ್‌ಡ್ಯೂವೋರೋ ದುರ್ಗಕ್ಕೆ ಭೇಟಿಯಿಡುತ್ತಾನೆ. ದುರ್ಗದ ಅದರಾತಿಥ್ಯವನ್ನು ಸ್ವೀಕರಿಸುವ ಈತನು ಕೋಟೆ ಕೊತ್ತಲೆಗಳನ್ನು ವೀಕ್ಷಿಸುತ್ತಾನೆ. ಇವನ ಸಹಕಾರದಿಂದಲೇ ಭರಮಣ್ಣ ನಾಯಕನು ದುರ್ಗದ ಕೋಟೆಕೊತ್ತಲೆಗಳನ್ನು ಬಲಪಡಿಸುವ ಕಾರ್ಯವನ್ನು ಮಾಡುತ್ತಾನೆ. ಇದೇ ಸಮಯದಲ್ಲಿ ದಿವಾನ್ ಖಾಸಿಂಖಾನನು ಬಿಜಾಪುರದಿಂದ ಸೀರ್ಯಕ್ಕೆ ಬಂದಿದ್ದ ಸಂಗೀತ ಗಾಯಕಿ ಮೆಹರ್‌ಬಾನುವನ್ನು ತನ್ನ ವಕೀಲ ಜುಲ್‌ಫಿಕಾರಖಾನನೊಂದಿಗೆ ದುರ್ಗಕ್ಕೆ ಕಳುಹಿಸಿಕೊಡುತ್ತಾನೆ. ಮೆಹರ್ ಬಾನುವಿಗೆ ದುರ್ಗದ ನಾಯಕರು ಮನಸೋಲುತ್ತಾರೆ. ಆ ಮೂಲಕ ದುರ್ಗದ ರಾಜಕೀಯ ವ್ಯವಸ್ಥೆಯಲ್ಲಿ ತಲ್ಲಣಗಳನ್ನು ಸೃಷ್ಟಿಸಬಹುದೆಂಬ ಹಂಚಿಕೆ ಖಾಸಿಂಖಾನನದ್ದಾಗಿರುತ್ತದೆ. ಅದಕ್ಕನುಗುಣವಾಗಿ ದುರ್ಗದ ಅರಮನೆಯ ನೃತ್ಯಶಾಲೆಯಲ್ಲಿ ಮೆಹರ್‌ಬಾನುವಿನ ಸಂಗೀತ ಕಛೇರಿಗಳು ಜರುಗುತ್ತವೆ.

ನಂತರ ಮೆಹರ್‌ಬಾನುವಿನೊಂದಿಗೆ ಭರಮಣ್ಣ ನಾಯಕ ಮತ್ತು ಸಿದ್ದವ್ವ ನಾಗತಿಯರ ಭೇಟಿಯು ಅಂತಃಪುರದಲ್ಲಿ ನಡೆಯುತ್ತದೆ. ಈ ಸಂದರ್ಭದಲ್ಲಿ ಧರ್ಮ-ಅಧರ್ಮಗಳ ನಡುವಿನ ಚರ್ಚೆಯೂ ಸಾಗುತ್ತದೆ. 'ಸಕಲ ಧರ್ಮಗಳು ಸತ್ಯ ದರ್ಶನದ ಅಡಿಪಾಯದಲ್ಲೇ ನಿರ್ಮಿತವಾಗಿವೆ' ಎಂದು ಮೆಹರ್‌ಬಾನು ಹೇಳುತ್ತಾಳೆ. ಇಂತಹ ಪ್ರಸಂಗಗಳಲ್ಲಿ ತ.ರಾ.ಸು. ಅವರು ಧಾರ್ಮಿಕ ಸಹಿಷ್ಣುತೆಯ ಮಹತ್ವವನ್ನು ಎತ್ತಿಹಿಡಿಯುವ ಪ್ರಯತ್ನ ಮಾಡುತ್ತಾರೆ. ಈ ಹಿನ್ನಲೆಯಲ್ಲಿ ಅವರು ಮೆಹರ್‌ಬಾನುವಿನಿಂದ ಹೇಳಿಸುವ ಮಾತುಗಳು ಗಮನಾರ್ಹವಾಗಿವೆ. ಉದಾಹರಣೆಗಾಗಿ, "ಹಿರಣ್ಮಯೇಣ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ, ತತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ' ಎಂದು ಆ ದಿವ್ಯ ಉಪನಿಷತ್ತಿನ ಋಷಿ ಬೇಡಿದ್ದಾನೆ...... 'ಹೇ ಪೂಷನ್, ಜ್ಯೋತಿರ್ಮಯವಾದ ಬಂಗಾರದ ಮುಚ್ಚಳದಿಂದ ಸತ್ಯದ ಮುಖವು ಮುಚ್ಚಲ್ಪಟ್ಟಿವೆ. ಸತ್ಯ ಧರ್ಮವಾದ ನನಗೆ ಆ ಸತ್ಯವು ಗೋಚರಿಸುವಂತೆ, ಆ ಮುಚ್ಚಳವನ್ನು ತೆಗೆದು ಹಾಕು' ಎಂದು ಕೋರಿದ್ದಾನೆ. ಆ ಕೋರಿಕೆಯೇ ಎಲ್ಲ ಧರ್ಮದ ತಳಹಸಿ ತಾನು ಹಿಡಿದ ದಾರಿಯೇ ಹಿರಿದೆಂಬ ಭ್ರಾಂತಿಯೇ, ಅನಂತ ಸತ್ಯವನ್ನು ಕವಿದಿರುವ ಮಮಕಾರದ ಹೊನ್ನತಳಿಗೆ, ಅದನ್ನು ಅರಿತುಕೊಳ್ಳದ ಯಾರಿಗೂ, ಸಕಲ ಧರ್ಮಗಳ ಹೃದಯಾಂತಸ್ಥವಾದ ನಿತ್ಯಸತ್ಯದ ದರ್ಶನವಾಗದು."[೮೪] ಎಂಬಂತಹ ಮಾತುಗಳು ಗಮನಾರ್ಹ ಇಂತಹ ಮಾತುಗಳಿಂದ ಪ್ರಭು ಮತ್ತು ದೇವಿಯು ಸಮ್ಮೋಹಕ್ಕೆ ಒಳಗಾಗುತ್ತಾರೆ.

ಗೂಢಚಾರಿಣಿಯಂತೆ ಕಾರ್ಯ ನಿರ್ವಹಿಸಬೇಕೆಂಬ ಖಾಸಿಂಖಾನನ ಬೇಡಿಕೆಯನ್ನು ಮೆಹರ್‌ಬಾನು ನಿರಾಕರಿಸುತ್ತಾಳೆ. ಇದು ತನ್ನ ಕಲಾಧರ್ಮಕ್ಕೆ ಅಪಚಾರವೆಂದು ಭಾವಿಸುತ್ತಾಳೆ. ಫ್ರೆಂಚ್‌ನ ಜಾಣ್‌ನನ್ನು ಪ್ರೇಮಿಸುತ್ತಾಳೆ. ದಿವಾನ್ ಖಾಸಿಂಖಾನ ದುರ್ಗದ ನಾಯಕರ ಮಧ್ಯೆ ಸ್ನೇಹದಕೊಂಡೆಯಂತೆ ಕಾಣುತ್ತಾಳೆ. ಈ ನಡುವೆ ದಿವಾನ್ ಖಾಸಿಂಖಾನನಿಂದ ಪತ್ರವೊಂದು ದುರ್ಗಕ್ಕೆ ಬರುತ್ತದೆ. ಇದು ಖಾಸಿಂಖಾನನು ದುರ್ಗದ ನಾಯಕರ ಸ್ನೇಹಹಸ್ತವನ್ನು ಬಯಸಿ ಬರೆದ ಪತ್ರವಾಗಿರುತ್ತದೆ. "ಪ್ರಕೃತ ಈ ಕಾಗದವನ್ನು ಬರೆದ ಅಭಿಪ್ರಾಯವೇನೆಂದರೆ: ನಮ್ಮ ಪರಿಗಣಿಗೆ ಸೇರಿದ ಸೀಮೆಯಲ್ಲಿ ಮರಾಟಾ ಸರದಾರರು ಹಾವಳಿ ಮಾಡುತ್ತಿರುವ ವಿಷಯ ತಮಗೂ ತಿಳಿದುಬಂದಿರಬಹುದು. ನಮ್ಮ ಆಶ್ರಿತರಾದ ರಾಯದುರ್ಗದ ನಾಯಕರು, ಆ ಮರಾಟಾ ಸರದಾರೊಂದಿಗೆ ಪಿತೂರಿ ಮಾಡಿ, ನಮ್ಮ ಅಧಿಕಾರವನ್ನು ಬುಡಮೇಲು ಮಾಡಲು ಒಳಸಂಚು ನಡೆಸುತ್ತಿರುವರೆಂದೂ, ಅವರ ಒತ್ತಾಸೆಯಿಂದ ಮರಾಟಾ ಸರದಾರ ಸಂತೋಜಿಘೋರ್ಪಡೆಯು, ನಮ್ಮ ಅಧಿಕಾರಕ್ಕೆ, ಒಳಪಟ್ಟು ನಾಯಕನ ಹಟ್ಟಿ ಪ್ರಾಂತ್ಯದ ಮೇಲೆ ದಾಳಿ ಮಾಡಲಿರುವನೆಂದೂ ನಮಗೆ ವಿಶ್ವಾಸನೀಯವಾಗಿ ತಿಳಿದು ಬಂದಿದೆ....... ಈ ಲಡಾಯಿ ಸಂದರ್ಭದಲ್ಲಿ ನಮಗೆ ತಮ್ಮ ನೆರವು ಅತ್ಯಗತ್ಯವಾಗಿ ಬೇಕಾಗಿದೆ ಇಂಥ ಸಮಯದಲ್ಲಿ ನಮ್ಮ ಆಪ್ತ ಮಿತ್ರರಾದ ತಾವು

ನಮಗೆ, ತಮ್ಮ ಸೇನಾಬಲದೊಡನೆ 'ಮದತ್' ಮಾಡುತ್ತೀರೆಂದು ನಂಬಿದ್ದೇನೆ"[೮೫] ಈ ಕಾರಣಕ್ಕಾಗಿ ಖಾಸಿಂಖಾನರ ಪರವಾಗಿ ಯುದ್ಧ ಮಾಡಲು ದುರ್ಗದ ನಾಯಕರು ಮುಂದಾಗುತ್ತಾರೆ. ದಳವಾಯಿ ಭರಮಣ್ಣ ಹಾಗೂ ಖಾನ್ ಮುಂತಾದವರ ಯುದ್ಧ ತಂತ್ರದಿಂದ, ಸಾಹಸಮಯ ಹೋರಾಟದಿಂದ ದುರ್ಗಕ್ಕೆ ಜಯವಾಗುತ್ತದೆ. ಇದುವೇ ದುರ್ಗದ ಜಯ ಪತಾಕೆ. ಜೊತೆಗೆ 'ವಿಜಯೋತ್ಸವ'ವೂ ಆಗಿ ಕಾಣುತ್ತದೆ.

**ರಾಜ್ಯದಾಹ:**

ಚಿತ್ರದುರ್ಗದ ಇತಿಹಾಸಕ್ಕೆ ಸಂಬಂಧಿಸಿದಂತೆ ಕಂಬನಿಯ ಕುಯಿಲು, ರಕ್ತರಾತ್ರಿ, ತಿರುಗುಬಾಣ, ಹೊಸಹಗಲು ಹಾಗೂ ವಿಜಯೋತ್ಸವದಂತಹ ಸರಣಿ ಕಾದಂಬರಿಗಳನ್ನು ರಚಿಸಿದ ತ.ರಾ.ಸು.ಅವರು ಈ ಎಲ್ಲ ಕಾದಂಬರಿಗಳ ಹಿನ್ನೆಲೆಯಲ್ಲಿ 'ರಾಜ್ಯದಾಹ' ಎಂಬ ಕಾದಂಬರಿಯನ್ನು ರಚಿಸಿದ್ದಾರೆ. ಇದಕ್ಕೆ ನಿರ್ದಿಷ್ಟ ಐತಿಹಾಸಿಕ ವಸ್ತುವಿಲ್ಲ. ಇದು ಕಾದಂಬರಿಕಾರರ ಕಾಲ್ಪನಿಕ ಚಿತ್ರಣಕ್ಕೆ ಸಂಬಂಧಿಸಿದುದ್ದಾಗಿದೆ. ದುರ್ಗದ ಇತಿಹಾಸದ ಪಾತ್ರಗಳನ್ನು ಆಕರವಾಗಿರಿಸಿಕೊಂಡು ತಮ್ಮದೇ ಆದ ಕಾಲ್ಪನಿಕ ವಿವರದೊಂದಿಗೆ ತ.ರಾ.ಸು. ಅವರು ಈ ಕಾದಂಬರಿಯನ್ನು ಹೆಣೆದಿದ್ದಾರೆ. ಹೆಚ್ಚೆಂದರೆ ಚಿತ್ರದುರ್ಗವನ್ನು ಆಳಿದು ಚಿಕ್ಕಣ್ಣನಾಯಕರ ಜೀವನಕ್ಕೆ ಸಂಬಂಧಿಸಿದ ವಿವರಗಳು ಕಾಣಸಿಗುತ್ತವೆ. ೨೦೦೧ರಲ್ಲಿ ಇದು ಪ್ರಕಟಗೊಂಡಿತು.

'ಇದ್ದಕ್ಕಿದ್ದಂತೆಯೇ ಸಿಡಿಲು ಬಡಿದ ಮಸಣದಂತಾಗಿತ್ತು ಚಿತ್ರದುರ್ಗ'! ಎಂಬ ಭಾವಸೂಚಕದೊಂದಿಗೆ ಕಾದಂಬರಿ ಆರಂಭವಾಗುತ್ತದೆ. ಕಾದಂಬರಿಕಾರರ ಈ ಮಾತು ದುರ್ಗಕ್ಕೆ ಬಂದೊದಗಿದ ದುಸ್ಥಿತಿಯನ್ನು ತಿಳಿಸುವಂತದ್ದಾಗಿದೆ. ಶತಶತಮಾನದ ಇತಿಹಾಸದಲ್ಲಿ ಚಿತ್ರದುರ್ಗ ಪಟ್ಟಾಭಿಷಿಕ್ತ ದೊರೆಯ ಕೊಲೆ ಹಿಂದೆಂದೂ ನಡೆದಿರಲಿಲ್ಲ. ಆದರಿಂದು ನಡೆದು ರಕ್ತಪಾತವಾಗಿದೆ. ಅಂದರೆ ಓಬಣ್ಣನಾಯಕರ ಕಗ್ಗೊಲೆ ನಡೆದಾಗ ಅಲ್ಲಿ ಹೇಗಿರಬಹುದೆಂಬ ಕಾದಂಬರಿಕಾರರ ಕಲ್ಪನೆ ಇಲ್ಲಿ ಅಗಾಧವಾಗಿದೆ. "ತುಂಬಿದ ಓಲಗದಲ್ಲಿ ದೊರೆಯ ಕೊಲೆ! ಎಂತೆಂತಹ, ಘೋರಗಳನ್ನೋ ಕಂಡು, ಘೋರಕ್ಕೆ, ರಕ್ತಕ್ಕೆ, ಮರಗಟ್ಟಿ ಹೋದ ಚಿತ್ರದುರ್ಗದ ಮೈಯೂ, ಓಬಣ್ಣನಾಯಕರ ಕೊಲೆಯ ಘೋರ ವಾರ್ತೆಯನ್ನು ಕೇಳಿ, ಗದಗುಟ್ಟಿ ನಡುಗಿ, ಭಯವಿಸ್ಮಯದಲ್ಲಿ ಮೂಕವಾಯಿತು. ಆ ಸುದ್ಧಿಯನ್ನು ಕೇಳಿದ ಓಬವ್ವನಾಗತಿಯರು ಗೋಪಾಲಸ್ವಾಮಿಯ ಹೊಂಡದಲ್ಲಿ ಬಿದ್ದು ಪ್ರಾಣ ಕಳೆದುಕೊಂಡರಂತೆ. ಈ ಗದ್ದಲದಲ್ಲಿಯೇ ಭುವನಪ್ಪನವರು ನೂರಾರು ಜನರ ಕಾಲ ತುಳಿತಕ್ಕೆ ಸಿಕ್ಕು ಬೀದಿಯ ಹೆಣವಾದರಂತೆ"[೮೬] ಎಂಬಂತೆ ತ.ರಾ.ಸು ಅವರು ಕಾದಂಬರಿಯ ವಸ್ತುವನ್ನು ರೋಚಕತೆಯೊಂದಿಗೆ, ಕುತೂಹಲ ಕೆರಳಿಸುತ್ತ, ವಿಸ್ತರಿಸುತ್ತ ಹೋಗುತ್ತಾರೆ. "ಇಂತಹ ಘಟನೆ ನಡೆದಾಗ ಜನ ಏನು ಮಾತನಾಡುತ್ತಾರೆ ರಾಜ್ಯದಲ್ಲಿ ಉಂಟಾದ ತುರ್ತುಪರಿಸ್ಥಿತಿಯ

ವಾತಾವರಣ, ನಾಯಕರ ಪತ್ನಿಯ ಆತ್ಮಹತ್ಯೆ, ಜನತೆಯಲ್ಲುಂಟಾದ ಹಾಹಾಕಾರ, ಪರಿಸ್ಥಿತಿಯ ದುರ್ಲಾಭಪಡೆವ ಜನತೆ, ರಾಜ ನಿಷ್ಠರಿಗಾದ ತೊಂದರೆಗಳು ಒಂದು ರಾಜ್ಯದಲ್ಲಿ ಆಡಳಿತದ ವಿರುದ್ಧ ದಂಗೆ ಉಂಟಾದಾಗ ಹೇಗೆಲ್ಲಾ ಬದಲಾವಣೆಗಳಾಗುತ್ತವೆ ಎಂಬುದನ್ನು ತೋರಿಸುತ್ತದೆ, ವಿವರಿಸುತ್ತದೆ."[೮೭] ಎಂಬ ಮುರಲಿಕೃಷ್ಣ ಬೆಳಾಲು ಅವರ ಮಾತೂ ಒಪ್ಪತಕ್ಕದ್ದಾಗಿದೆ.

ಇಲ್ಲಿ ರಾಜ್ಯದಾಹವೆನ್ನುವುದು ದಳವಾಯಿ ಮುದ್ದಣ್ಣನ ತಂತ್ರಗಾರಿಕೆಯ ಅನ್ವರ್ಥಕದಂತೆ ಕಂಡಿದೆ. ಓಬಣ್ಣ ನಾಯಕರ ಕೊಲೆಯ ನಂತರ ಎಲ್ಲಡೆ ಭೀತಿ ತುಂಬಿಕೊಂಡಾಗ ದಳವಾಯಿ ಮುದ್ದಣ್ಣನು ತನ್ನ ಮನೆಯಲ್ಲಿ ಆಪ್ತರ ಮಂತ್ರಾಲೋಚನಾ ಸಭೆಯನ್ನು ಕರೆಯುತ್ತಾನೆ. ನೆರೆದ ಸಭಿಕರ ಮುಂದೆ ಅವನಾಡುವ ಮಾತುಗಳನ್ನು ನೋಡಿ, "ಮತ್ತಿನ್ನೇನು ಚಿಕ್ಕಣ್ಣ ನಾಯಕರ ಪಟ್ಟಾಭಿಷೇಕ, ದುರ್ಗದ ರಾಜ್ಯದಲ್ಲಿ ನಮ್ಮ ಸರ್ವಾಧಿಕಾರ, ಇನ್ನು ಇದೆರಡಕ್ಕೆ ಅಡ್ಡಿಯಾದವರು ಯಾರೂ ಉಳಿಯಲಾರರು. ಇದು ನಮ್ಮ ನಿರ್ಧಾರ. ಈ ಮಾತು ಎಲ್ಲರಿಗೂ ಮನವರಿಕೆಯಾಗುವಂತೆ ನೀವು ನಡೆದುಕೊಳ್ಳಬೇಕು' ಖಚಿತ ನಿರ್ಧಾರಕ್ಕೆ ಬಂದು ಹೇಳಿದ ಮುದ್ದಣ್ಣ"[೮೮] ಈ ರೀತಿಯ ಮಾತುಗಳಲ್ಲಿ ಮುದ್ದಣ್ಣನ ಸರ್ವಾಧಿಕಾರ ಧೋರಣೆ ಎದ್ದುಕಾಣುತ್ತದೆ.

೧೫೭ನೇ ರಾಕ್ಷಸ ಸಂವತ್ಸರ ಜೇಷ್ಠ ಬಹುಳ ಬಿದಿಗೆ ಸೋಮವಾರ ಇನ್ನು ನಾಲ್ಕುದಿನ ಇರುವಾಗಲೇ ಚಿಕ್ಕಣ್ಣ ನಾಯಕನನ್ನು ಪಟ್ಟಕ್ಕೆ ತರಲಾಗುತ್ತದೆ. ಇವನನ್ನು ಪಟ್ಟಕ್ಕೆ ತರುವಲ್ಲಿ ಮುದ್ದಣ್ಣನ ಪಾತ್ರ ಪ್ರಮುಖವಾದುದು. ಯಾಕೆಂದರೆ ಇವನನ್ನು ತನ್ನ ಕೈಗೊಂಬೆಯನ್ನಾಗಿ ಮಾಡಿಕೊಂಡು ತನ್ನ ಸರ್ವಾಧಿಕಾರತ್ವವನ್ನು ಮೆರೆಯುವುದು ಇದರ ಹಿಂದಿನ ಉದ್ದೇಶವಾಗಿರುತ್ತದೆ. ಈ ಕುರಿತಾಗಿ ದುರ್ಗದ ನಿಷ್ಠರಾದ ಪರಶುರಾಮಪ್ಪ ಮತ್ತು ಭರಮಣ್ಣರು ಚಿಕ್ಕಣ್ಣ ನಾಯಕನನ್ನು ಕಂಡು ತಿಳಿಹೇಳುವ ಪ್ರಯತ್ನ ಮಾಡಿದರೂ ಪ್ರಯೋಜನವಾಗುವುದಿಲ್ಲ. ಚಿಕ್ಕಣ್ಣ ನಾಯಕನು ಮುದ್ದಣ್ಣನನ್ನು ಬಿಟ್ಟರೆ ಬೇರೆಯವರನ್ನು ನಂಬುವ ಸ್ಥಿತಿಯಲ್ಲಿರುವುದಿಲ್ಲ. ಇತ್ತ ಲಿಂಗಣ್ಣ ನಾಯಕನು ಓಬವ್ವ ನಾಗತಿಯ ಸಾವಿನಿಂದಾಗಿ ಮಾನಸಿಕ ಆಘಾತಕ್ಕೆ ತುತ್ತಾಗುತ್ತಾನೆ. ಈ ದೆಸೆಯಿಂದ ರಾಜಕಾರಣದಿಂದ ನಿರ್ಲಿಪ್ತವಾಗಿ ಉಳಿಯುತ್ತಾನೆ. ಈ ಎಲ್ಲ ಕಾರಣಗಳಿಂದಾಗಿ ದುರ್ಗದ ಮೇಲೆ ಅಭಿಮಾನವಿರಿಸಿದ ಜನತೆಗೆ ಬೇಸರವಾಗುತ್ತದೆ. ಈ ನಡುವೆ ಚಿಕ್ಕಣ್ಣ ನಾಯಕನು ಮದಿರೆ, ಮಾನಿನಿಯರ ಹುಚ್ಚು ಹಿಡಿದು, ಅದರಲ್ಲಿಯೇ ತೇಲಾಡುವಂತಾಗುತ್ತದೆ. ಮುದ್ದಣ್ಣನು ಈ ದೊರೆಯನ್ನು ತನ್ನ ಕಪಿಮುಷ್ಠಿಯಲ್ಲಿರಿಸಿಕೊಂಡು ತನ್ನ ಕ್ರೌರ್ಯವನ್ನು ಮೆರೆಯುತ್ತಾನೆ. ರಾಜ್ಯ ನಿಷ್ಠ ಅಧಿಕಾರಿವರ್ಗ ಅಸಹಾಯಕತೆಯನ್ನು ಬಿಂಬಿಸುತ್ತದೆ. ಇಂತಹ ಸನ್ನಿವೇಶಗಳ ಮೂಲಕ ತ.ರಾ.ಸು. ಅವರು ಅಂದಿನ ರಾಜಕಾರಣದ ಕುತಂತ್ರಗಳನ್ನೂ ತಿಳಿಸಿದರೂ ಆ ಕುತಂತ್ರವೂ ಇಂದಿನ ರಾಜಕೀಯದಲ್ಲೂ ಇರುವುದು ಸ್ಪಷ್ಟವಾಗಿ ಗೋಚರಿಸುತ್ತದೆ.

"ಅಂದು ರಾಜಮಹಾರಾಜರ ಕಾಲದಲ್ಲಿ ಏನು ಮಾಡುತ್ತಿದ್ದರೂ ಅದು ಇಂದಿನ ರಾಜಕೀಯ ನಾಯಕರು ಮಾಡುತ್ತಿರುವುದನ್ನು ಕಾಣಬಹುದು. ಸಜ್ಜನರು ಕಂಡೂ ಕಾಣದಂತೆ ಬದುಕಬೇಕಾದ ಅಸಹಾಯಕ ಸ್ಥಿತಿ ಪರಿಸ್ಥಿತಿಯನ್ನು ತಮಗೆ ಬೇಕಾದಂತೆ ದುಡಿಸಿಕೊಂಡು, ತಮಗೆ ಬೇಕಾದಂತೆ ಬಣ್ಣ ಬದಲಾಯಿಸುವ ನಾಯಕರ, ನಕಲಿತನದ ಅಸಲಿ ಪೋಷಾಕು ಹೇಗಿರುತ್ತದೆ ಎಂಬುದನ್ನು 'ರಾಜ್ಯದಾಹ' ಕಾದಂಬರಿ ತಿಳಿಸಿಕೊಡುತ್ತದೆ."[೮] ಎಂಬುದು ಸತ್ಯವಾಗಿದೆ. ಇಲ್ಲಿ ಮುದ್ದಣ್ಣನ 'ರಾಜ್ಯದಾಹ' ಎಷ್ಟಿತ್ತೆಂದರೆ, "ಚಿತ್ರದುರ್ಗದ ರಾಜ್ಯ ನಾನು ಬಯಸಿದ ಹೆಣ್ಣು, ಇದು ನನ್ನದಾಗಬೇಕು. ಯಾರೊಂದಿಗೂ ಇದನ್ನು ಹಂಚಿ ಉಣ್ಣುವ ಯೋಚನೆ ನನಗಿಲ್ಲ. ಈ ಮಾತು ನೆನಪಿರಲಿ. ಇದೇ ಕೊನೆಯ ಬಾರಿ, ನಿನಗೂ ಹೇಳುತ್ತೇನ. ಈ ದುರ್ಗ ನನ್ನದಾಗಿರುವವರೆಗೂ, ಇದರ ಗಡಿಯ ಅಂಗುಲ ಭೂಮಿಯನ್ನು ಕಂಡವರಿಗೆ ಒಪ್ಪಿಸುವುದಿಲ್ಲ. ನಾನು ಬದುಕಲಿ, ಸಾಯಲಿ ನನ್ ಮೈಯಲ್ಲಿ ಕೊನೆಯ ಉಸಿರು ಇರುವವರೆಗೂ ಈ ರಾಜ್ಯದ ಕೂದಲು ಕೊಂಕಲೂ ಅವಕಾಶ ಕೊಡುವುದಿಲ್ಲ. ನೆನಪಿರಲಿ ರಾಯಣ್ಣ. ಈ ನನ್ನ ಕೈಯನ್ನು ರಾಜರಕ್ತದಲ್ಲಿ ತೋಯಿಸಿರುವುದು, ಈ ರಾಜ್ಯದಲ್ಲಿ ನನ್ನ ಅಖಂಡ ಸರ್ವಾಧಿಕಾರವನ್ನು ಸ್ಥಾಪಿಸಲು : ಇದರ ಉತ್ತರ ಕ್ರಿಯೆ ಪುರೋಹಿತನಾಗಲಿಕ್ಕಲ್ಲ."[೯] ಎಂದು ನುಡಿಯುವ ಮುದ್ದಣ್ಣನು ರಾಜಶ್ರೀಯನ್ನು ತನ್ನವಳನ್ನಾಗಿಸಿಕೊಳ್ಳಲು ಏನು ಮಾಡಲು ಹೇಸುವುದಿಲ್ಲ ಎಂದು ಹೇಳುತ್ತಾನೆ.

ಚಿಕ್ಕಣ್ಣನಾಯಕನು ಪ್ರಭುವಾಗಿದ್ದರೂ ಜನರ ಹಿತರಕ್ಷಣೆ ಆತನ ಹೊಣೆಯಾಗಿದ್ದರೂ ಅದನ್ನು ಅರಿಯದೆ ಬರಿ ಹೆಣ್ಣ-ಹೊನ್ನು ಮದಿರೆಗಳಲ್ಲಿ ಕಾಲಹರಣ ಮಾಡುವುದು ರಾಜ್ಯದ ದುರಂತದಂತೆ ಕಾಣುತ್ತದೆ. ಈತನ ದುರಾಸೆಗಳನ್ನೇ ಬಂಡವಾಳವಾಗಿಸಿಕೊಂಡು ರಾಜ್ಯದ ಸರ್ವಾಧಿಕಾರ ನಡೆಸುವ ಮುದ್ದಣ್ಣನು ಒಬ್ಬ ಮನುಷ್ಯನ ಮನೋದೌರ್ಬಲ್ಯವನ್ನು ಹೇಗೆ ಉಪಯೋಗಿಸಿಕೊಳ್ಳಬಹುದೆಂಬುದಕ್ಕೆ ನಿದರ್ಶನವಾಗುತ್ತಾನೆ. ಕಾಲಾನಂತರ ಚಿಕ್ಕಣ್ಣ ನಾಯಕನಿಗೆ ಮುದ್ದಣ್ಣನ ಕ್ರೌರ್ಯದ ಅರಿವಾಗುತ್ತದೆ. ಈ ಒಂದು ಸತ್ಯವನ್ನು ಅರಿತಾಗ ಅವನಿಗೆ ವ್ಯಥೆಯಾಗುತ್ತದೆ. ಈ ವೇದನೆಯಲ್ಲೇ ಕೊರಗುತ್ತಾನೆ. ಇಂತಹ ವಿಷಮ ಪರಿಸ್ಥಿತಿಯಿಂದ ಹೊರಬರಲು ಚಡಪಡಿಸುತ್ತಾನೆ. ಹಾಗೆಯೇ ತನ್ನ ತಪ್ಪಿನಿಂದಾಗಿ ಈ ದುರ್ಗಕ್ಕೆ ಇಂತಹ ದುರ್ಗತಿ ಬಂದಿತೆಂದು ನೊಂದು ನೊಂದು ಸಾವನ್ನಪ್ಪುತ್ತಾನೆ. ಆದರೆ ದಳವಾಯಿ ಮುದ್ದಣ್ಣ ಕ್ರೂರತೆಯು ಎಗ್ಗಿಲ್ಲದೆ ಮುಂದುವರೆಯುತ್ತ ಅಷ್ಟೇಕೆ ಹರಪನಹಳ್ಳಿಯ ಪಾಳೆಗಾರರು ಮತ್ತು ಷಂಷೇರಖಾನನ ವಿರುದ್ಧ ಹೋರಾಡಿ ಮುದ್ದಣ್ಣನು ಸಾಧಿಸಿದ ಜಯವು ಜನಮೆಚ್ಚುಗೆಗೆ ಪಾತ್ರವಾಗುತ್ತದೆ. "ಅಧಿಕಾರ ದಾಹದಿಂದ ದುರ್ಗದ ಅರಸರ ನೆತ್ತಿಯನ್ನು ಕತ್ತರಿಸಿ, 'ಇವನು ಮನುಷ್ಯನಲ್ಲ ನರರಕ್ಷಸ' ಎಂಬ ಅಪಖ್ಯಾತಿಗೆ ಪಾತ್ರನಾಗಿದ್ದ ಮುದ್ದಣ್ಣ...... ಅವನ ಅಧಿಕಾರ ದಾಹ ಏನೇ ಇರಲಿ, ದುರ್ಗವನ್ನು ಎಂಥ ಶತ್ರುವಿನಿಂದಲೂ

ರಕ್ಷಿಸಬಲ್ಲ ಸಮರ್ಥನೀತ"[೯೧] ಎಂಬ ಸಮಾಧಾನವು ದುರ್ಗದ ಜನರಲ್ಲಿ ಕಂಡಿತ್ತು. ಇದು ಪರಿಸ್ಥಿತಿಯ ವಿಪರ್ಯಾಸದಂತೆ ತೋರುತ್ತದೆ.

ಅದೇನೆ ಇರಲಿ "ಚಿತ್ರದುರ್ಗದ ಇತಿಹಾಸದಲ್ಲಿ ಇದೊಂದು ಬದಲಾವಣೆಯ ಕಾಲಘಟ್ಟವೆಂದೇ ಹೇಳಬಹುದು. ಎಲ್ಲರೂ ಚರಿತ್ರೆಯನ್ನು ಚರಿತ್ರೆಯಾಗಿಯಷ್ಟೇ ಓದುತ್ತಾರೆ. ಆದರೆ ತ.ರಾ.ಸು. ಅವರು ಚರಿತ್ರೆಯನ್ನು ಕಾದಂಬರಿಯನ್ನಾಗಿಸಿ ಅದನ್ನು ವಿವಿಧ ಸ್ತರಗಳಿಗೆ ಕೊಂಡೊಯ್ದಿದ್ದಾರೆ. ಇದರಿಂದ 'ರಾಜ್ಯದಾಹ' ಕಾದಂಬರಿ ಸಾಹಿತ್ಯದ ಓದುಗರು ಮತ್ತು ಚರಿತ್ರೆಯ ಅಧ್ಯಯನಾರ್ಥಿಗಳಿಬ್ಬರೂ ಓದಿ ತಿಳಿದುಕೊಳ್ಳಬೇಕಾದ ಮಹತ್ವವನ್ನು ಪಡೆದುಕೊಳ್ಳುತ್ತದೆ"[೯೨] ಎಂಬ ಮುರಲಿಕೃಷ್ಣ ಬೆಳಾಲು ಅವರ ಮಾತು ಸತ್ಯಕ್ಕೆ ಹತ್ತಿರವಾಗಿದೆ.

**ಕಸ್ತೂರಿ ಕಂಕಣ:**

ತ.ರಾ.ಸು. ಅವರು ಬರೆದ ಚಿತ್ರದುರ್ಗದ ಸರಣಿ ಕಾದಂಬರಿಗಳಲ್ಲಿ 'ಕಸ್ತೂರಿ ಕಂಕಣ'ವು ಏಳನೆಯ ಕಾದಂಬರಿಯಾಗಿದೆ. ಆದರೆ ಇತಿಹಾಸದ ಅನುಕ್ರಮದಂತೆ ನೋಡಿದರೆ ಇದು ಮೊದಲನೆಯ ಕಾದಂಬರಿಯಾಗಿ ಕಾಣುತ್ತದೆ. ಆದ್ದರಿಂದ ಚಿತ್ರದುರ್ಗದ ಸರಣಿ ಕಾದಂಬರಿಗಳ ಪಟ್ಟಿಯಂತೆ ಈ ಕಾದಂಬರಿಯ ವಸ್ತುವಿಶ್ಲೇಷಣೆಯನ್ನು ಕೈಗೆತ್ತಿಕೊಳ್ಳಲಾಗಿದೆ. "ಚಿತ್ರದುರ್ಗದ ಇತಿಹಾಸದ ಆಧಾರದ ಮೇಲೆ ರಚಿತವಾದ ಉಳಿದ ಕಾದಂಬರಿಗಳಂತೆ ಇದಕ್ಕೂ ದಿವಂಗತ ಎಂ.ಎಸ್. ಪುಟ್ಟಣ್ಣನವರ 'ಚಿತ್ರದುರ್ಗದ ಪಾಳೆಯಗಾರರು' ಮತ್ತು ಚಿತ್ರದುರ್ಗದ ಪಾಳೆಯಗಾರರ ವಂಶಸ್ಥರ ಮನೆಯಲ್ಲಿರುವ, ಕೈಬರಹದ ವಂಶಚರಿತ್ರೆ ಆಧಾರ ಗ್ರಂಥಗಳಾಗಿವೆ"[೯೩] ಎಂದು ತ.ರಾ.ಸು. ಅವರು ಈ ಕಾದಂಬರಿಗಳ ಆಕರಗಳನ್ನು ಕುರಿತು ತಮ್ಮ ಮುನ್ನುಡಿಯಲ್ಲಿ ಸ್ಪಷ್ಟಪಡಿಸಿದ್ದಾರೆ. "ದುರ್ಗವನ್ನು ಆಳಿದ ಪಾಳೆಗಾರರ ಸಾಲಿನಲ್ಲಿ ಕಸ್ತೂರಿ ರಂಗಪ್ಪ ನಾಯಕನು ಮೂರನೆಯವನಾಗಿದ್ದಾನೆ. ಇವನಿಗೆ ಸರ್ಜೆರಾಯ, ಕುಮಾರಪ್ಪ ಹಾಗೂ ಮುಮ್ಮಡಿ ಮದಕರಿ ನಾಯಕ ಎಂಬ ಮೂವರು ಗಂಡು ಮಕ್ಕಳಿದ್ದರು. ಇವರ ಆಳ್ವಿಕೆಯ ಕಾಲದಲ್ಲಿ ನಡೆದ ಕೌಟುಂಬಿಕ ಹಾಗೂ ರಾಜಕೀಯ ಸಂಘರ್ಷವೇ ಈ ಕಾದಂಬರಿಯ ವಸ್ತು"[೯೪] ಎಂಬುದು ಸೂಕ್ತವಾದ ಮಾತಾಗಿದೆ. ಪೌರುಷವನ್ನೇ ಪ್ರಧಾನವಾಗಿಸಿಕೊಂಡ ದುರ್ಗದ ಕಥಾನಕವು ಇಲ್ಲಿ ಚಿತ್ರಣಗೊಂಡಿದೆ. ಇದು ಎರಡು ಭಾಗಗಳಲ್ಲಿ ಅನಾವರಣಗೊಂಡಿದೆ.

ಸೀರ್ಯದ ಪಾಳೆಯಗಾರನಾದ ರಂಗಪ್ಪನಾಯಕನು ದುರ್ಗದ ಕಸ್ತೂರಿ ರಂಗಪ್ಪನಾಯಕನಿಗೆ ಪತ್ರ ಬರೆಸುವುದರೊಂದಿಗೆ ಕಾದಂಬರಿ ಆರಂಭವಾಗುತ್ತದೆ. ಈ ಪತ್ರದಲ್ಲಿ ರಂಗಪ್ಪನಾಯಕನು ದುರ್ಗದ ನಾಯಕರೊಂದಿಗೆ ಮಿತ್ರತ್ವವನ್ನು ಬಯಸುತ್ತಾನಲ್ಲದೇ ಇನ್ನು ಒಂದು ಹೆಜ್ಜೆ ಮುಂದುವರೆದು ಕಸ್ತೂರಿ ರಂಗಪ್ಪನ ಮನೆತನದೊಂದಿಗೆ ವಿವಾಹ ಸಂಬಂಧ ಬೆಳೆಸಲು ಮುಂದಾಗುತ್ತಾನೆ. "ಸದ್ಯ ನಾವು ತಮಗೆ ಈ ಪತ್ರವನ್ನು ಬರೆಸುತ್ತಿರುವ

ಕಾರಣವಿಷ್ಟೆ ನಮ್ಮ ವಂಶದ ವಿಚಾರ, ಸಂಸ್ಥಾನದ ವಿಷಯ ತಮಗೂ ತಿಳಿದಿರಬಹುದು. ಪ್ರಕೃತ ನಮ್ಮ ಉದ್ದೇಶ, ಇದುವರೆಗೂ ಕೇವಲ ಮಿತ್ರತ್ವದ ಭಾವನೆಯಿಂದ ಬಂಧಿತವಾಗಿರುವ ನಮ್ಮೀಬ್ಬರ ವಂಶಗಳೂ, ವಿವಾಹದ ಶುಭಸೂತ್ರದಿಂದ ಒಂದಾಗಿ ಬೆಳೆಯಬೇಕೆಂಬುದೇ ಆಗಿದೆ. ಅಂದರೆ ತಮ್ಮ ಕುಮಾರ್ತಿಯರನ್ನು ನನ್ನ ಕುಮಾರ, ರಾಜಮಾನ್ಯ ರಾಜಶ್ರೀ, ಚಿರಂಜೀವಿ ಕೃಷ್ಣಪ್ಪ ನಾಯಕರಿಗೆ ತಂದುಕೊಳ್ಳುವ ಅಭಿಪ್ರಾಯವಿದೆ. ಈ ಅಭಿಪ್ರಾಯ ತಮಗೂ ಸಮ್ಮತವಾದಲ್ಲಿ, ಈ ಪತ್ರವನ್ನು ತಂದಿರುವ ನಮ್ಮ ವಕೀಲರೊಂದಿಗೆ, ತಮ್ಮ ಕುಮಾರ್ತಿಯವರ ಶುಭಜಾತಕವನ್ನು ಕಳಿಸಿಕೊಡಬೇಕಾಗಿ ಕೋರುತ್ತೇವೆ. ತಮ್ಮಿಂದ ಜಾತಕ ತಲುಪಿದ ಒಡನೆಯೇ ನಮ್ಮ ಕುಮಾರರ ಜಾತಕವನ್ನು ತಮ್ಮ ಅವಗಾಹನೆಗೆ ಕಳಿಸಿಕೊಡುತ್ತೇನೆ. ಮುಂದಿನದು ದೈವಚಿತ್ತ. 'ನಮ್ಮ ಈ ಅಭಿಪ್ರಾಯ, ವಿಶ್ವಾಸಭಾವನೆಗಳು ತಮಗೂ ಸಮ್ಮತವಾಗಿ, ನಮ್ಮೀರ್ವರ ವಂಶಗಳೂ ಪರಸ್ಪರಾಭಿವೃದ್ಧಿ ಯಶಸ್ಸುಗಳನ್ನು ಪಡೆಯಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ"[೫] ಎಂದು ಪತ್ರದ ಒಕ್ಕಣಿಕೆಯನ್ನು ಕಳಿಸಿರುತ್ತಾನೆ ರಂಗಪ್ಪನಾಯಕ. ಈ ಕುರಿತು ತನ್ನ ಆಸ್ಥಾನದ ಆಪ್ತರೊಂದಿಗೆ ಕಸ್ತೂರಿಗಂಗಪ್ಪನಾಯಕನು ಸುಧೀರ್ಘ ಸಮಾಲೋಚನೆ ನಡೆಸುತ್ತಾನೆ. ಇದಕ್ಕೆ ಸೀರ್ಯಾದವರಿಂದ ಬಂದ ಕಾಗದವು ಹುಟ್ಟುಹಾಕಿದ ಅನುಮಾನ ಮತ್ತು ಸಮಸ್ಯೆಯೇ ಕಾರಣವಾಗುತ್ತದೆ. ಕೊನೆಗೆ ಅದರ ಆಗುಹೋಗುಗಳ ಹಿನ್ನೆಲೆಯನ್ನು ಚರ್ಚಿಸಿದ ನಂತರ, ಪ್ರಧಾನಿ ವಿರೂಪಾಕ್ಷಪ್ಪನವರ ಮಾತಿನ ನಿರ್ಧಾರದೊಂದಿಗೆ ಸಮಾಲೋಚನಾ ಸಭೆ ಮುಗಿಯುತ್ತದೆ.

ಸಭೆಯ ನಿರ್ಧಾರದಂತೆ ಕಸ್ತೂರಿ ರಂಗಪ್ಪನಾಯಕರ ಒಬ್ಬಳೇ ಮಗಳು ಒಬವ್ವಳ ಜಾತಕವನ್ನು ಸೀರ್ಯಾದವರಿಗೆ ಕಳಿಸಿಕೊಡಲಾಗುತ್ತದೆ. ಅದಕ್ಕನುಗುಣವಾಗಿ ಸೀರ್ಯದಲ್ಲಿ ಜಾತಕಗಳ ಪರಿಶೀಲನೆಯು ನಡೆಯುತ್ತದೆ. ಆದರೆ ಜಾತಕಗಳು ಹೊಂದಾಣಿಕೆಯಾಗುವುದಿಲ್ಲ. ಆದಾಗ್ಯೂ ತರೀಕೆರೆಯ ಪಾಳೆಯಗಾರರ ವಕೀಲ ವೆಂಕಪ್ಪಯ್ಯನವರು ಈ ಜಾತಕಗಳು ಹೊಂದಲೇಬೇಕೆಂಬ ಹೆಬ್ಬಯಕೆಯನ್ನು ವ್ಯಕ್ತಪಡಿಸುತ್ತಾನೆ. ಕೃತಕಜಾತಕ ಬರೆಯಬೇಕೆಂದು ಯಜ್ಞನಾರಾಯಣ ಜೋಯಿಸರನ್ನು ಒತ್ತಾಯಿಸುತ್ತಾನೆ. ಆದರೆ ಜೋಯಿಸರು ಇದಕ್ಕೆ ಒಪ್ಪುವುದಿಲ್ಲ. ಈ ಕಾರಣಕ್ಕಾಗಿ ಯಜ್ಞನಾರಾಯಣ ಜೋಯಿಸರನ್ನು ತರೀಕೆರೆಗೆ ಕರೆದೊಯ್ದು ಸೆರೆಯಾಳನ್ನಾಗಿ ಮಾಡಲಾಗುತ್ತದೆ. ಇಷ್ಟಾದಾಗ್ಯೂ ತರೀಕೆರೆ ವಕೀಲನು ಕೃತಕ ಜಾತಕವನ್ನು ಬರೆಯಿಸಿ ದುರ್ಗಕ್ಕೆ ಕಳುಹಿಸಿಕೊಡುತ್ತಾನೆ. ಇದರಿಂದ ಅನುಮಾನಗಳೆಲ್ಲವೂ ಪರಿಹಾರವಾಗಿ, ಸೀರ್ಯಾದ ರಂಗಪ್ಪನಾಯಕನ ಮಗ ಕೃಷ್ಣಪ್ಪನಾಯಕನಿಗೂ ದುರ್ಗದ ಕಸ್ತೂರಿರಂಗಪ್ಪನಾಯಕನ ಮಗಳಾದ ಓಬವ್ವಳಿಗೂ ವಿವಾಹ ನಡೆದು ಹೋಗುತ್ತದೆ. ಇತಂಹ ವಿವಾಹ ಸಂಬಂಧದೊಂದಿಗೆ ದುರ್ಗದ ರಹಸ್ಯವನ್ನು ಭೇದಿಸಿ, ಅವರನ್ನು ನಿರ್ಮೂಲನೆ ಮಾಡುವುದು ಸೀರ್ಯಾದವರ ಹಂಚಿಕೆಯಾಗಿರುತ್ತದೆ. ಈ ಪಿತೂರಿಯಲ್ಲಿ ದುರ್ಗದ

ಹಳೆಯ ವೈರಿಯಾದ ಪೂವಲಹನುಮನಾಯಕನು ಭಾಗಿಯಾಗುತ್ತಾನೆ. ವೆಂಕಪ್ಪಯ್ಯನು ಈ ಸಂಚಿನ ರೂವಾರಿಯಾಗಿರುತ್ತಾನೆ.

ವಿವಾಹದ ನಂತರ ಕೃಷ್ಣಪ್ಪನಾಯಕನು ದುರ್ಗದಲ್ಲೇ ನೆಲೆಸುತ್ತಾನೆ. ಈ ನಡುವೆ ತರೀಕೆರೆಯ ವೆಂಕಪ್ಪಯ್ಯನು ಸಹಜಾನಂದ ಸ್ವಾಮಿಯ ವೇಷವನ್ನು ಹಾಕಿಕೊಂಡು ದುರ್ಗದಲ್ಲಿ ರಹಸ್ಯ ಕಾರ್ಯಚಟುವಟಿಕೆಗಳನ್ನು ಪ್ರಾರಂಭಿಸುತ್ತಾನೆ. ಇದರಿಂದ ದುರ್ಗದ ಜವಾಬ್ದಾರಿ ಹೊತ್ತ ಹಿರಿಯೂರಿನ ಕೆಂಚಣ್ಣ ನಾಯಕನಿಗೆ ಅನುಮಾನ ಮೂಡುತ್ತದೆ. ಸೀರ್ಯದವರು ದುರ್ಗದ ಮೇಲೆ ಏನೋ ಒಳಸಂಚು ರೂಪಿಸಿದ್ದಂತೆ ಭಾಸವಾಗುತ್ತದೆ. ಈ ವಿಷಯವನ್ನು ವಿವಾಹದ ನಂತರ ಪ್ರವಾಸ ಮುಗಿಸಿ ಬಂದ ಕಸ್ತೂರಿ ರಂಗಪ್ಪನಾಯಕನಿಗೆ ತಿಳಿಸುತ್ತಾನೆ. "ಕೆಂಚಣ್ಣ ನಾಯಕರ ಅನುಮಾನ ಇಂದಿನದಲ್ಲ ಸ್ವಾಮಿಗಳು ಸೀರ್ಯದ ನಾಯಕರೊಂದಿಗೆ ದುರ್ಗ ಪ್ರವೇಶ ಮಾಡಿದಂದಿನಿಂದಲೂ ಇವರಿಗೆ ಸ್ವಾಮಿಗಳ ಮೇಲೆ ಅನುಮಾನವಿದ್ದೇ ಇತ್ತು. ಅದನ್ನು ಆ ಸಮಯದಲ್ಲಿ ತಮ್ಮ ಮುಂದೆ ಹೇಳಲಾಗದೆ, ಯುವರಾಜರ ಮುಂದೆ, ನನ್ನ ಮುಂದೆ ಪ್ರಸ್ತಾಪ ಮಾಡಿದರು....."[೬] ಎಂದು ದುರ್ಗದ ಪ್ರಧಾನಿ ವಿರೂಪಾಕ್ಷಪ್ಪನವರು ಈ ಸಂದರ್ಭದಲ್ಲಿ ದನಿಗೂಡಿಸಿದರು. ಈ ಎಲ್ಲ ಮಾತುಕತೆ ಮುಗಿದ ನಂತರ ಕೆಂಚಣ್ಣ ನಾಯಕನು ಹಿರಿಯೂರಿಗೆ ಹೊರಡಲು ಸಜ್ಜಾಗುತ್ತಾನೆ.

ವಿವಾಹ ಸಂದರ್ಭದಲ್ಲಿ ಪತ್ನಿ ಸಮೇತನಾಗಿ ಬಂದು ಎಲ್ಲ ರೀತಿಯ ಸಹಾಯ ಮಾಡಿದ ಕೆಂಚಣ್ಣ ನಾಯಕನಿಗೆ, ಕಸ್ತೂರಿ ರಂಗಪ್ಪ ನಾಯಕ ದಂಪತಿಗಳು ಸತ್ಕಾರ ಮಾಡುತ್ತಾರೆ. ಇಲ್ಲಿ ತ.ರಾ.ಸು. ಅವರು ಸೃಷ್ಟಿಸಿದ ಭಾವುಕ ಪ್ರಸಂಗಗಳು ಓದುಗರ ಮನವನ್ನು ತಟ್ಟುತ್ತವೆ. ಅವು ನಿಜಮಾನವಧರ್ಮದ ದ್ಯೋತಕದಂತೆ ಕಾಣುತ್ತವೆ. ನಿದರ್ಶನಕ್ಕೆ, ಕೆಂಚಣ್ಣ ನಾಯಕನ ಪತ್ನಿ ಕಸ್ತೂರಿ ರಂಗಪ್ಪ ನಾಯಕನಿಗೆ ಹೇಳುವ ಈ ಮಾತನ್ನು ನೋಡಿ "ತಂಗಿ ಎಂದು ನನ್ನನ್ನು ಬಾಯಿತುಂಬ ಕರೆದಿರಿ, ನಾಗತಿಯವರೂ ನನ್ನನ್ನು ಒಡಹುಟ್ಟಿದವಳಂತೇ ಆಧರಿಸಿದರು. ಈಗ ಪಾರ್ವತಿ ಪರಮೇಶ್ವರರ ಹಾಗೆ ಇಬ್ಬರೂ ಒಟ್ಟಿಗೆ ಕುಳಿತು 'ಏನು ಬೇಕು' ಎಂದು ಕೇಳುತ್ತಿದ್ದಿರಿ ನಾನು ಕೇಳುವುದಿಷ್ಟೆ 'ಅಕ್ಕ ಕೊಟ್ಟ ಕುಂಕುಮ ಭಾಗ್ಯವನ್ನು ಶಾಶ್ವತವಾಗಿ ಉಳಿಸಿಕೊಡಿ, ನೀವು ನನಗಿಂದು ವಿಶ್ವಾಸದಿಂದ ಕೊಟ್ಟ ಓಲೆ, ಕಂಕಣ ಎಂದೂ ನನ್ನ ದೇಹದಿಂದ ಜಾರದಂತೆ ಕಾಪಾಡಿ. ಅಷ್ಟೇ ನಾನು ಬೇಡುವುದು.... ಎಂದು ಹುನುಮವ್ವ ನಾಗತಿ ಬೇಡಿದಾಗ, "ನಾನೂ ಅದನ್ನೇ ಹಾರೈಸುತ್ತೇನೆ, ತಂಗಿ, ಭಗವಂತ ನಿನಗೆ ಅದನ್ನು ಕರುಣಿಸಲಿ, ಹಾಗಲ್ಲದೆ ಮನುಷ್ಯ ಮಾತ್ರದವನು ನಿನ್ನ ಕುಂಕುಮ ಭಾಗ್ಯಕ್ಕೆ ಕೈ ಹಚ್ಚಿದರೆ, ಅದಕ್ಕೆ ನನ್ನ ತಲೆ ಪಣ. ಈ ದೇಹದ ಮೇಲೆ ಈ ತಲೆ ಇರುವವರೆಗೂ ನಿನ್ನ ಕುಂಕುಮ, ಓಲೆ, ಕಂಕಣಗಳಿಗೆ ಚ್ಯುತಿ ಬರದಂತೆ ನೋಡಿಕೊಳ್ಳುತ್ತೇನೆ"[೭] ಎಂದು ಕಸ್ತೂರಿ ರಂಗಪ್ಪ ನಾಯಕನು ಹನುಮವ್ವ ನಾಗತಿಗೆ ಮಾತುಕೊಡುತ್ತಾನೆ.

ಇತ್ತ ದುರ್ಗದಲ್ಲಿ ಸಹಜಾನಂದ ಸ್ವಾಮಿಗಳು ಕೃಷ್ಣಪ್ಪನಾಯಕನೊಂದಿಗೆ ಸಮಾಲೋಚಿಸಿ, ಮತ್ತಷ್ಟು ರಹಸ್ಯ ಕಾರ್ಯತಂತ್ರಗಳನ್ನು ರೂಪಿಸುತ್ತಾನೆ. ಅಲ್ಲಿ ಹಿರಿಯೂರಿನ ಮೇಲೆ ಸೀರ್ಯಾದ ಸೇನೆ ಯುದ್ಧವನ್ನು ಸಾರುತ್ತದೆ. ಈ ಸುದ್ದಿ ತಿಳಿದ ಕಸ್ತೂರಿರಂಗಪ್ಪನಾಯಕನು ಹಿರಿಯೂರಿನವರ ನೆರವಿಗೆ ಧಾವಿಸಿ, ಸೀರ್ಯಾದ ಸೇನೆಯನ್ನು ಸದೆಬಡೆಯುತ್ತಾನೆ. ಈ ನಡುವೆ ಸಹಜಾನಂದ ಸ್ವಾಮಿಯು ಪ್ರಸಾದದಲ್ಲಿ ವಿಷಬೆರೆಸಿ ದುರ್ಗದ ನಾಯಕನನ್ನು ಕೊಲ್ಲಲು ಸಂಚು ರೂಪಿಸುತ್ತಾನೆ. ಈ ಸಂಚು ವೆಂಕಟ ನಾಯಕನಿಂದ ಬಯಲಾಗುತ್ತದೆ. ಸರ್ವೇರಾಯನು ಸಹಜಾನಂದ ಸ್ವಾಮಿ ಹಾಗೂ ಕೃಷ್ಣಪ್ಪನಾಯಕನನ್ನು ಕೊಲೆಗೈಯುತ್ತಾನೆ. ಹಿರಿಯೂರಿನವರಿಗಾಗಿ ಸಹಾಯಹಸ್ತ ನೀಡಿದ ಕಸ್ತೂರಿ ರಂಗಪ್ಪನಾಯಕನನ್ನು ಹನುಮವ್ವ ನಾಗತಿಯು ಆರತಿಯೆತ್ತಿ ಸ್ವಾಗತ ಕೋರುತ್ತಾಳೆ. ಹನುಮವ್ವ ನಾಗತಿಯು "ತಮ್ಮ ಮುಂದೆ ಒಡ್ಡಿದ ಹರಿವಾಣದಲ್ಲಿ ಕಸ್ತೂರಿ ರಂಗಪ್ಪನಾಯಕರು, ತಮ್ಮ ಕೈಯಲ್ಲಿದ್ದ ರೇಶಿಮೆಯ ಖಣದಲ್ಲಿದ್ದ ಓಲೆ, ಕಂಕಣ, ಅರಿಶಿನ, ಕುಂಕುಮದ ಭರಣಿಗಳನ್ನಿಟ್ಟು, ಕುಂಕುಮಭರಣಿಯನ್ನು ತೆಗೆದು, ಹನುಮವ್ವ ನಾಗತಿಯ ಹಣೆಗೆ ತಾವೇ ಕುಂಕುಮವಿಟ್ಟು – "ಹೋಗು ತಂಗಿ, ಇವನೆಲ್ಲಾ ಧರಿಸಿಬಂದು ಆರತಿ ಎತ್ತು, ನಮ್ಮ ಮಾತು ತೀರಿತೇ?" ಎಂದು ಹೇಳಿದರು. "ತೀರಿತು ಅಣ್ಣಾ" ಎಂದು ಹನುಮವ್ವ ನಾಗತಿ ಕಂಬನಿಗರೆಯುತ್ತಾ, ಆ ದೃಶ್ಯವನ್ನು ಕಂಡ ಕೆಂಚಣ್ಣ ನಾಯಕ, ತಾನೇ ಬಂದು, ಹೆಂಡತಿಯ ಕೈಗೆ ಹರಿವಾಣದಲ್ಲಿದ್ದ ಕಂಕಣವಿಟ್ಟು "ಹನುಮಾ ಈ ಕಂಕಣ, ಬರೀ ಕಂಕಣವಲ್ಲ, 'ಕಸ್ತೂರಿ ಕಂಕಣ', ಇದನ್ನೆಂದೂ ನಿನ್ನ ಕೈಗಳಿಂದ ತೆಗೆಯಬೇಡ. ನಾಯಕರ ಹೆಸರಾಗಿ, ನಿನ್ನ ಹಸ್ತಗಳಲ್ಲಿ ಶಾಶ್ವತವಾಗಿರಲಿ"[೮] ಎಂದು ಕೆಂಚಣ್ಣನಾಯಕನು ಹೇಳಿದಾಗ, ಈ ಮಾತನ್ನು ಕೇಳಿದ ಜನ ಕಸ್ತೂರಿರಂಗಪ್ಪ ನಾಯಕರಿಗೆ ಜಯವಾಗಲೆಂದು ಜಯಕಾರ ಕೂಗುತ್ತಾರೆ.

**ದುರ್ಗಾಸ್ತಮಾನ:**

ತಾವು ಹುಟ್ಟಿ ಬೆಳೆದ ಜನ್ಮಭೂಮಿಗೆ ಋಣಿಯಾಗಿ ಬದುಕಿದವರು ತ.ರಾ.ಸುಬ್ಬರಾಯರು. ಜನ್ಮಕೊಟ್ಟ ನೆಲದ ಬಗೆಗೆ ಅವರಿಗಿದ್ದ ಅಭಿಮಾನಕ್ಕೆ ಅವರೇ ಸರಿಸಾಟಿ. ಇದಕ್ಕೆ ಅವರು ರಚಿಸಿದ ಸಾಲುಸಾಲು ಐತಿಹಾಸಿಕ ಕಾದಂಬರಿಗಳೇ ಜೀವಂತ ಸಾಕ್ಷಿ. ಈ ಹಿನ್ನೆಲೆಯಲ್ಲಿ ಅವರು ತಿರುಗುಬಾಣ ಕಾದಂಬರಿಯ ಮುನ್ನುಡಿಯಲ್ಲಿ ಹೇಳಿದ ಮಾತುಗಳು ಅತ್ಯಂತ ಗಮನಾರ್ಹವಾಗಿವೆ. "ಚಿತ್ರದುರ್ಗದ ಬಗ್ಗೆ ಮೂಲ ಪುರುಷ ಮತ್ತಿ ತಿಮ್ಮಣ್ಣ ನಾಯಕನಿಂದ ಹಿಡಿದು ಕಡೆಯ ಮದಕರಿನಾಯಕನ ದುರಂತ ಮರಣದವರೆಗಿನ ಸಮಗ್ರ ಇತಿಹಾಸದ ಮುಖ್ಯ ಘಟ್ಟಗಳನ್ನು ಕಾದಂಬರಿ ರೂಪದಲ್ಲಿ ಚಿತ್ರಿಸಬೇಕೆಂಬ ಬಯಕೆ ನನಗಿದೆ. ಈ ಕಾರ್ಯ ನನ್ನಿಂದ ನೆರವೇರಿದುದು, ನಾನು ನನ್ನ ಜನ್ಮಭೂಮಿಗೆ ಸಲ್ಲಿಸಬೇಕಾದ ಋಣದಲ್ಲಿ ಸ್ವಲ್ಪವಾದರೂ ತೀರಿತೆಂಬ ಸಮಾಧಾನವಾಗುತ್ತದೆ"[೯] ಎಂಬ ಧೋರಣೆಯ

ಓಸ್ನೆಲೆಯಲ್ಲಿ ಬರೆದವರು ತ.ರಾ.ಸು. ಅವರು. ತನ್ಮೂಲಕ ಜನ್ಮಭೂಮಿಯ ಋಣವನ್ನು ತೀರಿಸಿದವರಾಗಿದ್ದಾರೆ.

'ದುರ್ಗಾಸ್ತಮಾನ'ವು ತ.ರಾ.ಸು. ಅವರು ಬರೆದ ಕಡೆಯ ಐತಿಹಾಸಿಕ ಕಾದಂಬರಿ. ಅಷ್ಟೇಕೆ ಇದು ಅವರ ಕೊನೆಯ ಕಾದಂಬರಿಯೂ ಹೌದು. ಚಿತ್ರದುರ್ಗದ ಪಾಳೆಗಾರಿಕೆಯ ಕೊನೆಯ ಇತಿಹಾಸದ ಆಧಾರದ ಮೇಲೆ ಇದು ರಚನೆಗೊಂಡಿದೆ. "ಕಾದಂಬರಿಯ ಹೆಸರೇ ಅತ್ಯಂತ ಧ್ವನಿಪೂರ್ಣವಾದದ್ದು. ಮದಕರಿನಾಯಕನ ದುರಂತದಲ್ಲಿ ಒಂದು ನಾಡಿನ ದುರಂತ ಮಾತ್ರ ಧ್ವನಿಸುವುದಿಲ್ಲ: ಒಂದು ಕೋಟೆಯ ಪತನ ಪಾಳೆಯಗಾರನೊಬ್ಬನ ಪತನವನ್ನಷ್ಟೆ ಹೇಳುವುದಿಲ್ಲ. ಘರ್ಷಣೆಗಳು ರಾಜಕೀಯವಾಗಿಯಷ್ಟೆ ಮುಗಿಯುವುದಿಲ್ಲ. ಜನರ ದುರಂತ, ಬದುಕಿನ ಪತನ, ಸ್ವಾರ್ಥಗಳ ಸಂಘರ್ಷ ಈ ಪರಿಣಾಮಗಳಿಂದ ಜೀವನದ ಮೌಲ್ಯಗಳೇ ಅಸ್ತಂಗತವಾಗುತ್ತವೆ. ಕೋಟೆಗಳು ಪಾಳು ಬಿದ್ದಂತೆ, ಬದುಕುಗಳೂ ಬಂಜರಾಗುತ್ತವೆ. ಚಿತ್ರದುರ್ಗದ ಕೋಟೆಯ ಮದಕರಿನಾಯಕನ ಕತೆಯನ್ನು ಹೇಳುವುದರ ಮೂಲಕ ತ.ರಾ.ಸು. ಮನುಷ್ಯನ ಪತನ ಮಾರ್ಗವನ್ನೇ ಚಿತ್ರಿಸಿದ್ದಾರೆ."[೨೦೦] ಎಂಬ ಅಭಿಪ್ರಾಯವು ಸೂಕ್ತವಾದುದ್ದಾಗಿದೆ. ಇದೊಂದು ಬೃಹತ್ ಕಾದಂಬರಿಯಾಗಿದ್ದು ಸುಮಾರು ೭೦೦ ಪುಟಗಳಷ್ಟು ಧೀರ್ಘತೆಯನ್ನು ಹೊಂದಿದೆ.

"ಚಿತ್ರದುರ್ಗದ ಜನರಿಗೆ ಚಿತ್ರದುರ್ಗ ಎಂದರೆ ಒಂದು ಊರಲ್ಲ. ಕೋಟೆಯಲ್ಲ ಬೆಟ್ಟವಲ್ಲ. ತಮ್ಮ ಕರುಳಿಗೆ ಹೊಂದಿಕೊಂಡು ಬೆಳೆದ ಜೀವಂತ ವಸ್ತು. ಮದಕರಿನಾಯಕನೆಂದರೂ ಅಷ್ಟೆ ಇತಿಹಾಸದ ಇದ್ದು ಹೋದ ಒಬ್ಬ ಅರಸನಲ್ಲ. ತಮ್ಮ ಜೀವಂತ ಆಪ್ತನೆಂಟ. ಈ ಭಾವನೆ ಹೇಗೊ, ಹಾಗೆಯೇ 'ಚಿತ್ರದುರ್ಗ' 'ಮದಕರಿನಾಯಕ' ಎನ್ನುವುದು ಬೇರೆ ಬೇರೆಯಲ್ಲ. ಒಂದೇ ಎಂಬ ಅವಿನಾಭಾವ: ದುರ್ಗ ಎಂದರೆ ಮದಕರಿ. ಮದಕರಿ ಎಂದರೆ ದುರ್ಗ. ನಾಯಕ ಜನಾಂಗಕಷ್ಟೇ ಅಲ್ಲ ದುರ್ಗದ ನೀರು ಕುಡಿದು, ಆ ಮಣ್ಣಿನಲ್ಲಿ ಹುಟ್ಟಿದವರೆಲ್ಲರಿಗೂ ಆ ಬಗ್ಗೆ ಮಾತನಾಡುವಾಗ ಹೇಳುವುದು 'ನಮ್ಮ ಚಿತ್ರದುರ್ಗ', 'ನಮ್ಮ ಮದಕರಿನಾಯಕ', ಆ ಎರಡರ ನಡುವಿನ ಕೊಂಡಿ 'ನಾಮ' ಎಂಬ ಭಾವನೆ. ಎಲ್ಲ ಊರಿನ ಜನಕ್ಕೂ ತಮ್ಮ ಊರು, ತಮ್ಮ ಸ್ಥಳವನ್ನಾಳಿದ ದೊರೆಯ ಬಗ್ಗೆ ಈ ಭಾವನೆ ಇರುತ್ತದೆಯೋ, ಇಲ್ಲವೋ ನಾನರಿಯೆ. ಆದರೆ ಚಿತ್ರದುರ್ಗದ ಮಟ್ಟಿಗಂತೂ ಇದು ಎಲ್ಲರಿಗೂ ಅನ್ವಯಿಸುವ ಮಾತು: ಆ ನೆಲದ ಮಗನಾದ ನನಗೂ"[೨೦೧] ಎಂದು ತ.ರಾ.ಸು. ಅವರು ದುರ್ಗದೊಂದಿಗಿನ ತಮ್ಮ ಅವಿನಾಭಾವ ಸಂಬಂಧವನ್ನು ಕುರಿತು ಈ ಕಾದಂಬರಿಯ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. ಈ ಅವಿನಾಭಾವ ಸಂಬಂಧದ, ಅವರ ಬಹುದಿನಗಳ ಕನಸಿನ ಫಲವೇ ಈ ದುರ್ಗಸ್ತಮಾನ ಕಾದಂಬರಿ ಎಂದರೆ ತಪ್ಪಾಗಲಿಕ್ಕಿಲ್ಲ. ದುರ್ಗದ ಬಗೆಗೆ ಅವರು ಇರಿಸಿದ ಅಭಿಮಾನ ಈ ಕಾದಂಬರಿಯ ಮದಕರಿನಾಯಕನ ಕೊನೆಯ ದಿನಗಳವರೆಗೂ ಮುಂದುವರೆಯುತ್ತದೆ.

ಹಿರಿಯ ಮದಕರಿ ನಾಯಕನ ನಂತರ ಅವನ ಮಗನಾದ ಕಸ್ತೂರಿರಂಗಪ್ಪನಾಯಕನು ದುರ್ಗದ ಪಟ್ಟವನ್ನೇರುತ್ತಾನೆ. ಆದರೆ ಕೇವಲ ಆರುವರುಷಗಳ ಕಾಲ ಆಳಿದ ಈತನು ಮಕ್ಕಳಿಲ್ಲದೆ ಮೃತನಾಗುತ್ತಾನೆ. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಹಿರಿಯ ಮದಕರಿ ನಾಯಕನ ಹೆಂಡತಿ, ಕಸ್ತೂರಿ ರಂಗಪ್ಪನ ತಾಯಿ ಓಬವ್ವ ನಾಗತಿಯ ಕನಸಿನ ಪ್ರಕಾರ ಜಾನಕಲ್ಲು ದುರ್ಗದ ತೊದಲು ಭರಮಣ್ಣನಾಯಕನ ಮಗನಾದ ಮದಕರಿ ನಾಯಕನಿಗೆ ಪಟ್ಟಕಟ್ಟಲಾಗುತ್ತದೆ. ಓಬವ್ವ ನಾಗತಿಯ ಈ ನಿರ್ಧಾರವನ್ನು ದುರ್ಗದ ಆಪ್ತೇಷ್ಟರೆಲ್ಲರೂ ಒಪ್ಪಿಕೊಳ್ಳುತ್ತಾರೆ. ಆದರೆ ಮದಕರಿನಾಯಕ ಪಟ್ಟಕ್ಕೆ ಬಂದಾಗ, ಈತನಿಗೆ ಕೇವಲ ಹನ್ನೆರಡು ವರ್ಷ. ಈ ಘಟನೆ ಇತಿಹಾಸದ ಕಾಕತಾಳೀಯ ತಾರ್ಕಿಕ ಪ್ರಶ್ನೆಯಂತೆ ಕಾಣುತ್ತದೆ. ಆದರೆ ತ.ರಾ.ಸು. ಅವರು ಇತಿಹಾಸದ ಯಥಾವತ್ತಾದ ಘಟನೆಗಳಂತೆ ಈ ಕಾದಂಬರಿಯನ್ನು ಹೆಣೆದಿದ್ದಾರೆ. ಅದಕ್ಕಾಗಿಯೇ ಇದು ಇತಿಹಾಸಕ್ಕೆ ಬಹಳ ಹತ್ತಿರವಾಗುತ್ತದೆ.

"ಶತವರ್ಷ ೧೬೭೬ನೇ ಭಾವಸಂವತ್ಸರದ ಆಷಾಢ ಶುದ್ಧ ದ್ವಾದಶಿಯ ದಿನ ಸಂಪಿಗೆ ಸಿದ್ದೇಶ್ವರನ ದೇವಾಲಯದ ಮುಂದಿನ ಪಟ್ಟಾಭಿಷೇಕಾಂಗಣದಲ್ಲಿ, ಮಣಿಖಚಿತ ದಿವ್ಯ ಹೇಮಸಿಂಹಾಸನದ ಮೇಲೆ, ಪುರೋಹಿತರು ನಿಷ್ಕರ್ಷಿಸಿದ ಶುಭಮಹೂರ್ತದಲ್ಲಿ, ಹೊನ್ನುಡುಗೆಯುಟ್ಟು, ರತ್ನಕಿರೀಟ ತೊಟ್ಟು, ಬಾಲರವಿಯಂತೆ ಬೆಳಗುತ್ತ, ಸಿದ್ಧರು ಅನುಗ್ರಹಿಸಿದ ದೆಸೆಗಟ್ಟಿನ ಧೂಳಿತ, ಉತ್ಸವಾಂಬೆಯ ಭಂಡಾರವನ್ನು ಲಲಾಟದಲ್ಲಿ ಧರಿಸಿ, ಕೈಯಂಬು ಹಿಡಿದು, ವಿಪ್ರಸ್ತೋಮ ಗಂಭೀರ ಧ್ವನಿಯಲ್ಲಿ ರಾಜ್ಯಾಭಿಷೇಕದ ಮಂತ್ರೋಚ್ಚಾರಣೆ ಮಾಡುತ್ತಿರಲು, ದುರ್ಗದ ಅರಸು ಪೀಠಕ್ಕೆ, ರಕ್ಷೆಯೆಂಬಂತೆ, ರಾಜಗುರುಗಳಾದ ಶ್ರೀ ಮುರುಗೀಸ್ವಾಮಿಗಳು. ಕೂಡಲೀ ಶೃಂಗೇರಿಯ ಶ್ರೀ ಶಾರದಾಪೀಠದ ಶ್ರೀಗಳು ರಜತ ಪೀಠದಲ್ಲಿ ಮಂಡಿಸಿರಲು, ಮದಕರಿನಾಯಕರು ಪಟ್ಟಾಭಿಷಿಕ್ತರಾದರು"[೧೦೨] ಈ ರೀತಿ ಬಾಲಕ ಮದಕರಿನಾಯಕನ ಪಟ್ಟಾಭಿಷೇಕ ನೆರವೇರುತ್ತದೆ. ನಂತರ ಓಬವ್ವನಾಗತಿ ಮತ್ತು ಪ್ರಧಾನಿ ಕಳ್ಳಿ ನರಸಪ್ಪಯ್ಯನು ಮದಕರಿನಾಯಕನಿಗೆ, ಅರಮನೆಯ ರೀತಿ ರಿವಾಜುಗಳು ಹಾಗೂ ಆಡಳಿತಾತ್ಮಕ ವಿಷಯಗಳನ್ನು ಕಲಿಸುತ್ತಾರೆ. "ಅರಸು, ಅರಸು ಪದವಿ ಎಂದರೇನೆಂದುಕೊಂಡಿರಿ. ಹತ್ತಾರು ಸಾವಿರ ಹೆಣಗಳ ಬುನಾದಿಯ ಮೇಲೆ ಕಟ್ಟಿದ್ದು ಈ ಅರಸು ಸಿಂಹಾಸನ. ಇದರ ಮೇಲೆ ಕುಳಿತು ಆಳುವಾತ ಹನಿರಕ್ತಕ್ಕೆ ಹೆದರಿದರೆ ಹೇಗೆ? ಯುದ್ಧದಲ್ಲಿ ರಕ್ತದ ಕೋಡಿ ಹರಿಸಬೇಕಾದ ನಿಮಗೆ ಹಾಗೆ ಮೈತಪ್ಪದಂತೆ, ಬುದ್ಧಿ ಕೆಡದಂತೆ ರಕ್ತದ ಅಭ್ಯಾಸವಾಗಬೇಕು. ರಕ್ತ ನೀರಿಗಿಂತ ಸದರವಾಗಬೇಕು. ಅರಸೇ ರಕ್ತಕ್ಕೆ ಹೆದರಿದರೆ, ಅವರ ಹಿಂದೆ ಬರುವ ಸೈನಿಕರೇನು ಮಾಡಬೇಕು. ಅವರು ನೀರಿಗೂ ಅಂಜಿ ಓಡಬೇಕೇ?[೧೦೩] ಎಂಬಂತಹ ಮಾತುಗಳ ಮೂಲಕ ಮದಕರಿನಾಯಕನಲ್ಲಿ ಅರಸುತನದ ಧೈರ್ಯ ತುಂಬುವ ಕೆಲಸವನ್ನು ಓಬವ್ವ ನಾಗತಿ ಮಾಡುತ್ತಾಳೆ. ಇಂತಹ ಪ್ರಸಂಗಗಳನ್ನು ತ.ರಾ.ಸು. ಅವರು ಉತ್ತಮ ಆಡಳಿತಗಾರರನ್ನಾಗಿ ರೂಪಿಸುವ ಕ್ರಮದಂತೆ ಚಿತ್ರಿಸಿದ್ದಾರೆ.

ಕೂಡಲಿ ಶೃಂಗೇರಿ ಪೀಠದ ಮೂಲಕ, ತರೀಕೆರೆಯ ಪಾಳೆಯಗಾರ ಸರ್ಜಾ ಹನುಮಪ್ಪ ನಾಯಕನ ಮಗಳನ್ನು ಮದಕರಿನಾಯಕನಿಗೆ ಕೊಟ್ಟು ವಿವಾಹ ಮಾಡುವ ಪ್ರಸ್ತಾಪ ಬರುತ್ತದೆ. ಇದಕ್ಕೆ ಓಬವ್ವನಾಗತಿಯಾದಿಯಾಗಿ ಆಪ್ತೇಷ್ಟರೆಲ್ಲರೂ ಒಪ್ಪಿಕೊಳ್ಳುತ್ತಾರೆ. ಈ ಹಿಂದಿನ ಎರಡು ಕುಟುಂಬಗಳ ವೈಮನಸ್ಸನ್ನು ದೂರಮಾಡುವ ಉದ್ದೇಶ ಈ ಸಂಬಂಧದ ಹಿಂದಿರುತ್ತದೆ. ಅದರಂತೆ ಸರ್ಜಾ ಹನುಮಪ್ಪ ನಾಯಕನ ಮಗಳು ಲಕ್ಕಾಂಬೆಯನ್ನು ಮದಕರಿನಾಯಕನೊಂದಿಗೆ ವಿವಾಹ ಮಾಡಲಾಗುತ್ತದೆ.

ಈ ನಡುವೆ ರಾಯದುರ್ಗದವರು ದುರ್ಗದ ಮೇಲೆ ದಾಳಿ ಮಾಡುತ್ತಾರೆ. ಈ ಕುರಿತು ದುರ್ಗದಲ್ಲಿ ತುರ್ತು ಸಭೆ ಜರಗುತ್ತದೆ. 'ಆಳುವವರು ಹೆಂಗಸರು, ಪಟ್ಟದ ದೊರೆ ಹುಡುಗ' ಎಂಬ ಕುಚೇಷ್ಟೆಯೊಂದಿಗೆ ದಾಳಿ ಮಾಡಿದ ರಾಯದುರ್ಗದ ಸೇನೆಯನ್ನು ಸದೆಬಡೆಯುವ ನಿರ್ಧಾರಕ್ಕೆ ಓಬವ್ವನಾಗತಿ ಬರುತ್ತಾಳೆ. ಓಬವ್ವನಾಗತಿಯ ಈ ನಿರ್ಧಾರ ಕಂಡು ಸಭಿಕರೆಲ್ಲ ನಿಬ್ಬೇರಗಾಗುತ್ತಾರೆ. ಅಂದುಕೊಂಡಂತೆ ಓಬ್ಬವ್ವನಾಗತಿಯೇ ಸೇನೆಯ ನೇತೃತ್ವವನ್ನು ವಹಿಸಿ ರಾಯದುರ್ಗದವರನ್ನು ಸದೆಬಡಿದು ದುರ್ಗದ ಕೋಟೆಯನ್ನು ರಕ್ಷಿಸುತ್ತಾಳೆ. ಈ ವಿಜಯೋತ್ಸವದ ಸಂಭ್ರಮ ಎಲ್ಲೆಡೆ ಕಂಡು ಬರುತ್ತದೆ.

ಇತ್ತ ತರೀಕೆರೆಯ ಹೆಣ್ಣುಮಗಳು ಲಕ್ಕಾಂಬಿಕೆಯು ತನ್ನ ಸಿಟ್ಟು ಸೆಡುವುಗಳಿಂದ ಮದಕರಿನಾಯಕನೊಂದಿಗೆ ಹೊಂದಿಕೊಳ್ಳಲಾಗದೆ, ತವರೂರಿಗೆ ಮರಳುವ ಪ್ರಸಂಗ ಬರುತ್ತದೆ. ಇದು ದುರ್ಗದ ಮೇಲೆ ತರೀಕೆರೆಯವರು ಕೋಪಕಾರಲು ಕಾರಣವಾಗುತ್ತದೆ. ಅಷ್ಟಲ್ಲದೆ ಮದಕರಿನಾಯಕನು ಒಂದೇ ಹಸೆಮಣೆಯ ಮೇಲೆ ಗುಡಿಕೋಟೆಯ ಪಾಳೆಯಗಾರನಾದ ಮುಮ್ಮಡಿ ಜಟಂಗಿ ನಾಯಕನ ಮಗಳು ಪದ್ಮವ್ವನಾಗತಿ ಮತ್ತು ಜರಿಮಲೆಯ ಪಾಳೆಯಗಾರನಾದ ಇಮ್ಮಡಿ ಬೊಮ್ಮಣ್ಣ ನಾಯಕನ ಮಗಳಾದ ಬಂಗಾರವ್ವ ನಾಗತಿ ಇವರಿಬ್ಬರನ್ನು ಮದುವೆಯಾಗುತ್ತಾನೆ. ಈ ನಡುವೆ ಹಿರಿಯ ಸೊಸೆಯ ಶಾಪ ಮನೆಗೆ ತಟ್ಟುದೆಂಬ ಆತಂಕದಲ್ಲೆ ಓಬವ್ವನಾಗತಿಯ ಆರೋಗ್ಯ ಕುಗ್ಗುತ್ತ ಹೋಗುತ್ತದೆ. ಕುಗ್ಗಿ ಕುಗ್ಗಿ ಅವಳು ಮೃತಳಾಗುತ್ತಾಳೆ. ಅವಳ ಜೊತೆಗೆ ದಾಸಿ ಹೊನ್ನವ್ವೆಯೂ ಮರಣವನ್ನಪ್ಪುತ್ತಾಳೆ. ಈ ನೋವಿನ ಸೂತಕವು ಇಡೀ ದುರ್ಗವನ್ನೇ ಆವರಿಸಿಕೊಳ್ಳುತ್ತದೆ. ಇಂಥ ಸಂದರ್ಭದಲ್ಲಿ ದಾಳಿಕೋರರ ಕಾಟವೂ ಶುರುವಾಗುತ್ತದೆ. ಹರಪನಹಳ್ಳಿಯವರು ರಾಯದುರ್ಗದವರ ಸಹಾಯದೊಂದಿಗೆ ದುರ್ಗದ ಮೇಲೆ ದಾಳಿ ಮಾಡುತ್ತಾರೆ. ಆದರೆ ದುರ್ಗದ ಬಲಿಷ್ಠ ಸೇನೆಯ ಎದುರಿಗೆ ಹರಪನಹಳ್ಳಿಯವರು ಸೋತು ಸುಣ್ಣವಾಗುತ್ತಾರೆ.

ಈ ಮಧ್ಯೆ ಶ್ರೀರಂಗಪಟ್ಟಣದ ಹೈದರಾಲಿಯ ಒಂದು ಲಕ್ಷ ಸೇನೆಯು ಹೊಸದುರ್ಗಕ್ಕೆ ಮುತ್ತಿಗೆ ಹಾಕುತ್ತದೆ. ಆ ಮೂಲಕ ಹೈದರಾಲಿಯು ಪತ್ರವೊಂದನ್ನು ಬರೆದು, 'ಒಂದು ಲಕ್ಷವರಹ ಖಂಡಣಿಕೊಡಬೇಕು. ಇಲ್ಲವಾದಲ್ಲಿ ನಿಮ್ಮ ಸೀಮೆ ನಿಮ್ಮದಾಗಿ ಉಳಿಯದು'

ಎಂದು ಬೇಡಿಕೆಯನ್ನು ಇಡುತ್ತಾನೆ. ಆಗ ಮದಕರಿನಾಯಕನು ಹೈದರಾಲಿಯೊಂದಿಗೆ ಸಂಧಾನಕ್ಕೆ ಮುಂದಾಗುತ್ತಾನೆ. "ನೀವು ಬಿಡಾರ ಬಿಟ್ಟಿರುವುದು ನಮ್ಮ ರಾಜ್ಯದ ಗಡಿಯೊಳಗೆ

ಅದು ನಮ್ಮ ಆಹ್ವಾನವಿಲ್ಲದೆ, ಹಾಗಿರುವಾಗ ನಾನು ಸಾಮಂತನಂತೆ ಬಂದಿದ್ದರೆ, ಯುದ್ಧವಿಲ್ಲದೆಯೇ ನಿಮ್ಮ ಊಳಿಗವನ್ನು ಅಂಗೀಕರಿಸಿದಂತಾಗುತ್ತಿತ್ತು. ನಮ್ಮ ನಿಮ್ಮ ಮಾತು ಬೇರೆ – ನಮ್ಮ ಜನ, ನಮ್ಮ ನಾಯಕರು ನವಾಬರಿಗೆ ಹೆದರಿಕೊಂಡರು ಎನ್ನುತ್ತಿದ್ದರು. ಹೆದರಿಕೆ, ಸೋಲು ಎರಡೂ ಒಂದೇ ಶಬ್ದವಲ್ಲವೇ? ಆದ್ದರಿಂದ ನಿಮ್ಮ ಮಾತಿಗೆ ಮರ್ಯಾದೆ ಬರುವ ಹಾಗೆ, ನಮ್ಮ ಮರ್ಯಾದೆಗೆ ಲೋಪ ಬರದ ಹಾಗೆ ನಡೆದುಕೊಂಡೆವು".[೧೦೪] ಎಂಬ ಸಂಧಾನದ ಮಾತುಗಳೊಂದಿಗೆ ಮದಕರಿನಾಯಕ ಹೈದರಾಲಿಯೊಂದಿಗೆ ತನ್ನ ರಾಜಕೀಯವನ್ನು ಸಾಧಿಸಿಕೊಳ್ಳುತ್ತಾನೆ. ಈ ಸಂದರ್ಭದಲ್ಲಿ ತ.ರಾ.ಸು. ಅವರು ಹೈದರಾಲಿಯ ವ್ಯಕ್ತಿತ್ವ ಚಿತ್ರವನ್ನು ಬಲು ಸೊಗಸಾಗಿ ನೀಡುತ್ತಾರೆ.

ಮರಾಠರು ಮತ್ತು ಹೈದರಾಲಿಯ ಮಧ್ಯೆ ಮೇಲಿಂದ ಮೇಲೆ ಸಂಘರ್ಷಗಳು ನಡೆಯುತ್ತಲೇ ಇರುತ್ತವೆ. ಹೈದರಾಲಿಯು ಮರಾಠರ ವಿರುದ್ಧ ಹೋರಾಡಲು ಮದಕರಿನಾಯಕನ ಸಹಾಯ ಕೋರುತ್ತಾನೆ. ಇಂತಹ ಸಂದರ್ಭದಲ್ಲಿ ದುರ್ಗದವರು ಯಾರಪರ ಹೋರಾಡಬೇಕೆಂಬ ಗೊಂದಲಕ್ಕೆ ಒಳಗಾಗುವ ಪ್ರಸಂಗಗಳು ಬರುತ್ತವೆ. ಆದರೆ ಹೈದರಾಲಿಯ ಪರವಾಗಿ ನಿಲ್ಲುವ ಮದಕರಿನಾಯಕನು ನಗರ ಸಂಸ್ಥಾನ ಮತ್ತು ಬಂಕಾಪುರ ಕೋಟೆಗಳನ್ನು ಗೆಲ್ಲಿಸಿಕೊಡುತ್ತಾನೆ. ಈ ನಡುವೆ ಅರಮನೆ ಮತ್ತು ಗುರುಮನೆಗಳ ನಡುವಿನ ತಿಕ್ಕಾಟದಂತಹ ಪ್ರಸಂಗಗಳನ್ನು ತ.ರಾ.ಸು. ಅವರು ಚಿತ್ರಿಸಿದ್ದಾರೆ. "ಕಡೂರಿಯನ್ನು ತನ್ನವಳನ್ನಾಗಿ ಮಾಡಿಕೊಂಡ ನಂತರ ಆಕಸ್ಮಿಕವಾಗಿ ಮದಕರಿನಾಯಕನ ಕಣ್ಣುಗಳಿಗೆ ಬಿದ್ದ ಹೆಣ್ಣು ಮಗಳೊಬ್ಬಳು, ನಾಯಕನ ಮಾತಿಗೆ ನೊಂದು ಆತ್ಮಹತ್ಯೆ ಮಾಡಿಕೊಂಡಿದ್ದು, ಕೋಗುಂಟೆ ಗ್ರಾಮದಲ್ಲಿ ಕೆಲವರಿಗೆ ಒಬ್ಬ ಅಯ್ಯನವರು ಲಿಂಗಧಾರಣೆ ಮಾಡಿದ ಸಂದರ್ಭದಲ್ಲಿ, ಸೊಕ್ಕಿದ ಹೆಣ್ಣೊಬ್ಬಳಿಗೆ ಲಿಂಗಧಾರಣೆಯನ್ನು ನಿರಾಕರಿಸಿದ ಕಾರಣದಿಂದ ಆ ಹೆಣ್ಣು ಸೇಡಿನಿಂದ ಲಿಂಗಧಾರಣೆ ಮಾಡಿಕೊಂಡ ಯುವಕರನ್ನೆಲ್ಲಾ ತನ್ನತ್ತ ಎಳೆದುಕೊಂಡು, ಅವರು ಧರಿಸಿದ್ದ ಲಿಂಗಗಳನ್ನೆಲ್ಲಾ ತನ್ನ ಕೊರಳಿಗೆ ಹಾಕಿಕೊಂಡು ಮೆರೆದು, ಲಿಂಗಧಾರಣೆ ಮಾಡಿಸಿಕೊಂಡ ಯುವಕರೆಲ್ಲಾ ಪ್ರಾಯಶ್ಚಿತ್ತಕ್ಕೆ ಪಟ್ಟ ಪ್ರಯತ್ನ ಇತ್ಯಾದಿಗಳ ನಡುವೆ ಗುರುಮನೆ ಮತ್ತು ಅರಮನೆಗಳ ನಡುವೆ ಹುಟ್ಟಿದ ವಿರಸ ಮತ್ತು ಆ ಕಾರಣದಿಂದ ಮಠಾಧೀಶರು ಪೀಠತ್ಯಾಗ ಮಾಡಿದ ಪ್ರಕರಣಗಳು ಮತ್ತೊಂದು ಲೋಕದ ದರ್ಶನ ಮಾಡಿಸುತ್ತವೆ"[೧೦೫] ಎಂಬ ಎಚ್.ಎಸ್.ಗೋಪಾಲರಾವ್ ಅವರ ಶೋಧನೆ ಸೂಕ್ತವಾದುದ್ದಾಗಿದೆ.

ದುರ್ಗದ ಪ್ರಧಾನಿ ಕಳ್ಳಿ ನರಸಪ್ಪಯ್ಯ ಅವರ ಭಾವಡಿಯು ಹೈದರಾಲಿಯ ಸಂಚಿನ ಕಾರಸ್ಥಾನವಾಯಿತೆಂಬ ವಿವಾದದಲ್ಲಿ ನರಸಪ್ಪಯ್ಯ ತನ್ನ ಪ್ರಧಾನಿ ಸ್ಥಾನಕ್ಕೆ ರಾಜೀನಾಮೆ

ಕೊಟ್ಟನು. ಈ ತೆರವಾದ ಸ್ಥಾನಕ್ಕೆ ನಾಯಕನು ತನ್ನ ಸಹೋದರ ಪರಶುರಾಮನಾಯಕನನ್ನೇ ಪ್ರಧಾನಿಯನ್ನಾಗಿ ನೇಮಿಸಿದನು. ಈ ಕಾರಣದಿಂದ ನರಸಪ್ಪಯ್ಯ ತನ್ನ ಹೆಂಡತಿ ಭಾಗೀರಥಿ ಬಾಯಿಯೊಂದಿಗೆ ತೀರ್ಥಯಾತ್ರೆ ಹೊರಟ ವಿಷಯ ತಿಳಿದ ನಾಯಕನು ಪಶ್ಚಾತ್ತಾಪಡುತ್ತಾನೆ. ಆದಾಗ್ಯೂ ಇರುವವರೆಗೂ ನಾವು ಚಿಂತಿಸುವುದಿಲ್ಲ' ಎಂದು ಸಮಾಧಾನ ಪಟ್ಟುಕೊಳ್ಳುವ ಪ್ರಸಂಗಗಳಲ್ಲಿ ರಾಜಕೀಯ ರೇಜಿಗೆಯನ್ನು ಕಾಣುತ್ತೇವೆ. ಮದಕರಿನಾಯಕನಿಗೆ ಪುತ್ರೋತ್ಸವವಾದ ಸಂದರ್ಭದಲ್ಲೇ ಪುಣೆಯ ಪೇಶ್ವೆ ಮಾಧವರಾಯರಿಂದ ಪತ್ರವೊಂದು ಬರುತ್ತದೆ. ಪೇಶ್ವೆಯ ಈ ಪತ್ರವು ಮದಕರಿನಾಯಕನ ಸಹಾಯ ಬಯಸಿ, ಬರೆದ ಪತ್ರವಾಗಿರುತ್ತದೆ. ಈ ಕಾರಣದಿಂದ ನಾಯಕನು ಮರಾಠರ ಪರ ನಿಲ್ಲಲು ನಿರ್ಧಾರ ಕೈಗೊಳ್ಳುತ್ತಾನೆ. ಆದರೆ ಈ ವಿಚಾರ ಪ್ರಧಾನಿ ನರಸಪ್ಪಯ್ಯನಿಗೆ ಹಿಡಿಸುವುದಿಲ್ಲ. ಇದರಿಂದಾಗಿ ಇಬ್ಬರಲ್ಲೂ ಮನಸ್ತಾಪ ಉಂಟಾಗುತ್ತದೆ. ಮದಕರಿನಾಯಕನ ಈ ನಿರ್ಧಾರದಂತೆ ಪೇಶ್ವೆ ಮಾಧವರಾಯನ ಕರೆಯ ಮೇರೆಗೆ ಮರಾಠರ ಪರ ಯುದ್ಧಕ್ಕೆ ಸನ್ನದ್ಧನಾಗುವ ಮದಕರಿನಾಯಕನು, ಹೈದರಲಿಯ ವಶದಲ್ಲಿದ್ದ ಮರಾಠರ ನಿಜಗಲ್ಲು ಕೋಟೆಯನ್ನು ಗೆದ್ದುಕೊಡುತ್ತಾನೆ. ಇದರಿಂದ ಪೇಶ್ವೆಯು "ಬೆಳ್ಳಿ ಪಲ್ಲಕ್ಕಿಯಲ್ಲಿ ನಾಯಕರನ್ನು ಕೂರಿಸಿ, ವೀರವಾದ್ಯಗಳೊಂದಿಗೆ ಅವರು ನಮ್ಮಿಂದ ಪಡೆದ ಚಿತ್ರದುರ್ಗದ ಗಂಡುಕೊಟ್ಟ ಮಾತಿಗೆ ತಪ್ಪದ ಗಂಡ ಎಪ್ಪತ್ತೇಳು ಪಾಳೆಯಗಾರರ ಮಿಂಡ' ಎಂಬ ಬಿರುದನ್ನು ಪಾಳೆಯದಲ್ಲೆಲ್ಲಾ ಮೊಳಗಿಸಿ ಕರೆತನ್ನಿ"[೧೦೬] ಎಂದು ಅಪ್ಪಣೆ ಮಾಡಿಸುತ್ತಾನೆ. ಇದನ್ನು ಇತರ ಪಾಳೆಯಗಾರರಿಗೆ ಸಹಿಸಲಾಗುವುದಿಲ್ಲ.

ಶ್ರೀರಂಗಪಟ್ಟಣದಿಂದ ಬಂದ ಹೈದರಾಲಿಯ ಪತ್ರದ ಬಗ್ಗೆ ಚರ್ಚಿಸಲು ಸೇರಿದ ಸಭೆ ಹೈದರಾಲಿಯನ್ನು ಮದಕರಿನಾಯಕನು ಭೇಟಿಯಾಗುವುದು ಬೇಡ ಎಂಬ ತೀರ್ಮಾನಕ್ಕೆ ಬಂದಿತು. ಇದಕ್ಕೆ ಹೈದರಾಲಿಯ ಕುತಂತ್ರಗಾರಿಕೆಯನ್ನು ಅರಿತಿದ್ದ ಮದಕರಿನಾಯಕನು ಅವನ ಸ್ನೇಹದ ನಾಟಕದಿಂದ ದೂರವಿರಲು ಆಲೋಚಿಸುತ್ತಾನೆ. ಇಷ್ಟಾದಾಗ್ಯೂ ಹೈದರಾಲಿಯು ಮದಕರಿನಾಯಕನ ಮೇಲೆ ವಕ್ರದೃಷ್ಟಿಯನ್ನು ಬೀರುತ್ತಲೇ ಇರುತ್ತಾನೆ. ಹೇಗಾದರೂ ಮಾಡಿ ನಾಯಕನನ್ನು ಮುತ್ತಲೇಬೇಕೆಂಬ ಆಲೋಚನೆ ಆತನದಾಗಿದೆ. ಇಂತಹ ಸುಸಂದರ್ಭಕ್ಕಾಗಿ ಕಾಯುವ ಹೈದರಾಲಿಯು ಗೋಗ್ರಹಣದ ನೆಪವೊಡ್ಡಿ ಮತ್ತೋಡು ಪಾಳೆಯಗಾರ ಹಾಲಪ್ಪನಾಯಕನ ಮೂಲಕ ಕುಟಿಲೋಪಾಯದ ತಂತ್ರವನ್ನು ಅನುಸರಿಸುತ್ತಾನೆ. ಈ ಕುರಿತು ದುರ್ಗದ ಕೊತ್ವಾಲ ಭಾವಡಿಯ ಕಾಶಣ್ಣ ನಾಯಕ ಮದಕರಿನಾಯಕನಿಗೆ ವಿವರಣೆ ಕೊಡುತ್ತಾನೆ. "ಈ ಗೋಗ್ರಹಣ ಬರೀ ಒಂದು ನೆಪ ತಮ್ಮನ್ನು ದುರ್ಗದಿಂದ ಹೊರಬರುವಂತೆ ಮಾಡಿ, ಸೆರೆಹಿಡಿಯಲು, ಹಾಲಪ್ಪನಾಯಕ ಹೈದರಾಲಿಯವರೊಂದಿಗೆ ಹೂಡಿದ ತಂತ್ರ ತಮ್ಮನ್ನು ಹೆಸರೆತ್ತಿ ಕೆಣಕಿದುದೂ ಆ ತಂತ್ರದ ಒಂದು ಭಾಗ. ಈ ಯುದ್ಧದಲ್ಲಿ ಮತ್ತೋಡನಾಯಕ ಬರೀ ನೆಪಮಾತ್ರದ ಗೊಂಬೆ.

ಅವರಿಗೆ ಬೇಕಾದದ್ದು ನಮ್ಮ ಹಸುವಲ್ಲ ನೀವು. ನಿಮ್ಮನ್ನು ದುರ್ಗದಿಂದ ಹೊರಹೊರಡಿಸಲೆಂದೇ ಈ ಕೆಣಕುಮಾತಿನ ಸಂಚು. ನೀವು ಮತ್ತೋಡುನಾಯಕನ ಅಲ್ಲಬಲ ಮುರಿಯಲು ಹೊರಟಾಗ, ನಿಮ್ಮ ಮೇಲೆ ಆಕಸ್ಮಿಕ ದಾಳಿ, ಸೇನೆಯನ್ನು ಸೋಲಿಸಿ, ನಿಮ್ಮನ್ನು ಸೆರೆ ಹಿಡಿಯಲು ಹೈದರಾಲಿಯವರು ಮೊಕ್ದುಂಸಾಹೇಬ್, ಮೋಹಿಯುಬ್ದೀನ್ ಸಾಹೇಬ್ ಅವರೊಂದಿಗೆ ಹತ್ತುಸಾವಿರ ಫೌಜು ಕಳಿಸಿದ್ದಾರಂತೆ. ಆದ್ದರಿಂದ ತಾವು ಈ ಬಲೆಯೊಳಗೆ ಬೀಳಬಾರದು"[೧೦೭] ಎಂದು ಕಾಶಣ್ಣ ನಾಯಕನು ಹೇಳಿದರೂ ಕೇಳದ ಮದಕರಿನಾಯಕ ಮತ್ತೋಡು ಸೇನೆಯ ವಿರುದ್ಧ ಹೋರಾಡಿ, ಹಾಲಪ್ಪನಾಯಕನನ್ನು ಸೋಲಿಸುತ್ತಾನೆ. ಇತ್ತ ದುರ್ಗದ ಸೇನೆ ಮೊಕ್ದುಂಸಾಹೇಬ್, ಮೊಹಿಯುದ್ದೀನ್ ಸಾಹೇಬರ್‌ನ್ನು ಕೈ ಸೆರೆಹಿಡಿದು ಬಂಧಿಸುತ್ತದೆ. ಈ ಒಂದು ಸೋಲಿನಿಂದ ಹೈದರಾಲಿಯು ಮತ್ತಷ್ಟು ಕಂಗೆಡುತ್ತಾನೆ. ದುರ್ಗದ ಮೇಲೆ ದ್ವೇಷಕಾರುತ್ತಲೇ ಹೋಗುತ್ತಾನೆ. "ಹೆಚ್ಚು ಮಾತು ಬೇಡ. ನೂರು ಲಡಾಯಿ ನೋಡಿರೋ ನುರಿತ ಸರ್ದಾರರು ನೀವು. ಇಂಥ ಎಷ್ಟೋ ಕಿಲ್ಲೆ ನಮ್ಮ ಕಾಲಿಗೆ ಬಿದ್ದಿವೆ. ಗುತ್ತಿ, ನಂದಿ, ಮಧುಗಿರಿ ಕೋಟೆಗಳ ಮುಂದೆ ಇದ್ಯಾವ ಕೋಟೆ? ನಾವು ಹೇಳುವುದಿಷ್ಟೆ ಅಲಬತ್ ದುರ್ಗದ ಮೇಲೆ ನಮ್ಮ ಝುಂಡಾ ಉಡಾಯಿಸಬೇಕು. ಚಂದಾ ಯಾ ಮುರ್ದಾ ಮದಕರಿನಾಯಕ್ ಮೇಲೆ ಪಾವ್ ಪರ್ ಪಡ್‌ನಾ. ಅದು ಬಿಟ್ಟು ದುಸರಾ ಮಾತಿಲ್ಲ"[೧೦೮] ಎಂದು ಹೈದರಾಲಿಯು ತನ್ನ ಸರ್ದಾರರಿಗೆ ಸವಾಲೆಸೆಯುವ ರೀತಿಯಲ್ಲಿ ಖಡಕ್ ಆಜ್ಞೆಯನ್ನು ನೀಡುತ್ತಾನೆ. ಈ ಹಿನ್ನೆಲೆಯಲ್ಲಿ ಹೈದರಲಿಯು ಹಲವು ರೀತಿಯ ಕುಟಿಲ ತಂತ್ರೋಪಾಯಗಳನ್ನು ಅನುಸರಿಸುತ್ತಾನೆ.

ಕೊನೆಗೂ ಹೈದರಾಲಿಯು ದುರ್ಗದ ವಿರುದ್ಧ ಯುದ್ಧವನ್ನು ಘೋಷಿಸುತ್ತಾನೆ. ಪ್ರಾರಂಭದಲ್ಲಿ ದುರ್ಗದ ಸೇನೆಯು ಮೇಲುಗೈ ಸಾಧಿಸುತ್ತದೆ. ಈ ಕಾರಣದಿಂದ ಹೈದರಾಲಿಗೆ ಪೂರ್ಣಯ್ಯನು ಸಂಧಾನದ ಸಲಹೆಯನ್ನು ನೀಡುತ್ತಾನೆ. ಇದನ್ನು ಅನೇಕರು ವಿರೋಧಿಸುತ್ತಾರೆ. ಕೊನೆಗೆ ಅಳೆದು ತೂಗಿ ಚಿಂತಿಸುವ ಹೈದರಾಲಿಯು ಪೂರ್ಣಯ್ಯನ ಸಲಹೆಯನ್ನು ಒಪ್ಪುತ್ತಾನೆ. "ನೀವು ಹೇಳಿದ್ದು ನಿಜ. ಪೂರ್ಣಯ್ಯ ಈ ಲವಂಡೀಕೆ ಮದಕರಿನಾಯಕ ನಮ್ಮನ್ನು ಸತಾಯಿಸಿದಷ್ಟು ಬೇರೆ ಯಾರೂ ಸತಾಯಿಸಿಲ್ಲ, ಎರಡು ದಿನ ಹೋಗಲಿ, ಎರಡು ಸಾವಿರ ಸಾಯಲಿ – ಈ ನಾಯಕನ ಕಥೆ ಮುಗಿಸಿಯೇ ಮುಂದಿನ ಮಾತು. ವಕೀಲರನ್ನು ಕಳಿಸಿ, ಕಾಗದ ಬರೆಸಿ, ಆದರಿಷ್ಟೇ ಅದು ಬೇಡಿಕೆಯಲ್ಲ, ಎಚ್ಚರಿಕೆಯಾಗಬೇಕು. ಅವರು ಒಪ್ಪಬಾರದು, ಬಿಡಬಾರದು – ಹಾಗಿರಬೇಕು. ನಮ್ಮ ಇಜ್ಜತ್‌ಗೂ ಏನೂ ಲೋಪ ಬರಕೂಡದು. ಹಾಗಿರಬೇಕು ಕಾಗದ. ಹಾಗೆ ಜಬರ್‌ದಸ್ತಾಗಿ ಕಾಗದ ಬರೆಸಿ, ಸರಿಯಾಗಿ ಮಾತನಾಡುವಂಥವರನ್ನು ಕಳಿಸಿ"[೧೦೯] ಎಂದು ಪೂರ್ಣಯ್ಯನ ಮಾತಿಗನುಗುಣವಾಗಿ ಹೈದರಲಿಯು ಪತ್ರ ಬರೆಸಿ, ದುರ್ಗಕ್ಕೆ ವಕೀಲರನ್ನು ಕಳಿಸಲು

ಮುಂದಾಗುತ್ತಾನೆ. ಈ ಪತ್ರದಲ್ಲಿ ನಾಯಕನ ಸೋದರ ಪರಶುರಾಮನಾಯಕನನ್ನು ತಮ್ಮ ಸೇವೆಗೆ ಕಳಿಸಿ ಹಾಗೂ ೬ ಲಕ್ಷ ವರಹ ಖರ್ಚನ್ನು ಕೊಡಬೇಕೆಂದು ನವಾಬನು ಬೇಡಿಕೆಯಿಡುತ್ತಾನೆ. ಆದರೆ ಈ ಬೇಡಿಕೆಯನ್ನು ಮದಕರಿನಾಯಕ ನಿರಾಕರಿಸುತ್ತಾನೆ.

'ಆದದ್ದಾಗಲಿ ದುರ್ಗವನ್ನು ಗೆಲ್ಲಲೇಬೇಕು' ಎಂಬ ಹಟತೊಟ್ಟ ಹೈದರಲಿಯು ದುರ್ಗದ ಮೇಲೆ ಮತ್ತೆ ಮತ್ತೆ ದಾಳಿ ನಡೆಸುತ್ತಲೇ ಇರುತ್ತಾನೆ. ಈ ಮಧ್ಯೆ ಉಚ್ಚಂಗಮ್ಮನ ಹೊಂಡದಲ್ಲಿ ನಬಾಬರಿಗೆ ಮತ್ತು ನಾಯಕರಿಗೆ ಘೋರ ಕಾಳಗ ನಡೆಯುತ್ತದೆ. ಈ ಸಮರದಲ್ಲೂ ಮದಕರಿನಾಯಕ ಜಯಸಾಧಿಸುತ್ತಾನೆ. ಆದರೆ ಈ ಸಮಯದಲ್ಲಿ ವಾಮಮಾರ್ಗದ ಮೂಲಕ ದಿವಾನ್ ಪೂರ್ಣಯ್ಯ, ರಾಯದುರ್ಗದ ಮತ್ತು ಹರಪನಹಳ್ಳಿಯ ಕಡೆಯ ಹತ್ತು ಜನರನ್ನು ದುರ್ಗದ ಒಳಗೆ ನುಸುಳುವಂತೆ ಮಾಡುತ್ತಾನೆ. ಈ ಸಂದರ್ಭದಲ್ಲಿ ದುರ್ಗದಲ್ಲಿ ಬಿಟ್ಟ ಬಿರುಕೇ ಮುಂದೆ ಕಂಟಕವಾಗುತ್ತದೆ. ಯುದ್ಧ ಭಯಾನಕತೆಯಲ್ಲಿ ಶ್ರೀಸಾಮಾನ್ಯ ಜನರು ನರಳುವಂತಹ ಪರಿಸ್ಥಿತಿ ಉಂಟಾಗುತ್ತದೆ. ಇಂತಹ ಹೃದಯವಿದ್ರಾವಕ ದೃಶ್ಯಾವಳಿಗಳನ್ನು ತ.ರಾ.ಸು ಅವರು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಸ್ವತ: ಮದಕರಿನಾಯಕನೇ ಕಣ್ಣಾರೆ ಕಂಡು ಮರಗುವ, ತಾನು ಅವರ ನೋವಿನಲ್ಲಿ ಒಂದಾಗುವ ರೀತಿಯಲ್ಲಿ ಅವನ ವ್ಯಕ್ತಿತ್ವ ಚಿತ್ರಣವನ್ನು ಕೊಡುತ್ತಾರೆ.

ಮರಾಠರ ಸೇನಾ ನೆರವನ್ನೇ ನಂಬಿಕೊಂಡು ಕಾಲಹರಣ ಮಾಡುತ್ತಿದ್ದ ಮದಕರಿನಾಯಕನು, ಕ್ಷೀಣಿಸಿದ ತನ್ನ ಸೇನಾಬಲಕ್ಕೆ ಅದುವೇ ಪೂರಕ ಶಕ್ತಿಯೆಂದು ಭಾವಿಸಿರುತ್ತಾನೆ. ಈ ಕಾರಣದಿಂದಾಗಿ ಹೈದರಾಲಿಯು ಮರಾಠರ ಸೇನೆ ಮದಕರಿನಾಯಕನ ನೆರವಿಗೆ ಬರುವ ಸಂದರ್ಭದಲ್ಲಿ ಮದಕರಿನಾಯಕನೊಂದಿಗೆ ಸಂಧಾನದ ನೆಪವೊಡ್ಡಿ ಮರಾಠಿಗರಿಗೆ ನಿರಾಶೆಗೊಳಿಸಬೇಕೆಂಬ ಸಂಚನ್ನು ರೂಪಿಸಲು ಮುಂದಾಗುತ್ತಾನೆ. ಅದರಂತೆ ನವಾಬನು ದುರ್ಗಕ್ಕೆ ಸಂಧಾನ ಪತ್ರ ರವಾಣಿಸುತ್ತಾನೆ. ಈ ಸಂಧಾನಕ್ಕೆ ದುರ್ಗದವರು ಒಪ್ಪಿಕೊಳ್ಳುತ್ತಾರೆ. ಅಷ್ಟೇಕೆ ಮೊದಲ ಕಂತಿನಲ್ಲಿ ಮೂರು ಲಕ್ಷ ಅನಂತರ ಮೂರು ಲಕ್ಷ ಕೊಡುವಂತೆ ಒಪ್ಪಂದವಾಗುತ್ತದೆ.

ಇಷ್ಟಾದಾಗ್ಯೂ ಹೈದರಾಲಿಯ ಕುತಂತ್ರಗಳು ಮುಂದುವರೆಯುತ್ತವೆ. ಹೈದರಾಲಿಯು ದುರ್ಗದವರೊಂದಿಗೆ ಕೊಟ್ಟ ಮಾತಿಗೆ ತಪ್ಪಿ ನಡೆಯುತ್ತಾನೆ. ಮರಾಠರ ಸೇನೆ ದುರ್ಗದವರಿಗೆ ಸಹಕರಿಸದಂತೆ ತಡೆವೊಡ್ಡುತ್ತಾನೆ. ಅದನ್ನು ದಾರಿಮಧ್ಯದಲ್ಲೇ ತಡೆಯುವ ತಂತ್ರಗಳನ್ನು ರೂಪಿಸುತ್ತಾನೆ. ಮತ್ತೆ ದುರ್ಗದ ಮೇಲೆ ದಾಳಿ ಮಾಡಿ, ದುರ್ಗದ ಬಯಲನ್ನು ಬರಿದು ಮಾಡುತ್ತಾನೆ. ಅಷ್ಟಲ್ಲದೇ ಉಳಿದ ಕಂತಿನ ಹಣ ಮತ್ತು ಒತ್ತೆಯಾಳಾಗಿ ಪರಶುರಾಮಪ್ಪನವರನ್ನು ಕಳುಹಿಸಿಕೊಡುವಂತೆ ಮದಕರಿನಾಯಕನ ಮೇಲೆ ಒತ್ತಡಹಾಕಲಾಗುತ್ತದೆ. ಇದೇ ಸಂದರ್ಭದಲ್ಲಿ ಮರಾಠಸೇನೆಯು ದುರ್ಗದ ನೆರವಿಗೆ ಬರುವ

ಸುದ್ದಿಯು ಬರುತ್ತದೆ. ಇದರಿಂದ ಮದಕರಿನಾಯಕನಿಗೆ ಮರುಜೀವ ಬಂದಂತಹ ಅನುಭವವಾಗುತ್ತದೆ. ಈ ಕಾರಣದಿಂದಾಗಿ ತನ್ನ ತಮ್ಮ ಪರಶುರಾಮಪ್ಪನನ್ನು ನವಾಬರ ಹತ್ತಿರ ಕಳುಹಿಸುವ ನಿರ್ಧಾರದಿಂದ ಹಿಂದೆಸರಿಯುತ್ತಾನೆ. "ಮದಕರಿನಾಯಕ ಮರಾಠರ ನೆರವನ್ನು ನಿರೀಕ್ಷಿಸುತ್ತಿದ್ದರೆ, ನಾಯಕನಿಗೆ ಬರುವ ಮರಾಠರ ನೆರವನ್ನು ತಡೆಯಲು ಮತ್ತು ತಪ್ಪಿಸಲು ಹೈದರಾಲಿ ನಡೆಸುವ ತಂತ್ರಗಳು, ಯುದ್ಧದ ಸಮಯದಲ್ಲಿ ಎದುರಾಗುವ ಆಹಾರ ಮತ್ತು ನೀರಿನ ಸಮಸ್ಯೆಗಳು ಇತ್ಯಾದಿಗಳ ಬಗ್ಗೆ ತ.ರಾ.ಸು. ಸಾಕಷ್ಟು ವಿವರವಾಗಿ ತಿಳಿಸಿದ್ದಾರೆ. ಯುದ್ಧದ ಸಮಯದಲ್ಲಿ ಚಿತ್ರದುರ್ಗದ ವರ್ತಕರು ಮತ್ತು ಗಣ್ಯರು ನೆರವು ನೀಡುವ ಪರಿ ಅಚ್ಚರಿಗೆ ಕಾರಣವಾಗುತ್ತದೆ. ಆಕಸ್ಮಾತ್ತಾಗಿ ಕಾಣಿಸಿಕೊಂಡ ಕಳ್ಳಿನರಸಪ್ಪಯ್ಯನ ಹೆಸರಿಗೆ ಬರುವ ಪತ್ರಗಳು ಸೃಷ್ಟಿಸುವ ಗೊಂದಲ ಇತ್ಯಾದಿಗಳು ಸಂಭವಿಸಲಿರುವ ದುರಂತದ ಮುನ್ಸೂಚನೆಗಳಂತೆ ಕಾಣುತ್ತವೆ"[೧೧೦] ಎಂಬ ಎಚ್.ಎಸ್.ಗೋಪಾಲರಾವರ ಮಾತುಗಳು ಗಮನಾರ್ಹವಾಗಿವೆ. ಹೈದರಾಲಿಗೆ ರಾಜ್ಯದಾಹ, ಮರಾಠರಿಗೆ ಹಣದ ವ್ಯಾಮೋಹ ಹೀಗೆ ಇವರಿಬ್ಬರ ಈ ಪರಿಯ ಮನೋಧರ್ಮದಿಂದಾಗಿ ದುರ್ಗದಲ್ಲಿ ಗೊಂದಲದ ವಾತಾವರಣ ನಿರ್ಮಾಣವಾಗುತ್ತದೆ.

ಕೊನೆಗೆ ಹೈದರಾಲಿಯ ನೆರವಿಗಾಗಿ ದುರ್ಗವನ್ನು ಸೇರಿದ ಸಂಚುಕೋರರು ಹಾಗೂ ಹೈದರಾಲಿಯು ಒಡ್ಡಿದ ಹಣದ ಆಮೀಷಕ್ಕೆ ಒಳಗಾದ ಮರಾಠರ ಧೋರಣೆಯಿಂದಾಗಿ ದುರ್ಗದ ಮೇಲೆ ಮುತ್ತಿಗೆ ಹಾಕಲು ಹೈದರಾಲಿಗೆ ಅನುಕೂಲವಾಗುತ್ತದೆ. ಅಷ್ಟಲ್ಲದೇ ದುರ್ಗದ ಸೇನೆಯಲ್ಲಿನ ಮುಸಲ್ಮಾನರನ್ನು ಧರ್ಮದ ಹೆಸರಿನಲ್ಲಿ ತನ್ನತ್ತ ಸೆಳೆಯುವ ಕಾರ್ಯವನ್ನು ಹೈದರಾಲಿ ಮಾಡುತ್ತಾನೆ. ಈ ಎಲ್ಲ ಕುಟಿಲ ತಂತ್ರಗಳಿಂದ ದುರ್ಗದ ಸೇನಾಬಲ ಕ್ಷೀಣಿಸುವಂತೆ ಮಾಡುವ ಹೈದರಾಲಿಯು ಅದರಲ್ಲಿ ಸಫಲನಾಗುತ್ತಾನೆ. ಆಗ ತನ್ನ ಆಗಾಧ ಸೇನಾಬಲದೊಂದಿಗೆ ದುರ್ಗದ ಮೇಲೆ ಯುದ್ಧ ಸಾರುತ್ತಾನೆ. ಈ ಒಂದು ಯುದ್ಧದಲ್ಲಿ ಅತ್ಯಂತ ದಿಟ್ಟತನದಿಂದಲೇ ಹೋರಾಡುವ ಮದಕರಿನಾಯಕನು ದುರ್ಗದ ಉಳಿವಿಗಾಗಿ ತನ್ನ ದೇಹದ ಒಂದೊಂದು ತೊಟ್ಟು ರಕ್ತವನ್ನು ಹರಿಯಬಿಟ್ಟು, ಕೊನೆವುಸಿರಿನ ತನಕ ಹೋರಾಡುತ್ತಾನೆ. ಅದರ ಚಿತ್ರಣವನ್ನು ತ.ರಾ.ಸು. ಅವರು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾರೆ. "ರಣಾವೇಶ ಮೈತುಂಬಿದ ಮದಕರಿನಾಯಕ, ಕೇಳಿದ ಎದೆ ಬಿರಿವಂತೆ ರಣಘೋಷ ಕೂಗುತ್ತಾ, ಕೈಯಲ್ಲಿ ಹಿಡಿದ ಪರಿಘಾಯುಧವನ್ನು ಚಕ್ರಾಕಾರವಾಗಿ ಬೀಸಿ ನಾಲ್ಕು ಕಡೆಯಿಂದಲೂ ತನ್ನತ್ತ ಬರುತ್ತಿದ್ದ ಶತ್ರು ಸೈನಿಕರನ್ನು ಕುದರಿಕಡಿಯುತ್ತಾ, ಮೈಮೇಲೆ ಬಿದ್ದ ಏಟಿನ ಲಕ್ಷ್ಯವೂ ಇಲ್ಲದೆ ಹತ್ತಿರ ಬಂದವರ ಚಂಡಾಡುತ್ತ, ಕೈಕಾಲು ಕತ್ತರಿಸುತ್ತ, ಹೊಳೆಯ ನೆತ್ತರುಗಂಪಿನ ರಣಭೈರವನಂತೆ ಮುನ್ನುಗ್ಗುತ್ತಿದ್ದ, ಮೈಗೆಪೆಟ್ಟು ಬಿದ್ದಷ್ಟು ಆತನ ರಣೋತ್ಸಾಹ ಮತ್ತಷ್ಟು ಉಗ್ರವಾಗುತ್ತಿತ್ತು. ಹಣೆಯ ಮೇಲಾದ ಗಾಯಗಳಿಂದ ಹರಿದ

ತನ್ನ ನೆತ್ತರನ್ನೇ ಕುಡಿದು ರಾಣಾಯಾಸವನ್ನು ಪರಿಹರಿಸಿಕೊಳ್ಳುತ್ತಾ, ಸುತ್ತಲ ಆಕ್ರಂದನ ಧ್ವನಿಗೆ ಕಿವುಡಾಗಿ, ನೆತ್ತರು ಸೋರಿ ಕುರುಡಾಗಿ ಪ್ರಕ್ಷುಬ್ಧಕಾಲಯಮನ ಕೋಣದಂತೆ, ಹತ್ತಾರು ಗುಂಡೇಟು ತಿಂದ ಹೆಬ್ಬುಲಿಯಂತೆ ಏಟು ಬಿದ್ದ ಕಡೆ ನುಗ್ಗಿ ಕಡಿಯುತ್ತಾ ಚಂಡಮಾರುತದಂತೆ ಭೋರ್ಗರೆಯುತ್ತಾ ಮುನ್ನುಗ್ಗಿದ"[೧೧೧] ಎಂಬಂತೆ ಮದಕರಿನಾಯಕನ ವೀರಾವೇಶದ ಚಿತ್ರಣಕೊಡುವ ತ.ರಾ.ಸು. ಅವರು ಅದರೊಂದಿಗೆ ಯುದ್ಧದ ಭಯಂಕರತೆಯನ್ನು ಭಯಾನಕವಾಗಿಯೇ ಚಿತ್ರಿಸುವುದು ವಿಶೇಷವಾಗಿ ಕಾಣುತ್ತದೆ. ತನ್ನ ಮೈಯಲ್ಲಿ ಒಂದು ತೊಟ್ಟು ರಕ್ತ ಇರುವವರೆಗೂ ದುರ್ಗದ ನೆಲಕ್ಕಾಗಿ ಹೋರಾಡುವ ಮದಕರಿನಾಯಕನು ರಣರಂಗದಲ್ಲಿ ವೀರಮರಣವನ್ನು ಅಪ್ಪುತ್ತಾನೆ. ಅವನ ಸಾವು ನಿಜವಾದ ವೀರನ ಸಾವಾಗಿ ಕಾಣುತ್ತದೆ. ಯಾಕೆಂದರೆ, ಅವನಲ್ಲಿ ಯಾವುದೇ ರೀತಿಯ ಕುಟಿಲತೆ ಇರಲಿಲ್ಲ. ತನ್ನ ವೀರತ್ವದಿಂದಲೇ ಕೊನೆತನಕ ಹೋರಾಡಿ, ದುರ್ಗಾಸ್ತಮಾನಕ್ಕೆ ಜೀವಂತ ಸಾಕ್ಷಿಯಾಗುತ್ತಾನೆ.

"ಐತಿಹಾಸಿಕ ದಾಖಲೆಗಳಿಗೂ, ತ.ರಾ.ಸು. ಕಾದಂಬರಿ ಮೂಲಕ ತಿಳಿಸುವ ಕಥೆಗೂ ಮೂಲಭೂತವಾಗಿ ಕೆಲವು ವ್ಯತ್ಯಾಸಗಳಿವೆ. ಕಳ್ಳಿ ನರಸಪ್ಪಯ್ಯನ ಪಾತ್ರಕ್ಕೆ ಕಾದಂಬರಿಯಲ್ಲಿ ದೊರೆತಿರುವಷ್ಟು ಪ್ರಾಮುಖ್ಯ ಐತಿಹಾಸಿಕ ದಾಖಲೆಗಳಲ್ಲಿಲ್ಲ. ಐತಿಹಾಸಿಕ ದಾಖಲೆಗಳ ಪ್ರಕಾರ ಮದಕರಿನಾಯಕ ಯುದ್ಧಭೂಮಿಯಲ್ಲಿ ಸಾಯಲಿಲ್ಲ. ಬದಲಿಗೆ ಸೆರೆಹಿಡಿಯಲ್ಪಟ್ಟ, ಸೆರೆಯಿಂದ ತಪ್ಪಿಸಿಕೊಳ್ಳುವ ಪ್ರಯತ್ನವನ್ನೂ ಮಾಡಿದ. ಆದರೆ ಎಲ್ಲ ವೈಫಲ್ಯಗಳಿಂದ ಸಾವನ್ನು ಎದುರಿಸಬೇಕಾಯಿತು. ದುರ್ಗದ ಬಗ್ಗೆ ಅಭಿಮಾನ ಇರುವ ಯಾವ ವ್ಯಕ್ತಿಗೂ ತಮ್ಮ ಮದಕರಿನಾಯಕನ ಸಾವು ಹಾಗಾಗುವುದನ್ನು ಊಹಿಸಿಕೊಳ್ಳಲು ಸಾಧ್ಯವಿಲ್ಲ. ಮದಕರಿನಾಯಕನ ಸಾವು ವೀರನಿಗೆ ತಕ್ಕಂತೆಯೇ ಇರಬೇಕು ಎಂಬುದು ದುರ್ಗದ ಬಹುತೇಕ ಜನರ ನಿರೀಕ್ಷೆ. ಅಂತಹ ಒಬ್ಬ ಧೀರೋದಾತ್ತನಾಯಕ ಬಂಧಿಯಾಗಿ ಸಾಯುವುದನ್ನು ತ.ರಾ.ಸು. ಅವರ ಮನಸ್ಸು ಒಪ್ಪಲು ತಯಾರಿರಲಿಲ್ಲ ಎನಿಸುತ್ತದೆ. ಆದ್ದರಿಂದಲೂ ತ.ರಾ.ಸು. ಐತಿಹಾಸಿಕ ದಾಖಲೆಗಳನ್ನು ಆಧರಿಸಿದರೂ, ತಮ್ಮ ಮತ್ತು ದುರ್ಗದ ಜನತೆಯ ಮನದಾಳದಲ್ಲಿ ಬೇರು ಬಿಟ್ಟಿರುವ ಮದಕರಿನಾಯಕನ ವ್ಯಕ್ತಿತ್ವಕ್ಕೆ ಯಾವುದೇ ದಕ್ಕೆಯಾಗದಂತೆ ಕಾದಂಬರಿಯ ಅಂತ್ಯವನ್ನು ಸೃಷ್ಟಿಸಿದ್ದಾರೆ"[೧೧೨] ಎಂಬ ಎಚ್.ಎಸ್.ಗೋಪಾಲರಾವ್ ಅವರ ಶೋಧನೆಯಲ್ಲಿ ಸತ್ಯವಿದೆ. ಅದೇನಿದ್ದರೂ ತ.ರಾ.ಸು ಅವರು ಐತಿಹಾಸಿಕ ವಸ್ತುವನ್ನು ಆಧರಿಸಿ ಈ ಕಾದಂಬರಿಯನ್ನು ಬರೆದಿದ್ದರೂ ಕೆಲ ಪಾತ್ರ ಮತ್ತು ಸನ್ನಿವೇಶಗಳಲ್ಲಿ ಕೆಲ ಮಾರ್ಪಾಡುಗಳನ್ನು ಮಾಡಿಕೊಂಡು ಕಾದಂಬರಿಯನ್ನು ರಚಿಸಿದ್ದಾರೆ. ಅವರ ಸೃಜನಾತ್ಮಕ ಕಲೆ ಈ ಕಾದಂಬರಿಯಲ್ಲಿ ವಿಶೇಷವಾಗಿ ಕಾರ್ಯನಿರ್ವಹಿಸಿದೆ. ದುರ್ಗದ ಮೇಲೆ ಮತ್ತು ವೀರಮದಕರಿನಾಯಕನ ಮೇಲಿರುವ ಅವರ ವಿಶೇಷ ಅಭಿಮಾನ ಕಾದಂಬರಿವುದ್ದಕ್ಕೂ ಗೋಚರಿಸುವಂತಹದ್ದಾಗಿದೆ.

ಹೀಗೆ ತ.ರಾ.ಸು ಅವರು ಕರ್ನಾಟಕದ ಅರಸು ಮನೆತನಗಳು ಮತ್ತು ದುರ್ಗದ ಪಾಳೆಗಾರರ ಐತಿಹಾಸಿಕ ಘಟನೆಗಳನ್ನು ಆಧರಿಸಿ ಕಾದಂಬರಿಗಳನ್ನು ರಚಿಸಿದ್ದು ವಿಶೇಷವಾಗಿದೆ. ಈ ಹಿನ್ನೆಲೆಯಲ್ಲಿ ತ.ರಾ.ಸು. ಅವರು ಐತಿಹಾಸಿಕ ಕಾದಂಬರಿಕಾರರಲ್ಲೇ ಅಗ್ರಮಾನ್ಯರಾಗಿ ಕಾಣುತ್ತಾರೆ. ಐತಿಹಾಸಿಕ ವಸ್ತುವನ್ನು ವಾಸ್ತವಿಕ ನೆಲೆಗಟ್ಟಿನಲ್ಲಿ ಇರಿಸಿಕೊಂಡು ಚಿಂತಿಸುವಂತೆ ಮಾಡುವ ಅವರ ಬರವಣಿಗೆಯ ಶೈಲಿ ನಯನಮನೋಹರವಾಗಿದೆ.

**ಕೊನೆ ಟಿಪ್ಪಣಿಗಳು**

೧. ಎಲ್.ಎಸ್. ಶೇಷಗಿರಿರಾವ್ : ಹೊಸಗನ್ನಡ ಸಾಹಿತ್ಯ : ೧೯೮೮ :ಪುಟ : ೮೧.
೨. ಎಚ್.ಜೆ. ಲಕ್ಕಪ್ಪಗೌಡ : ಸಾಹಿತ್ಯ ಶೋಧನ : ೨೦೦೭, ಪುಟ : ೧೨೩.
೩. ಶಾ.ಮ. ಕೃಷ್ಣರಾಯ (ಸಂ.) : ತ.ರಾಸು. ಬದುಕು ಬರೆಹ : ೨೦೦೮, ಪುಟ : ೨೮೨.
೪. ಶಾ.ಮ. ಕೃಷ್ಣರಾಯ (ಸಂ.) : ತ.ರಾಸು. ಬದುಕು ಬರೆಹ:೨೦೦೮, ಪುಟ:೨೮೩
೫. ತ.ರಾಸು. ನೃಪತುಂಗ : ಮೊದಲ ಮಾತು : ೨೦೦೫.
೬. ತ.ರಾಸು. ನೃಪತುಂಗ : ೨೦೦೫ ಪುಟ : ೨೧.
೭. ತ.ರಾ.ಸು. ನೃಪತುಂಗ : ೨೦೦೫ ಪುಟ : ೨೩
೮. ತ.ರಾಸು. ನೃಪತುಂಗ : ೨೦೦೫ ಪುಟ : ೨೬
೯. ತ.ರಾಸು. ನೃಪತುಂಗ : ೨೦೦೫ ಪುಟ : ೩೨
೧೦. ತ.ರಾಸು. ನೃಪತುಂಗ : ೨೦೦೫ ಪುಟ : ೪೪-೪೫
೧೧. ತ.ರಾಸು. ನೃಪತುಂಗ : ೨೦೦೫ ಪುಟ : ೪೮
೧೨. ಶಾ.ಮಂ.ಕೃಷ್ಣರಾಯ (ಸಂ.) : ತ.ರಾಸು. ಬದುಕು ಬರೆಹ : ೨೦೦೮, ಪುಟ : ೨೯೨
೧೩. ತ.ರಾಸು. ನೃಪತುಂಗ : ೨೦೦೫ ಪುಟ : ೮೩.
೧೪. ತ.ರಾಸು. ನೃಪತುಂಗ : ೨೦೦೫ ಪುಟ : ೮೬.
೧೫. ತ.ರಾಸು. ನೃಪತುಂಗ : ೨೦೦೫ ಪುಟ : ೧೦೦
೧೬. ತ.ರಾಸು. ನೃಪತುಂಗ : ೨೦೦೫ ಪುಟ : ೧೩೩.
೧೭. ತ.ರಾಸು. ನೃಪತುಂಗ : ೨೦೦೫ ಪುಟ : ೧೩೯.
೧೮. ತ.ರಾಸು. ನೃಪತುಂಗ : ೨೦೦೫ ಪುಟ : ೧೬೩
೧೯. ತ.ರಾ.ಸು.: ಸಿಡಿಲ ಮೊಗ್ಗು: ೨೦೧೪ : ಮುನ್ನುಡಿ
೨೦. ತ.ರಾ.ಸು.: ಸಿಡಿಲ ಮೊಗ್ಗು: ೨೦೧೪ : ಪುಟ : ೯
೨೧. ನಾ. ಪ್ರಭಾಕರ್ : ತ.ರಾ.ಸು.: ೨೦೦೫ : ಪುಟ : ೬೬
೨೨. ತ.ರಾ.ಸು.: ಸಿಡಿಲ ಮೊಗ್ಗು: ೨೦೧೪ : ಪುಟ : ೩೩
೨೩. ತ.ರಾ.ಸು.: ಸಿಡಿಲ ಮೊಗ್ಗು: ೨೦೧೪ : ಪುಟ : ೩೧
೨೪. ಎಂ.ಎನ್.ಮಹೇಶ : ತ.ರಾ.ಸು. ಸಾಹಿತ್ಯ : ಒಂದು ಅಧ್ಯಯನ : ೨೦೦೯, ಪುಟ: ೯೩
೨೫. ತ.ರಾ.ಸು.: ಸಿಡಿಲ ಮೊಗ್ಗು: ೨೦೧೪ : ಪುಟ : ೫೧
೨೬. ತ.ರಾ.ಸು.: ಸಿಡಿಲ ಮೊಗ್ಗು: ೨೦೧೪ : ಪುಟ : ೧೪೨

೨೭. ತ.ರಾಸು. ಕೀರ್ತಿನಾರಾಯಣ: ೨೦೦೨, ಮೊದಲ ಮಾತು.

೨೮. ತ.ರಾಸು. ಕೀರ್ತಿನಾರಾಯಣ: ೨೦೦೨, ಪುಟ : ೨

೨೯. ತ.ರಾಸು. ಕೀರ್ತಿನಾರಾಯಣ: ೨೦೦೨, ಪುಟ : ೧೦

೩೦. ತ.ರಾಸು. ಕೀರ್ತಿನಾರಾಯಣ: ೨೦೦೨, ಪುಟ : ೧೫

೩೧. ಹಾ.ಮಾ. ನಾಯಕ : ಚಿನ್ನದ ಗರಿ : ೧೯೭೪ : ಪುಟ : ೧೩೬

೩೨. ತ.ರಾಸು. ಕೀರ್ತಿನಾರಾಯಣ: ೨೦೦೨, ಪುಟ : ೮೨

೩೩. ತ.ರಾಸು. ಕೀರ್ತಿನಾರಾಯಣ: ೨೦೦೨, ಪುಟ : ೭೯

೩೪. ತ.ರಾಸು. ಕೀರ್ತಿನಾರಾಯಣ: ೨೦೦೨, ಪುಟ : ೧೭೦

೩೫. ತ.ರಾಸು. ಕೀರ್ತಿನಾರಾಯಣ: ೨೦೦೨, ಪುಟ : ೧೭೦

೩೬. ಹ.ಮಾ.ನಾಯಕ(ಸಂ.): ಚಿನ್ನದಗರಿ: ೧೯೭೪, ಪುಟ: ೧೩೨

೩೭. ಶಾ.ಮಂ.ಕೃಷ್ಣರಾಯ (ಸಂ.) : ತ.ರಾ.ಸು.ಬದುಕು–ಬರೆಹ, ೨೦೦೮, ಪುಟ: ೩೦೩

೩೮. ತ.ರಾ.ಸು. : ಶಿಲ್ಪಶ್ರೀ : ೧೯೬೦, ಪುಟ : ೫

೩೯. ತ.ರಾ.ಸು. : ಶಿಲ್ಪಶ್ರೀ : ೧೯೬೦, ಪುಟ : ೧೭

೪೦. ತ.ರಾ.ಸು. : ಶಿಲ್ಪಶ್ರೀ : ೧೯೬೦, ಪುಟ : ೨೫

೪೧. ತ.ರಾ.ಸು. : ಶಿಲ್ಪಶ್ರೀ : ೧೯೬೦, ಪುಟ : ೬೬

೪೨. ತ.ರಾ.ಸು. : ಶಿಲ್ಪಶ್ರೀ : ೧೯೬೦, ಪುಟ : ೬೯

೪೩. ತ.ರಾ.ಸು. : ಶಿಲ್ಪಶ್ರೀ : ೧೯೬೦, ಪುಟ : ೮೩

೪೪. ತ.ರಾ.ಸು. : ಶಿಲ್ಪಶ್ರೀ : ೧೯೬೦, ಪುಟ : ೧೫೮

೪೫. ತ.ರಾ.ಸು. : ಶಿಲ್ಪಶ್ರೀ : ೧೯೬೦, ಪುಟ : ೧೬೧

೪೬. ತ.ರಾ.ಸು. : ಶಿಲ್ಪಶ್ರೀ : ೧೯೬೦, ಪುಟ : ೬೮

೪೭. ಗೌರಿಸುಂದರ್(ಸಂ): ತ.ರಾ.ಸು. ಕಾದಂಬರಿಗಳ ಕುರಿತು: ೨೦೧೫, ಪುಟ: ೩೬

೪೮. ತ.ರಾ.ಸು. : ಅಗ್ನಿರಥ–ಮುಕ್ತಿಪಥ: ೧೯೬೬, ಮುನ್ನುಡಿ

೪೯. ತ.ರಾ.ಸು. : ಅಗ್ನಿರಥ–ಮುಕ್ತಿಪಥ: ೧೯೬೬, ಪುಟ: ೧೯

೫೦. ತ.ರಾ.ಸು. : ಅಗ್ನಿರಥ–ಮುಕ್ತಿಪಥ: ೧೯೬೬, ಪುಟ: ೨೧

೫೧. ತ.ರಾ.ಸು. : ಅಗ್ನಿರಥ–ಮುಕ್ತಿಪಥ: ೧೯೬೬, ಪುಟ: ೩೫

೫೨. ತ.ರಾ.ಸು. : ಅಗ್ನಿರಥ–ಮುಕ್ತಿಪಥ: ೧೯೬೬, ಪುಟ: ೫೦

೫೩. ಗೌರಿಸುಂದರ (ಸಂ.): ತ.ರಾ.ಸು. ಕಾದಂಬರಿಗಳ ಕುರಿತು: ೨೦೧೫, ಪುಟ: ೫೦

೫೪. ತ.ರಾ.ಸು. : ಕಂಬನಿಯ ಕುಯಿಲು: ೨೦೧೩, ಮುನ್ನುಡಿ

೫೫. ಗೌರಿಸುಂದರ್ (ಸಂ.): ತ.ರಾ.ಸು. ಕಾದಂಬರಿಗಳ ಕುರಿತು:೨೦೧೫, ಪುಟ:೫೦

೫೬. ಗೌರಿಸುಂದರೆ (ಸಂ.): ತ.ರಾ.ಸು. ಕಾದಂಬರಿಗಳ ಕುರಿತು:೨೦೧೫, ಪುಟ : ೩೯

೫೭. ಗೌರಿಸುಂದರ್ (ಸಂ.): ತ.ರಾ.ಸು. ಕಾದಂಬರಿಗಳ ಕುರಿತು: ೨೦೧೫, ಪುಟ : ೧೧೭

೫೮. ಗೌರಿಸುಂದರ್ (ಸಂ.): ತ.ರಾ.ಸು. ಕಾದಂಬರಿಗಳ ಕುರಿತು: ೨೦೧೫, ಪುಟ : ೧೧೭

೫೯. ಗೌರಿಸುಂದರ್ (ಸಂ.): ತ.ರಾ.ಸು. ಕಾದಂಬರಿಗಳ ಕುರಿತು: ೨೦೧೫, ಪುಟ : ೧೬೧

೬೦. ತ.ರಾ.ಸು. ರಕ್ತರಾತ್ರಿ : ೨೦೦೧, ಮುನ್ನುಡಿ

೬೧. ತ.ರಾ.ಸು. ರಕ್ತರಾತ್ರಿ : ೨೦೦೧, ಪುಟ : ೧೪

೬೨. ತ.ರಾ.ಸು. ರಕ್ತರಾತ್ರಿ : ೨೦೦೧, ಪುಟ : ೧೨೭

೬೩. ತ.ರಾ.ಸು. ರಕ್ತರಾತ್ರಿ : ೨೦೦೧, ಪುಟ : ೧೩೦

೬೪. ತ.ರಾ.ಸು. ರಕ್ತರಾತ್ರಿ : ೨೦೦೧, ಪುಟ : ೨೩೩

೬೫. ಗೌರಿಸುಂದರ್(ಸಂ): ತ.ರಾ.ಸು. ಕಾದಂಬರಿಗಳ ಕುರಿತು: ೨೦೧೫, ಪುಟ: ೫೪

೬೬. ಗೌರಿಸುಂದರ್(ಸಂ): ತ.ರಾ.ಸು. ಕಾದಂಬರಿಗಳ ಕುರಿತು: ೨೦೧೫, ಪುಟ: ೫೪

೬೭. ತ.ರಾ.ಸು: ತಿರುಗುಬಾಣ : ೨೦೦೮ : ಪುಟ : ೧೬

೬೮. ತ.ರಾ.ಸು: ತಿರುಗುಬಾಣ : ೨೦೦೮ : ಪುಟ : ೩೧

೬೯. ತ.ರಾ.ಸು: ತಿರುಗುಬಾಣ : ೨೦೦೮ : ಪುಟ : ೫೫

೭೦. ಗೌರಿ ಸುಂದರ್(ಸಂ) : ತ.ರಾ.ಸು. ಕಾದಂಬರಿಗಳ ಕುರಿತು : ಪುಟ : ೭೭.

೭೧. ತ.ರಾ.ಸು: ತಿರುಗುಬಾಣ : ೨೦೦೮ : ಪುಟ : ೫೫

೭೨. ತ.ರಾ.ಸು: ಹೊಸಹಗಲು : ೨೦೦೭ ಮುನ್ನುಡಿ

೭೩. ತ.ರಾ.ಸು: ಹೊಸಹಗಲು : ೨೦೦೭ : ಪುಟ : ೧೧

೭೪. ತ.ರಾ.ಸು: ತಿರುಗುಬಾಣ : ೨೦೦೮ : ಪುಟ : ೫೯

೭೫. ಗೌರಿ ಸುಂದರ್ (ಸಂ) : ತ.ರಾ.ಸು. ಕಾದಂಬರಿಗಳ ಕುರಿತು : ೨೦೧೫, ಪುಟ : ೨೭೫

೭೬. ತ.ರಾ.ಸು: ಹೊಸಹಗಲು : ೨೦೦೭ : ಪುಟ : ೭೧

೭೭. ತ.ರಾ.ಸು: ಹೊಸಹಗಲು : ೨೦೦೭ : ಪುಟ : ೧೩೪

೭೮. ತ.ರಾ.ಸು: ಹೊಸಹಗಲು : ೨೦೦೭ : ಪುಟ : ೧೩೪

೭೯. ತ.ರಾ.ಸು: ಹೊಸಹಗಲು : ೨೦೦೭ ಮುನ್ನುಡಿ

೮೦. ತ.ರಾ.ಸು: ವಿಜಯೋತ್ಸವ : ೧೯೯೭ ಪುಟ : ೧

೮೧. ತ.ರಾ.ಸು: ವಿಜಯೋತ್ಸವ : ೧೯೯೭ ಪುಟ : ೫
೮೨. ತ.ರಾ.ಸು: ವಿಜಯೋತ್ಸವ : ೧೯೯೭ ಪುಟ : ೧೦
೮೩. ತ.ರಾ.ಸು: ಹೊಸಹಗಲು : ೨೦೦೭ : ಪುಟ : ೪೮
೮೪. ತ.ರಾ.ಸು: ಹೊಸಹಗಲು : ೨೦೦೭ : ಪುಟ : ೧೪೮
೮೫. ತ.ರಾ.ಸು: ಹೊಸಹಗಲು : ೨೦೦೭ : ಪುಟ : ೧೮೦
೮೬. ತ.ರಾ.ಸು.: ರಾಜ್ಯದಾಹ : ೨೦೦೧, ಪುಟ : ೯
೮೭. ಗೌರಿಸುಂದರ್(ಸಂ): ತ.ರಾ.ಸು. ಕಾದಂಬರಿಗಳ ಕುರಿತು:೨೦೧೫, ಪುಟ: ೧೬೮
೮೮. ತ.ರಾ.ಸು.: ರಾಜ್ಯದಾಹ : ೨೦೦೧, ಪುಟ : ೧೨
೮೯. ಗೌರಿಸುಂದರ್(ಸಂ): ತ.ರಾ.ಸು. ಕಾದಂಬರಿಗಳ ಕುರಿತು: ೨೦೧೫, ಪುಟ:೧೬೯
೯೦. ತ.ರಾ.ಸು.: ರಾಜ್ಯದಾಹ : ೨೦೦೧, ಪುಟ : ೭೨
೯೧. ಗೌರಿಸುಂದರ್(ಸಂ): ತ.ರಾ.ಸು. ಕಾದಂಬರಿಗಳ ಕುರಿತು: ೨೦೧೫, ಪುಟ: ೧೬೮
೯೨. ಗೌರಿಸುಂದರ್(ಸಂ): ತ.ರಾ.ಸು. ಕಾದಂಬರಿಗಳ ಕುರಿತು: ೨೦೧೫, ಪುಟ : ೧೭೨
೯೩. ತ.ರಾ.ಸು. : ಕಸ್ತೂರಿ ಕಂಕಣ: ೨೦೧೨, ಮುನ್ನುಡಿ.
೯೪. ಎಂ.ಎನ್ ಮಹೇಶ್. ತ.ರಾ.ಸು. ಸಾಹಿತ್ಯ ಒಂದು ಅಧ್ಯಯನ:೨೦೦೯, ಪುಟ: ೧೨೦.
೯೫. ತ.ರಾ.ಸು. : ಕಸ್ತೂರಿ ಕಂಕಣ: ೨೦೧೨ ಪುಟ : ೧೧
೯೬. ತ.ರಾ.ಸು. : ಕಸ್ತೂರಿ ಕಂಕಣ: ೨೦೧೨ ಪುಟ : ೨೦೬
೯೭. ತ.ರಾ.ಸು. : ಕಸ್ತೂರಿ ಕಂಕಣ: ೨೦೧೨ ಪುಟ : ೨೦೯
೯೮. ತ.ರಾ.ಸು. : ಕಸ್ತೂರಿ ಕಂಕಣ: ೨೦೧೨ ಪುಟ : ೨೦೯
೯೯. ತ.ರಾ.ಸು.: ತಿರುಗುಬಾಣ: ೨೦೦೮, ಮುನ್ನುಡಿ.
೧೦೦. ತ.ರಾ.ಸು.: ದುರ್ಗಾಸ್ತಮಾನ: ೨೦೧೦, ಪುಟ ೬೬೯
೧೦೧. ತ.ರಾ.ಸು.: ದುರ್ಗಾಸ್ತಮಾನ: ೨೦೧೦, ಮುನ್ನುಡಿ
೧೦೨. ತ.ರಾ.ಸು.: ದುರ್ಗಾಸ್ತಮಾನ: ೨೦೧೦, ಪುಟ ೭೦
೧೦೩. ತ.ರಾ.ಸು.: ದುರ್ಗಾಸ್ತಮಾನ: ೨೦೧೦, ಪುಟ ೮೧
೧೦೪. ತ.ರಾ.ಸು.: ದುರ್ಗಾಸ್ತಮಾನ: ೨೦೧೦, ಪುಟ ೧೫೮
೧೦೫. ಗೌರಿಸುಂದರ್ (ಸಂ): ತ.ರಾ.ಸು.ಕಾದಂಬರಿಗಳ ಕುರಿತು: ಪುಟ ೧೭
೧೦೬. ತ.ರಾ.ಸು.: ದುರ್ಗಾಸ್ತಮಾನ: ೨೦೧೦, ಪುಟ ೨೩೭
೧೦೭. ತ.ರಾ.ಸು.: ದುರ್ಗಾಸ್ತಮಾನ: ೨೦೧೦, ಪುಟ ೩೭೫

೧೦೮. ತ.ರಾ.ಸು.: ದುರ್ಗಾಸ್ತಮಾನ: ೨೦೧೦, ಪುಟ ೪೨೮

೧೦೯. ತ.ರಾ.ಸು.: ದುರ್ಗಾಸ್ತಮಾನ: ೨೦೧೦, ಪುಟ ೪೫೭–೪೫೮

೧೧೦. ಗೌರಿಸುಂದರ್ (ಸಂ): ತ.ರಾ.ಸು.: ಕಾದಂಬರಿಗಳ ಕುರಿತು : ೨೦೧೫, ಪುಟ ೨೧

೧೧೧. ತ.ರಾ.ಸು.: ದುರ್ಗಾಸ್ತಮಾನ: ೨೦೧೦, ಪುಟ ೬೫೭

೧೧೨. ಗೌರಿಸುಂದರ್ (ಸಂ): ತ.ರಾ.ಸು.: ಕಾದಂಬರಿಗಳ ಕುರಿತು : ೨೦೧೫, ಪುಟ ೨೧



# ಅಧ್ಯಾಯ : ಐದು

## ತ.ರಾ.ಸು. ಚಾರಿತ್ರಿಕ ಕಾದಂಬರಿಗಳು: ಚರಿತ್ರೆಯ ವಿನ್ಯಾಸಗಳು

ಕನ್ನಡ ನಾಡಿಗೂ ಅದರದೇ ಆದ ಚಾರಿತ್ರಿಕ ಹಿನ್ನೆಲೆ ಇದೆ. ಇದು ಮಹಾಕವಿಗಳ, ಮಹಾಕಲಿಗಳ, ಮಹಾಕಲಾವಿದರ ಹಾಗೂ ಮಹಾತಪಸ್ವಿಗಳ ಸಿದ್ಧಕ್ಷೇತ್ರದ ನೆಲೆವೀಡಾಗಿದೆ. ಜಾಗತಿಕ ಭೂಪಟದಲ್ಲಿ ತನ್ನ ವೈವಿಧ್ಯಮಯ ಹಾಗೂ ವೈಶಿಷ್ಟ್ಯಮಯ ಐತಿಹಾಸಿಕ ಪರಂಪರೆಯಿಂದ ಕಂಗೊಳಿಸುವ ಸಮೃದ್ಧವಾದ ನಾಡುಯೆನಿಸಿದೆ. ಜೊತೆಗೆ ಅದ್ವಿತೀಯವಾದ ಸಾಂಸ್ಕೃತಿಕ ಪರಂಪರೆಯಿಂದ ಅವಿಸ್ಮರಣೀಯ ದಾಖಲೆಯನ್ನು ಪಡೆದುಕೊಂಡ ಹಿರಿಮೆಯೂ ಈ ನಾಡಿಗಿದೆ. ಈ ಕಾರಣಗಳಿಂದಾಗಿ ಭಾರತದ ಅತ್ಯಂತ ಪುರಾತನ ಪ್ರಾಂತ್ಯಗಳಲ್ಲಿ ಇದು ಒಂದೆಂಬುದು ಐತಿಹಾಸಿಕವಾಗಿ ದೃಢಪಟ್ಟಿದೆ. ಕ್ರಿ.ಶ.ದ ಆರಂಭದಿಂದಲೂ ಹತ್ತು-ಹಲವು ಸುಪ್ರಸಿದ್ಧ ರಾಜವಂಶಸ್ಥರಾಗಿ ಹೋದ ಕದನಕಲಿಗಳು, ಕಲಾರಸಿಕರು ಹಾಗೂ ಪ್ರಜಾವತ್ಸಲ ದೊರೆಗಳು ಈ ನಾಡನ್ನು ಅತ್ಯಂತ ಸಮರ್ಥವಾಗಿ ಆಳಿದ್ದಾರೆ. ಅಂತಹ ಅರಸು ಮನೆತನಗಳಲ್ಲಿ ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಹೊಯ್ಸಳ ಹಾಗೂ ಚಿತ್ರದುರ್ಗದ ಪಾಳೆಯಗಾರರ ಮನೆತನಗಳು ಪ್ರಮುಖಯೆನಿಸಿವೆ. ಇಂತಹ ಐತಿಹಾಸಿಕ ಘಟನಾವಳಿಗಳನ್ನು ಆಕರವಾಗಿರಿಸಿಕೊಂಡು ತ.ರಾ.ಸುಬ್ಬರಾಯರು ಕಾದಂಬರಿಗಳನ್ನು ರಚಿಸಿದ್ದು ವಿಶೇಷವಾಗಿದೆ. ಇದು ಅವರ ಸೃಜನಶೀಲತೆ ಬರವಣಿಗೆಯ ದ್ಯೋತಕಯೆನಿಸಿದೆ. ಈ ಹಿನ್ನೆಲೆಯಲ್ಲಿ ತ.ರಾ.ಸು. ಅವರು ತಮ್ಮ ಕಾದಂಬರಿಗಳಿಗೆ ಆಯ್ದುಕೊಂಡ ಐತಿಹಾಸಿಕ ವಸ್ತುವಿನ ರಚನಾ ವಿನ್ಯಾಸಗಳ ವೈಶಿಷ್ಟ್ಯವನ್ನು ಅರಿಯುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಈ ಕಾರ್ಯ ಅವರ ಐತಿಹಾಸಿಕ ಕಾದಂಬರಿಗಳನ್ನು ಆಧರಿಸಿ ನಡೆಯುವಂಥದ್ದಾಗಿದೆ.

**ಆಡಳಿತ ಚಿತ್ರಣ :**

ಯಾವುದೇ ಒಂದು ರಾಜ್ಯದ ಮತ್ತು ಪ್ರಜೆಗಳ ಶ್ರೇಯಸ್ಸು ಆ ರಾಜ್ಯದ ಆಡಳಿತ ಕ್ರಮದ ಮೇಲೆ ಅವಲಂಬಿತವಾಗಿರುತ್ತದೆ. ಯಾವುದೇ ಅರಸು ಮನೆತನವಾಗಲಿ ಅಥವಾ ಪಾಳೆಯಗಾರರ ಮನೆತನವಾಗಲಿ ಇವು ಬೇರೆ ಬೇರೆಯಾಗಿ ಕಂಡರೂ ರಾಜ್ಯಾಡಳಿತದ ಮೂಲತತ್ವಗಳು ಒಂದೇ ರೀತಿಯಾಗಿರುವುದು ಗೋಚರಿಸುತ್ತದೆ. ರಾಜನೀತಿ ತತ್ವಗಳು ಪ್ರಾಚೀನತಮ ನೀತಿತತ್ವಗಳನ್ನೇ ಆಧರಿಸಿ ರಚನೆಗೊಂಡು, ಕಾಲಕ್ಕನುಗುಣವಾಗಿ ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಆಡಳಿತ ನಡೆಸಿದ್ದು ಕಂಡು ಬರುತ್ತದೆ. ಅದೇನಿದ್ದರೂ ರಾಜ, ಮಂತ್ರಿಮಂಡಲ, ಪ್ರಾಂತಾಡಳಿತ, ಕೋಶ, ಬಲ, ದುರ್ಗ ಮತ್ತು ನ್ಯಾಯಾಂಗ ಈ 'ಸಪ್ತಾಂಗಗಳ' ಮೂಲಕವಂತೂ ಆಡಳಿತ ನಡೆಸಿದ್ದಂತೂ ಸತ್ಯವಾಗಿದೆ.

೧. ಪ್ರಭುತ್ವ

ಚಿತ್ರದುರ್ಗದ ಅರಸರು ರಾಜಪ್ರಭುತ್ವವನ್ನು ಹೊಂದಿದ್ದರೂ ಎಲ್ಲಾ ಅಧಿಕಾರವನ್ನು ತಮ್ಮಲ್ಲಿಯೇ ಕೇಂದ್ರೀಕರಿಸಿಕೊಂಡಿರಲಿಲ್ಲ. ಇದಲ್ಲದೇ ಈ ರಾಜಪ್ರಭುತ್ವವು ವಂಶಪಾರಂಪರ್ಯವಾಗಿದ್ದರೂ ಅರಸರಿಗೆ ಮಕ್ಕಳಿಲ್ಲದಿದ್ದಾಗ ಹತ್ತಿರದ ಸಂಬಂಧದ ಮಕ್ಕಳನ್ನು ದತ್ತು ತೆಗೆದುಕೊಂಡು ಅವರಿಗೆ ಪಟ್ಟಾಭಿಷೇಕ ಮಾಡಲಾಗುತ್ತಿತ್ತು"[೧]

"ದೊರೆಯು ಅಪ್ರಾಪ್ತ ವಯಸ್ಕನಾಗಿದ್ದಾಗ ಮಹಿಳೆಯೊಬ್ಬಳು ಸರ್ವಾಧಿಕಾರವನ್ನು ವಹಿಸಿಕೊಂಡು ರಾಜ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದ್ದು ಇನ್ನೊಂದು ವಿಶೇಷ ಆಡಳಿತ ಕ್ರಮವಾಗಿದೆ".[೨] ಇದರಿಂದ ತಿಳಿಯುವುದೆನೆಂದರೆ, ರಾಜ್ಯವು ಸಂಕಟದಲ್ಲಿದ್ದಾಗ, ತಮ್ಮಷ್ಟಕ್ಕೆ ತಾವೇ ನಿರ್ಧಾರ ತೆಗೆದುಕೊಳ್ಳದೆ ರಾಜನ ತಾಯಿ, ಸ್ವಾಮಿಗಳ, ಪ್ರಧಾನಿಗಳ ಮತ್ತಿತರೊಡನೆ ಚರ್ಚಿಸಿ ಅಥವಾ ಸಮಾಲೋಚಿಸಿ ರಾಜ್ಯದ ಹಿತದೃಷ್ಟಿಯಿಂದ ನಿರ್ಧಾರ ತೆಗೆದುಕೊಳ್ಳುತ್ತಿದ್ದರು.

ತ.ರಾ.ಸು. ಅವರು ಬರೆದ ಮೊದಲ ಐತಿಹಾಸಿಕ ಕಾದಂಬರಿ 'ನೃಪತುಂಗ'. ಇದು ರಾಷ್ಟ್ರಕೂಟ ದೊರೆ ಅಮೋಘವರ್ಷ ನೃಪತುಂಗನ ವ್ಯಕ್ತಿತ್ವಕ್ಕೆ ಸಂಬಂಧಿಸಿದ ಕಾದಂಬರಿ. ಸುಮಾರು ೬೪ ವರ್ಷಗಳ ಕಾಲಾವಧಿಯ ಆಳ್ವಿಕೆ ಈತನದು. ಕಾವೇರಿಯಿಂದ ಗೋದಾವರಿ ಪರ್ಯಂತದ ನಾಡನ್ನು ಸುಮಾರು ಅರವತ್ತು ವರ್ಷಗಳ ಕಾಲ ಧರ್ಮದಿಂದ ಪಾಲಿಸಿ, ದೇಶ ವಿದೇಶಗಳಲ್ಲಿ ನಾಡಿನ ಕೀರ್ತಿಯನ್ನು ಹಬ್ಬಿಸಿದ ದೊರೆಯಾಗಿದ್ದಾನೆ. "ನೃಪತುಂಗ ಚಿತ್ರಣೆಯಲ್ಲಿ ರಾಜನ ಕರ್ತವ್ಯಕ್ಕೂ ತಂದೆಗೆ ಸಹಜವಾದ ಪುತ್ರವಾತ್ಸಲ್ಯಕ್ಕೂ ಸ್ಪರ್ಧೆ ಬಂದಾಗ ರಾಜಧರ್ಮವನ್ನು ಎತ್ತಿ ಹಿಡಿದು ಸೊಸೆಯ ಮತ್ತು ಆಪ್ತ ಸಚಿವರ ಬಿನ್ನಹವನ್ನು ಲೆಕ್ಕಿಸದೆ ನ್ಯಾಯಕ್ಕಾಗಿ ಮಗನನ್ನೂ ಬಲಿಕೊಡಲು ಸಿದ್ಧನಾಗಿರುವನು ನೃಪತುಂಗ. ಆದರೆ ಪ್ರಜೆಗಳ ಅಭಿಪ್ರಾಯವನ್ನು ಪ್ರಭುವು ಅನುಸರಿಸಬೇಕೆಂಬ ಪ್ರಜಾಪ್ರಭುತ್ವದ ತತ್ವದಂತೆ, ನೃಪತುಂಗನು ಮಗನನ್ನು ಕ್ಷಮಿಸಿ ಯುವರಾಜನನ್ನಾಗಿ ಮಾಡುವನು."[೩] ಎಂಬ ಎಸ್.ಶ್ರೀಕಂಠಶಾಸ್ತ್ರೀಯವರ ಮಾತು ಗಮನಾರ್ಹವಾಗಿದೆ. ಪುತ್ರ ವಾತ್ಸಲ್ಯಕ್ಕಿಂತಲೂ ರಾಜಧರ್ಮವೇ ಶ್ರೇಷ್ಠವೆಂಬಂತೆ ಆಳಿದ ದೊರೆ ನೃಪತುಂಗ. ತ.ರಾ.ಸು. ತಾವು ಅಂದುಕೊಂಡಂತೆ ನೃಪತುಂಗನನ್ನು ಆದರ್ಶ ದೊರೆ, ಆದರ್ಶ ತಂದೆ, ಆದರ್ಶ ಪತಿಯೆಂಬಂತೆ ಚಿತ್ರಿಸಿದ್ದಾರೆ. 'ಪ್ರಜಾಹಿತೇ ಹಿತಂ ರಾಜ್ಯ' ಎಂಬ ನೀತಿ ಅನುಸರಿಸಿದ ದೊರೆ ಇವನಾದರೂ ಕ್ಷಾತ್ರಧರ್ಮವನ್ನು ಅನುಸರಿಸಬೇಕಾದ ಅನಿವಾರ್ಯತೆಗೆ ಒಳಗಾಗಬೇಕಾಯಿತು. ತನ್ನ ರಾಜ್ಯದ ಹಿತಕ್ಕಾಗಿ ಅಂಗುಲಿದಾನ ಮಾಡಿದ ಮಹಾತ್ಯಾಗಿ ನೃಪತುಂಗ. "ನಿನಗಾಗಿ ಪ್ರಾಣತ್ಯಾಗ ಮಾಡಿದವರನ್ನು ಮರೆಯಬೇಡ. ಅರಸೊತ್ತಿಗೆ ನಿತ್ಯ ಸುಖಸಮಾರಾಧನೆಯ ಸುಪ್ಪತ್ತಿಗೆಯಲ್ಲ. ಪ್ರಜೆಗಳ, ವೀರಭಟರ ತ್ಯಾಗದ ಹಾಲಿನಿಂದ ಬೆಳೆದ ರಾಜಶರೀರ ಅವರ ಸೇವೆಗೆ ಮೀಸಲಾಗಿರಬೇಕು. ರಾಜ ಮಕುಟ ಆ ಸೇವಾವ್ರತದ ರತ್ನ ಕಂಕಣ. ನಿತ್ಯ ನಿತ್ಯ ನೆನಪಿರಲಿ – ನಿನಗಾಗಿ ಒಬ್ಬನ

ಜೀವವಿತ್ತ, ಅಖಂಡ ಪ್ರಜಾಕೋಟಿಗಾಗಿ ಸಮಯಬಂದಾಗ ಪ್ರಾಣಕೊಡಲು ನೀನು ಸಿದ್ಧವಿರು."[9] ಎಂದು ರಾಜ್ಯಾಧಿಕಾರ ಸ್ವೀಕರಿಸುವ ಸಂದರ್ಭದಲ್ಲಿ ಮಾಡಿದ ಪ್ರತಿಜ್ಞೆಯಂತೆ ನೃಪತುಂಗನ ಪ್ರಭುತ್ವದ ಚಿತ್ರಣವನ್ನು ತ.ರಾ.ಸು. ಅವರು ಮನೋಜ್ಞವಾಗಿ ಕೊಟ್ಟಿದ್ದಾರೆ. ಅವರ ವಾಸ್ತವಿಕ ಪ್ರಜ್ಞೆ ಇಲ್ಲಿ ವಿಶೇಷವಾಗಿದೆ.

'ಸಿಡಿಲ ಮೊಗ್ಗು' ಹೊಯ್ಸಳ ಮನೆತನದ ಇತಿಹಾಸಕ್ಕೆ ಸಂಬಂಧಿಸಿದ ಕಾದಂಬರಿ 'ಸಳ'ನೆಂಬ ವ್ಯಕ್ತಿ ಈ ಮನೆತನದ ಮೂಲ ಪುರುಷನೆಂದು ಅಭಿಪ್ರಾಯಪಡಲಾಗಿದೆ. ಆದರೆ ನೃಪಕಾಮನ ಮಗ ವಿನಯಾದಿತ್ಯನಿಂದ 'ಹೊಯ್ಸಳ' ಮನೆತನದ ಏಳಿಗೆಯನ್ನು ನೋಡಬಹುದು. ವಿಕ್ರಮಾದಿತ್ಯ ಪ್ರಭುತ್ವಕ್ಕೆ ಸಂಬಂಧಿಸಿದ ವಿಚಾರಗಳು ಇಲ್ಲಿ ಗಮನ ಸೆಳೆಯುತ್ತವೆ. ವಿರಾಟಪುರದ ಕದಂಬ ದೊರೆ, ಉಚ್ಚಂಗಿಯ ಪಾಂಡ್ಯ, ನಾಗರಖಂಡ, ಸಾಂತಳಿಗೆ, ಮಯ್ಯೆನಾಡು ಮೊದಲಾದ ಬನವಾಸಿ ಹನ್ನೆರಡು ಸಾವಿರ ಸೀಮೆಯ ಹಲವಾರು ಉಪವಿಭಾಗಗಳ ಸಾಮಂತರೂ ವಿಕ್ರಮಾದಿತ್ಯನ ಪ್ರಭುತ್ವಕ್ಕೆ ಒಳಪಟ್ಟಿರುತ್ತಾರೆ. ಹೊಯ್ಸಳರು ಕೂಡ ಇವನ ಸಾಮಂತರಾಗಿರುತ್ತಾರೆ. ಚಕ್ರವರ್ತಿಯ ಆಜ್ಞೆಯ ಮೇರೆಗೆ ವಿನಯಾದಿತ್ಯನ ಪರಿವಾರ ಬಳ್ಳಿಗಾಮೆಗೆ ಪ್ರಯಾಣ ಬೆಳೆಸುವ ಸಂದರ್ಭ ಬರುತ್ತದೆ. ಈ ಸಮಯದಲ್ಲಿ ಚಕ್ರವರ್ತಿ ಸಾಮಂತರ ನಡುವೆ ಸಂಘರ್ಷ ಕಾಣಿಸಿಕೊಳ್ಳುತ್ತದೆ. ಚಕ್ರವರ್ತಿಯು ಸಾಮಂತರನ್ನು ನಡೆಸಿಕೊಳ್ಳುವ ರೀತಿಯನ್ನು ಕಂಡು ವಿಷ್ಣುವರ್ಧನನು ಅಸಮಾಧಾನಗೊಳ್ಳುತ್ತಾನೆ. "ತನ್ನ ಅಜ್ಜ, ತಂದೆ ಆ ಸಾಮಂತ ಮಾಡಿದ ಅಪಮಾನವನ್ನು ನುಂಗಿಕೊಂಡು, ಮಲಗಬೇಕಾದಾಗ ಮಲಗುವ ಸ್ವಾತಂತ್ರ್ಯವೂ ಇಲ್ಲದೆ, ಚಕ್ರವರ್ತಿಯ ಕರೆ ಬಂದಿತೆಂದು ಕೇಳಿದ ಕೂಡಲೆ, ಆಳುಗಳಂತೆ ಎದ್ದು ಹೊರಟುದನ್ನು ನೋಡಿದಾಗಲಿಂದಲೂ, 'ಈ ಚಕ್ರವರ್ತಿ ಎನ್ನಿಸಿಕೊಂಡವರಿಗೆ ಎಷ್ಟು ದರ್ಪ? ತನಗೆ ಚಕ್ರವರ್ತಿ ಪದವಿಯನ್ನು ಗಳಿಸಿಕೊಟ್ಟವರ ಮೇಲೆ, ತನ್ನ ನೆಂಟರಿಷ್ಟರ ಮುಂದೂ ತನ್ನ ಹಿರಿತನವನ್ನು ಮೆರೆಸಬೇಕೆ? ಇಂಥವರ ಊಳಿಗಕ್ಕಿಂತ, ನೇಗಿಲು ಹಿಡಿದು ಉತ್ತರೆ, ಹೆಚ್ಚು ಮರ್ಯಾದೆಯಾಗಿ ಬಾಳಬಹುದಲ್ಲಾ' ಎನ್ನುವ ಭಾವನೆ ಅವನ ಹೃದಯದಲ್ಲಿ ಬೆಳೆದು ಹಬ್ಬಿತು. ಈ ಭಾವನೆಯೇ ವಿಷ್ಣುವರ್ಧನನ ಬೆನ್ನು ವಿಕ್ರಮಾದಿತ್ಯ ಇದಿರು ಭಾಗದಂತೆ ತಡೆದಿತ್ತು."[10] ವಿಕ್ರಮಾದಿತ್ಯನ ಸಾಮ್ರಾಜ್ಯದಲ್ಲಿ ಪ್ರಧಾನಿ ಕಾಳಿದಾಸಯ್ಯನಿಗೆ ಸಾಮಂತರಾದ ಹೊಯ್ಸಳರ ಮೇಲೆ ಎಲ್ಲಿಲ್ಲದ ಸಂಶಯ. ಈ ಕಾರಣದಿಂದ ಹೊಯ್ಸಳರ ಮೇಲೆ ಇಲ್ಲಸಲ್ಲದ ಆರೋಪಗಳನ್ನು ಮಾಡುತ್ತಾನೆ. ಒಂದು ದಿನ ಓಲಗದಲ್ಲಿ ನಡೆದ ಘಟನೆಯನ್ನು ವ್ಯಂಗ್ಯವಾಗಿ ಪ್ರಸ್ತಾಪಿಸುವ ರೀತಿಯನ್ನು ನೋಡಿ, "ಮೀರಿ ಬೆಳೆದ ಹಲ್ಲನ್ನು ತುಟಿಯಿಂದ ಎಷ್ಟು ದಿನ ಮುಚ್ಚಿಟ್ಟುಕೊಂಡಿರಲು ಸಾಧ್ಯ? ಎಂದಿದ್ದರೂ ಅದು ಕಾಣಿಸಿಕೊಳ್ಳಲೇಬೇಕು. ಅಂತೂ ಈಗಲೇ ಅದು ಕಾಣಿಸಿಕೊಂಡಿದ್ದು ಒಳಿತಾಯಿತು' ಎಂದ. ತನ್ನ ಹೊಟ್ಟೆಯಲ್ಲಿದ್ದ ವಿಷಯವನ್ನೇ ವಿಕ್ರಮಾದಿತ್ಯನ ಕಿವಿಗೂ ಎರೆಯುತ್ತಾ"[11] ಈ

ಎಲ್ಲ ಘಟನೆಗಳನ್ನು ಕಣ್ಣಾರೆ ಕಾಣುವ ವಿಷ್ಣುವರ್ಧನನಲ್ಲಿ ಸ್ವತಃ ಪ್ರಭುತ್ವವನ್ನು ಪಡೆಯಬೇಕೆಂಬ ಮಹಾದಾಸೆ ಪ್ರತಿಕ್ಷಣಕ್ಕೂ ಹೆಚ್ಚಾಗುತ್ತ ಹೋಗುತ್ತದೆ. ಆದರೆ "ಹೊಯ್ಸಳರು ಎಷ್ಟೇ ಪ್ರತಿಭಟನೆಯನ್ನು ವ್ಯಕ್ತಪಡಿಸಿದರೂ ಅವರು ತಮ್ಮ ಆಳ್ವಿಕೆಯ ಕೊನೆಯವರೆಗೂ ಚಾಲುಕ್ಯರ ಸಾಮಂತರಾಗಿಯೇ ಉಳಿಯಬೇಕಾಯಿತು."[೨] ಎಂಬ ಮಾತಂತೂ ಸತ್ಯವಾಗಿದೆ.

ಹೊಯ್ಸಳರ ಇತಿಹಾಸಕ್ಕೆ ಸಂಬಂಧಿಸಿದ ತ.ರಾ.ಸು. ಅವರ ಎರಡನೇ ಕಾದಂಬರಿ ಕೀರ್ತಿನಾರಾಯಣ. ಇದರ ಪ್ರಭು ವಿಷ್ಣುವರ್ಧನ. ರೋಗಗ್ರಸ್ಥವಾದ ಹೊಯ್ಸಳ ಸಾಮ್ರಾಜ್ಯದ ಕೀರ್ತಿಯನ್ನು ಹೆಚ್ಚಿಸುವ ಹಂಬಲ ಈತನದಾಗಿದೆ. "ಸಳ ಮಹಾರಾಯ ವಾಸನ್ತಿಕಾದೇವಿಯ ಮಂದಿರದಲ್ಲಿ. ಸಳೆಯಿಂದ ಹುಲಿಯನ್ನು ಹೊಯ್ದು, ಸುದತ್ತ ಮುನಿಗಳ ಹರಕೆ ಪಡೆದು, ಹೊಯ್ಸಳ ರಾಜ್ಯಕ್ಕೆ ಬೀಜಾರೋಪಣ ಮಾಡಿ, ಸುತ್ತಲ ಮಲೆಯರಸುಗಳನ್ನು ಮೆಟ್ಟಿ, ದ್ವಾರಸಮುದ್ರದ ನೂತನ ನಿರ್ಮಿತ ಕೋಟೆಯ ಮೇಲೆ ತನ್ನ ವ್ಯಾಘ್ರಪತಾಕೆಯನ್ನು ಹಾರಿಸಿದ ಗಳಿಗೆಯಿಂದಲೂ, ತಲಕಾಡಿನ ಗಂಗವಂಶದ ಅರಸುಗಳನ್ನು ಕಬಳಿಸಿ, ಕಾವೇರಿಯಿಂದ ತುಂಗಭದ್ರೆಯ ನಡುವಿನ ನಾಡಿನಲ್ಲಿ ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿದ ಚೋಳರು, ಹೊಯ್ಸಳರ ವೈರಿಗಳಾಗಿದ್ದರು. ಧರ್ಮಪುರಿಯ ರಾಜಧಾನಿಯಲ್ಲಿ ಬೀಡುಬಿಟ್ಟ ಚೋಳ ಪ್ರತಿನಿಧಿಗಳು, ಅವರ ಸಾಮಂತರಾದ ಚೆಂಗಾಳ್ವ ಪ್ರಭುಗಳು, ದಿನದಿನವೂ ಹೊಯ್ಸಳರಿಗೆ ಕಿರುಕುಳ ಕೊಡುವುದೇ ತಮ್ಮ ಕರ್ತವ್ಯವೆಂದು ನಂಬಿದ್ದರು"[೩] ಈ ಕಾರಣದಿಂದ ಹೊಯ್ಸಳ ಅರಸುಗಳು ತಮ್ಮ ಉಳಿವಿಗಾಗಿ ಹಗಲಿರುಳು ಖಡ್ಗಧರಿಸಿ ಬಾಳಬೇಕಾಯಿತು.

ವಿಷ್ಣುವರ್ಧನನ ವ್ಯಕ್ತಿತ್ವ ಚಿತ್ರಣವನ್ನೇ ಪ್ರಮುಖ ಉದ್ದೇಶವಾಗಿಸಿಕೊಂಡಿರುವ ತ.ರಾ.ಸು. ಅವರು ಅವನ ಸಾಹಸಮಯ ಬದುಕನ್ನು ಅತ್ಯಂತ ಉತ್ಸಾಹದಿಂದಲೇ ಚಿತ್ರಿಸಿದ್ದಾರೆ. ಅದಕ್ಕಾಗಿ ಮೂಲ ಇತಿಹಾಸದಿಂದ ಕೆಲ ಮಾರ್ಪಾಡುಗಳನ್ನು ಮಾಡಿಕೊಂಡಿದ್ದು ಗೋಚರಿಸುತ್ತದೆ. ಉದಾಹರಣೆಗೆ, ವಿಷ್ಣುವರ್ಧನನು ಸಾಹಸಯಾತ್ರೆ ಕೈಕೊಂಡಾಗ ಪೆರ್ಮಾಡಿ ದೇವನಿಂದ ಪರಾಜಿತನಾದ ಪ್ರಸಂಗವನ್ನು ಕಾದಂಬರಿಯಲ್ಲಿ ಪ್ರಸ್ತಾಪಿಸಿದೇ ಇರುವುದನ್ನು ನೋಡಬಹುದು. ಹೊಯ್ಸಳ ಸಾಮ್ರಾಜ್ಯದ ಕೀರ್ತಿಪತಾಕೆಯನ್ನು ಹಾರಿಸುವ ದ್ಯೋತಕದಂತೆ ವಿಷ್ಣುವರ್ಧನನ ತಲಕಾಡು ದಂಡಯಾತ್ರೆ ಕಾದಂಬರಿಯಲ್ಲಿ ಮೂಡಿಬಂದಿದೆ.

ತಲಕಾಡು ದಂಡಯಾತ್ರೆಯಲ್ಲಿ ಜಯಸಾಧಿಸಿದಾಗ ವಿಷ್ಣುವರ್ಧನನು ತನ್ನ ನಾಡ ಜನತೆಗೆ ಹೇಳುವ ಮಾತುಗಳನ್ನು ನೋಡಿ. "ಇಂದು ನಾವು, ಶತಮಾನದ ದಾಸ್ಯಕ್ಕೊಳಗಾಗಿ, ಖಿಲವಾದ ನಮ್ಮ ನಾಡನ್ನು ಹೊಸತಾಗಿ ಕಟ್ಟಬೇಕಾಗಿದೆ. ಅದಕ್ಕೆ ನಮ್ಮಲ್ಲಿ ಎಷ್ಟು ಶಕ್ತಿ ಇದ್ದರೂ ಸಾಲದು. ಇಂದು ನಮ್ಮ ಜನರ ಚೈತನ್ಯ, ಪ್ರತಿಭೆ, ಸಾಹಸ– ಎಲ್ಲವೂ ಅದಕ್ಕಾಗಿ ವಿನಿಯೋಗವಾಗಬೇಕಾಗಿದೆ. ದಾಸ್ಯದೊಂದಿಗೆ ದ್ವೇಷವನ್ನೂ ಮರೆತು, ಆ ಸೃಷ್ಟಿಶೀಲವಾದ ದಾರಿಯಲ್ಲಿ ತಮ್ಮ ಚೈತನ್ಯ ಗಂಗೆಯನ್ನು ಹರಿಯಬಿಡಿ. ನಾಳಿನ ಜನ 'ಚೋಳರು ಹೇಗೆ

ಮಾಡಿ ಹಾಳಾದರೋ ಹೊಯ್ಸಳರು ಅದೇ ದಾರಿ ಹಿಡಿದು ನಶಿಸಿದುರು' ಎಂದು ಅನ್ನದಿರಲಿ. 'ಚೋಳರು ಹಾಳು ಮಾಡಿದರು: ಹೊಯ್ಸಳರು ಕಟ್ಟಿ ಬೆಳೆಸಿದುರು' ಎಂಬ ಕೀರ್ತಿ ಬರುವಂತೆ ನಡೆದುಕೊಳ್ಳಿ, ಯಾವ ಸಾಮ್ರಾಜ್ಯವೂ ಚಿರವಲ್ಲ ; ಚಿರವಾದುದು ಒಳ್ಳೆಯ ಹೆಸರೊಂದೇ. ಅದಕ್ಕಾಗಿ ಶ್ರಮಿಸೋಣ. ಆ ಮಾರ್ಗದಲ್ಲಿ ಗೆಲುವು ಬಂದರೆ ಬರಲಿ; ಸಾವು ಬಂದುರೂ ಶ್ರೇಯಸ್ಕರವೇ"[೯] ಎಂಬಂತಹ ಮಾತುಗಳಲ್ಲಿ ವಿಷ್ಣುವರ್ಧನನ ರಾಜ್ಯಾಡಳಿತದ ಪ್ರಾಮಾಣಿಕತೆ ಮತ್ತು ಪರಿಶುದ್ಧತೆಯನ್ನು ಕಾಣುತ್ತೇವೆ.

ಕ್ರಿ.ಶ. ಸುಮಾರು ೯೮೨ರ ಸುಮಾರಿನಲ್ಲಿ ಶ್ರವಣಬೆಳಗೊಳದಲ್ಲಿ ನಿರ್ಮಾಣಗೊಂಡ ಭವ್ಯ ಕಲಾಕೃತಿ ಗೋಮ್ಮಟೇಶ್ವರನ ಉದಯಕಾಲದ ಐತಿಹಾಸಿಕ ಕಾದಂಬರಿ ಶಿಲ್ಪಶ್ರೀ. ಇದರ ಕಾರಣಕರ್ತ ಚಾವುಂಡರಾಯ. ಚಾವುಂಡರಾಯನ ಮೇರು ವ್ಯಕ್ತಿತ್ವದ ಚಿತ್ರಣವನ್ನು ತ.ರಾ.ಸು. ಅವರು ಈ ಕಾದಂಬರಿಯ ಮೂಲಕ ಕೊಡುತ್ತಾರೆ. ಇದು ತ.ರಾ.ಸು. ಅವರ ವಿಭಿನ್ನ ಸಂಕೀರ್ಣ ಕಾದಂಬರಿಯೂ ಹೌದು. ಇಲ್ಲಿ ಪ್ರಜಾಪ್ರಭುತ್ವಕ್ಕಿಂತಲೂ ಅಥವಾ ರಾಜಕಾರಣಕ್ಕಿಂತಲೂ ಆ ಕುರಿತಾದ ನಿರ್ಲಿಪ್ತ ಮನೋಭಾವನೆಯ ಚಿತ್ರಣವನ್ನು ಕಾಣುತ್ತೇವೆ. ಇದಕ್ಕನುಗುಣವಾಗಿ ಕಾದಂಬರಿಯ ಆರಂಭದಲ್ಲಿ ಭರತನ ರಾಜ್ಯ ವ್ಯಾಮೋಹ ಹಾಗೂ ಬಾಹುಬಲಿಯ ವೈರಾಗ್ಯ ಮನೋಧರ್ಮದ ಹಿನ್ನೆಲೆಯಿದೆ. ಜೊತೆಗೆ "ಕನ್ನಡ ನಾಡನ್ನು ಹಲವು ಶತಮಾನಗಳವರೆಗೆ ಆಳಿದ ರಾಷ್ಟ್ರಕೂಟ ಹಾಗೂ ಗಂಗಮನೆತನಗಳ ಅವನತಿಯ ಕಾಲದ ಘಟನೆಗಳು ಈ ಕಾದಂಬರಿಯಲ್ಲಿದೆ. ಇದೇ ಅವಧಿಯಲ್ಲಿ ಕಲ್ಯಾಣದ ಚಾಲುಕ್ಯ ಮನೆತನವು ಪ್ರವರ್ಧಮಾನಕ್ಕೆ ಬರುತ್ತದೆ. ಈ ಮೂರು ಮನೆತನಗಳಿಗೆ ಸಂಬಂಧಿಸಿದ ಐತಿಹಾಸಿಕ ವಿವರಗಳು ಇದರಲ್ಲಿವೆ."[೧೦] ರಾಜಕೀಯ ಪಲ್ಲಟಗಳು, ಮೇಲಾಟಗಳಿಗೆ ನಡೆಯುವ ಹೋರಾಟಗಳಿಗೆ ಅಸಹ್ಯಪಡುವ ಚಾವುಂಡರಾಯನ ಮನವು ಅದರಿಂದ ಹೊರಬರಲು ಹಾತೊರೆಯುತ್ತದೆ.

"ರಾಜ್ಯದ ರಾಜಕೀಯ ಸ್ಥಿತ್ಯಂತರಗಳಿಂದ ಅವಸಾನದ ಅಂಚಿಗೆ ತಲುಪುತ್ತಿರುವ ಸಾಮ್ರಾಜ್ಯ, ರಾಜರ ಅಸಹಾಯಕ ಸ್ಥಿತಿ ಇದರಿಂದ ಗಾಳಿಗೊಡ್ಡಿದ ಸೆಡರಿನಂತಾದ ಮನಸ್ಥಿತಿಯ ದಂಡನಾಯಕ ಚಾವುಂಡರಾಯ ಇದರಿಂದ ಬಿಡುಗಡೆ ಹೊಂದಲು ಆಧ್ಯಾತ್ಮಕ ಮೊರೆ ಹೋಗುತ್ತಾರೆ. ಸೃಜನಶೀಲತೆಯ ಅಭಿವ್ಯಕ್ತಿಯ ಮಹತ್‌ಕಾರ್ಯಕ್ಕೆ ಮನಮಾಡುತ್ತಾರೆ. ಇದರ ಹುಡುಕಾಟ ನಿರಂತರವಾಗಿ ಇವರಲ್ಲಿ ನಡೆಯುತ್ತಿರುತ್ತದೆ"[೧೧] ಎಂಬ ಅಭಿಪ್ರಾಯವು ಸೂಕ್ತವಾಗಿದೆ. "ರಾಷ್ಟ್ರಕೂಟ ಚಕ್ರವರ್ತಿ ಕೃಷ್ಣದೇವನ ಅಖಂಡ ದಿಗ್ವಿಜಯದ ಆಳ್ವಿಕೆಯ ಕಾಲದಲ್ಲಿ, ಇಪ್ಪತ್ತೆಂಟು ವರ್ಷಗಳ ಕಾಲ, ಅವಿಚ್ಛಿನ್ನವಾಗಿ ವಿಜಯವನ್ನು ತನ್ನ ಉಳಿಗದ ಹೆಣ್ಣಾಗಿ ಮಾಡಿಕೊಂಡ, ಗಂಗಾ ತಟದಿಂದ, ಸೇತುವಿನವರೆಗಿನ ಭೂಭಾಗವನ್ನು ಏಕೈಕ ಸಾಮ್ರಾಟ ಖಡ್ಗಕ್ಕಾಗಲಿ ಆತನ ಸಾಮಂತರ ಖಡ್ಗಕ್ಕಾಗಲಿ ವಿಶ್ರಾಂತಿ ಇರಲಿಲ್ಲವೋ ಹಾಗೇ,

ಆತನ ನಂತರ ಪಟ್ಟಕ್ಕೆ ಬಂದ ಖೊಟ್ಟಿಗೆ ನಿತ್ಯ ವರ್ಷನ ಕಾಲದಲ್ಲೂ ಯಾರ ಖಡ್ಗಕ್ಕೂ ವಿಶ್ರಾಂತಿ ಇರಲಿಲ್ಲ."[೨] ಎಂಬಲ್ಲಿ ಪ್ರಭುತ್ವಕ್ಕಾಗಿ ನಡೆಯುವ ನಿರಂತರ ಹೋರಾಟ ಕುರಿತಾದ ವಿಷಾದದ ಮನೋಭಾವನೆ ಇದೆ. ಈ ಎಲ್ಲ ಕಾರಣಗಳಿಂದಾಗಿ ಚಾವುಂಡರಾಯನ ಮನಸ್ಸು ಖಡ್ಗಸನ್ಯಾಸಕ್ಕಾಗಿ ಹಂಬಲಿಸುತ್ತದೆ. ಕೊನೆಗೆ ಖಡ್ಗ ಸನ್ಯಾಸ ಸ್ವೀಕರಿಸುವ ಅವನು 'ತ್ರಿಷಷ್ಠಿ ಲಕ್ಷಣ ಮಹಾಪುರಾಣ'ದ ಗ್ರಂಥ ರಚನೆಯಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುತ್ತಾನೆ. ಜೊತೆಗೆ ಗೊಮ್ಮಟೇಶ್ವರನ ಮೂರ್ತಿ ನಿರ್ಮಾಣದ ಕಾರ್ಯವನ್ನು ಪ್ರಾರಂಭಿಸುತ್ತಾನೆ. ಕನ್ನಡ ನಾಡು, ನುಡಿ ಹಾಗೂ ಸಂಸ್ಕೃತಿಯ ಬಗೆಗೆ ತ.ರಾ.ಸು. ಅವರಿಗೆ ಇರುವ ಅಭಿಮಾನ ಈ ಕಾದಂಬರಿಯಲ್ಲಿ ವಿಶಿಷ್ಟವಾಗಿ ಅಭಿವ್ಯಕ್ತಗೊಂಡಿರುವುದನ್ನು ಗುರುತಿಸಬಹುದು.

ರಾಜಕೀಯ ಪ್ರಭುತ್ವದಿಂದ ಹೊರನಿಲ್ಲುವ ಕಾದಂಬರಿ ಅಗ್ನಿರಥ–ಮುಕ್ತಿಪಥ. ಇದು ೧೨ನೇ ಶತಮಾನದ ಶಿವಶರಣರ ಚಳುವಳಿಗೆ ಸಂಬಂಧಿಸಿದ್ದಾದರೂ ಆಗಿನ ರಾಜಕೀಯ ವಿಪ್ಲವ ಇಲ್ಲಿ ಗೌಣವಾಗಿದೆ. "ಈ ಕಾದಂಬರಿಯನ್ನು ಬರೆಯುವಲ್ಲಿ ನಾನು ಅಲ್ಲಮಪ್ರಭುವಿನ ಜೀವನವನ್ನು ಒಂದು ಐತಿಹಾಸಿಕ ವ್ಯಕ್ತಿಯಾಗಿ, ಅಂದಿನ ಇತಿಹಾಸ, ಸಮಾಜ ಮತೀಯ ಪದ್ಧತಿಗಳ ಶಿಶುವಾಗಿ ಜನಿಸಿದ ವ್ಯಕ್ತಿಯಂತೆ ಬೆಳೆಸುವ, ಹಾದಿಯನ್ನು ಹಿಡಿದಿಲ್ಲ. ಆ ಕಾಲದಲ್ಲಿ ಅಲ್ಲಮಪ್ರಭುಗಳೊಂದಿಗೆ ಒಡನಾಡಿದ ಹಿರಿಯ ಶರಣರನ್ನು ಕಾದಂಬರಿಯಲ್ಲಿ ತಂದಿದ್ದೇನಾದರೂ, ಆ ವ್ಯಕ್ತಿತ್ವಗಳಿಗೆ ಇತಿಹಾಸದ ಮೆರಗು ಕಟ್ಟುವ ಪ್ರಯತ್ನವನ್ನು ಮಾಡಿಲ್ಲ. ಸಮಕಾಲೀನ ಅರಸರ, ಆ ಕಾಲದಲ್ಲಿ ನಡೆದ ರಾಜಕೀಯ ಧಾರ್ಮಿಕ ಕ್ರಾಂತಿಗಳ ಸುದ್ದಿಯನ್ನೇ ಎತ್ತಿಲ್ಲ. ಅದಕ್ಕೆ ಕಾರಣವಿಷ್ಟೇ ಅಲ್ಲಮಪ್ರಭುವಿನಂಥ, ಎಲ್ಲಾ ಕಾಲಕ್ಕೂ 'ಜ್ಞಾನದ ಗುರುವಾಗಿ ನಿಲ್ಲಬಲ್ಲಂಥ ವ್ಯಕ್ತಿತ್ವದ ಬಗ್ಗೆ ಇತಿಹಾಸ ಬಹಳ ಗೌಣ. ಆತನ ಬಾಳು ಕಾಲದ ಸೃಷ್ಟಿಯಲ್ಲ, ಸಹಜ ಶಕ್ತಿಯಿಂದ ವಿಕಸಿಸುವ ಪವಾಡ. ಅದನ್ನೇ ಈ ಕಾದಂಬರಿ ರೂಪದ ವ್ಯಕ್ತಿ ಚಿತ್ರಣದಲ್ಲಿ ಚಿತ್ರಿಸಲು ಯತ್ನಿಸಿದ್ದೇನೆ"[೧೩] ಎಂದು ತ.ರಾ.ಸು. ಅವರು ಈ ಕಾದಂಬರಿಯ ಉದ್ದೇಶದ ಹಿನ್ನೆಲೆಯನ್ನು ಸ್ಪಷ್ಟಪಡಿಸಿದ್ದಾರೆ. ಆದಾಗ್ಯೂ ಪ್ರಭುತ್ವದ ಪಾರಂಪರಿಕ ವಿಚಾರವಾಗಿ ಕೆಲ ಮಾತುಗಳು ಅಲ್ಲಿಲ್ಲಿ ಕಾಣಸಿಗುತ್ತವೆ. ನಾಗರಖಂಡದ ಬಳ್ಳಿಗಾವೆಯ ಬಗೆಗೆ ವಿವರಣೆ ಇದೆ. ಅಲ್ಲಯ್ಯನು ಅರಸರ ನಾಗಾವಾಸಾಧಿಪತಿ ಪರಂಪರೆಗೆ ಸೇರಿದವನು. ಆದರೆ ಆ ಅರಸರ ಆಶ್ರಯ ಮತ್ತು ನಾಗಾವಾಸಾಧಿಪಂತ್ಯದಿಂದ ವಿಮುಖನಾದವನು. ಅಧಿಪತ್ಯ ಕುರಿತು ಅವನ ತಂದೆ ಹೇಳುವ ಈ ಮಾತುಗಳು ಉಲ್ಲೇಖಾರ್ಹವಾಗಿವೆ. "ನಿನಗೆ ಗೊತ್ತಿಲ್ಲ ಅಲ್ಲಯ್ಯ, ನಮ್ಮ ವಂಶದವರು ತಲಾತಲಾಂತರದಿಂದಲೂ ಅರಸರ ನಾಗಾವಾಸಾಧಿಪತಿಗಳಾಗಿದ್ದವರು. ಅರಸರಿಗೆ ಅವರ ಪ್ರಭುಪರಂಪರೆ ಹೇಗೆ ವಂಶಪಾರಂಪರ್ಯವಾಗಿ ಪ್ರಾಪ್ತವಾಗಿದೆಯೋ, ಹಾಗೆ ನಮ್ಮ ವಂಶಕ್ಕೆ ನಾಗವಾಸಾಧಿಪತ್ಯ ಕ್ರಮ ಪ್ರಾಪ್ತವಾಗಿದೆ. ಆದ್ದರಿಂದ ನನ್ನ ಬಳಿಕ ಆ ಅಧಿಕಾರ, ನನ್ನ ಮಗನಿಗೆ ಮಿಸಲು ಎಂದಾಗ, 'ಅರಸರ ಊಳಿಗಮಾಡುವುದು, ಅಂತಃಪುರದ ತೊತ್ತಿನ ಕೆಲಸದ ಕನ್ಯೆಯರ

ಮೇಲೆ ಅಧಿಕಾರ ಮಾಡುವುದೂ ಒಂದು ವಿದ್ಯೆಯೋ? ಅದೇನು ವೇದವೋ ಉಪನಿಷತ್ತೋ?"[೧೪] ಎಂದು ಅಲ್ಲಯ್ಯ ಕೊಂಚ ಖಾರವಾಗಿಯೇ ತನ್ನ ತಂದೆಯನ್ನು ಪ್ರಶ್ನಿಸುವ ಪ್ರಸಂಗ ಎದುರಾಗುತ್ತದೆ. ಈ ಮಾತಿನ ಉಲ್ಲೇಖವಿಷ್ಟೆ ಅಲ್ಲಯ್ಯನು ಅರಸರ ಆಶ್ರಯ ಬಯಸದೆ. ಆಧ್ಯಾತ್ಮಕ ಪಾರಮ್ಯವನ್ನು ಮೆರೆದವನು. ಯಾಕೆಂದರೆ, ಅಲ್ಲಮನಿಗೆ ಪ್ರಭುತ್ವದಲ್ಲಿ ನಂಬಿಕೆಯಿಲ್ಲ. ಅದು ಅವನಿಗೆ ಬೇಕಾಗಿಯೂ ಇಲ್ಲ. ಇಲ್ಲಿ ಮುಖ್ಯವಾಗಿ ಆಧ್ಯಾತ್ಮಿಕ ಹಿನ್ನೆಲೆಯೊಂದಿಗೆ ಅಲ್ಲಮನ ಜೀವನದ ಸಿದ್ಧಿ ಮತ್ತು ಸಾಧನೆಗೆ ಸಂಬಂಧಿಸಿದ ವಿವರಗಳನ್ನು ತ.ರಾ.ಸು ಅವರು ನೀಡಿದ್ದಾರೆ. ಹರಿಹರನ 'ಪ್ರಭುದೇವರ ರಗಳೆ' ಹಾಗೂ ಚಾಮರಸನ 'ಪ್ರಭುಲಿಂಗಲೀಲೆ'ಗಳು ಈ ಕಾದಂಬರಿಯ ಪ್ರಮುಖ ಆಕರಗಳಾಗಿವೆ.

ಮದಕರಿನಾಯಕನ ಮರಣದಿಂದ ಪ್ರಾರಂಭವಾಗುತ್ತದೆ. ಚಿತ್ರದುರ್ಗದ ಪಾಳೆಯಗಾರರನ್ನು ಕುರಿತ ಕಾದಂಬರಿ ಸರಣಿ. ಈ ಸರಣಿಯ ಮೊದಲ ಕಾದಂಬರಿ 'ಕಂಬನಿಯ ಕುಯಿಲು'. ಇಮ್ಮಡಿ ಮದಕರಿ ನಾಯಕನು ಜನಾನುರಾಗಿಯಾಗಿದ್ದನು. ಅಷ್ಟೇಕೆ ವೀರತನದಿಂದ ಹೋರಾಡಿ ತನ್ನ ಕಾಲಾವಧಿಯಲ್ಲಿ ಅನೇಕ ರೀತಿಯ ಅಭಿವೃದ್ಧಿ ಕಾರ್ಯಗಳನ್ನು ಮಾಡಿದನು. ಈ ಕಾರಣಕ್ಕಾಗಿ ಅನೇಕ ಬಿರುದುಗಳು ಅವನ ಕಿರೀಟಕ್ಕೆ ಗರಿಮೂಡಿಸಿದ್ದವು. "ಶ್ರೀಮನ್ಮಹಾನಾಯಕಾಚಾರ್ಯ, ಕಾಮಗೇತಿ ಕಸ್ತೂರಿ, ವೀರಮತ್ತೀ ಕುಲತಿಲಕ, ಹಗಲು ಕಗ್ಗೋಲೆ ಮಾನ್ಯ, ಗಾದ್ರಿಮಲೆ ಹೆಬ್ಬುಲಿ, ಗಂಡುಗೊಡಲು ಸರ್ಜ, ಸಂಸ್ಥಾನ, ಸಂಸ್ಥಾನ ಚಿತ್ರದುರ್ಗ, ರಣವೀರ ಇಮ್ಮಡಿ ಮದಕರಿನಾಯಕನು ದಿವಂಗತರಾದರು".[೧೫] ಎಂದು ತ.ರಾ.ಸು. ಅವರು ಕಾದಂಬರಿಯ ಆರಂಭದಲ್ಲಿ ಮದಕರಿನಾಯಕನ ಚಿತ್ರಣವನ್ನು ಕೊಟ್ಟಿದ್ದಾರೆ. ಇವನ ಕಾಲಾನಂತರ ಪಟ್ಟಾಧಿಕಾರದ ಸಮಸ್ಯೆ ತಲೆದೋರುತ್ತದೆ. ಇದಕ್ಕೆ ಕಾರಣ, ನಾಯಕನು ಗಂಡು ಸಂತಾನವಿಲ್ಲದೇ ಮರಣವನ್ನಪ್ಪಿದ್ದಾಗಿದೆ. ಇದು ರಾಜಕೀಯ ಗೊಂದಲಕ್ಕೂ ಕಾರಣವಾಗುತ್ತದೆ. ಪ್ರಭುತ್ವದ ಪಶ್ನೆಯಾಗಿಯೂ ಕಾಡುತ್ತದೆ. ನಾಯಕನ ಕಿರಿಯ ಪತ್ನಿಯಾದ ಗೌರವ್ವ ನಾಗತಿಯು ಉತ್ತರಾಧಿಕಾರದ ಪ್ರಶ್ನೆಯು ನಿರ್ಧಾರವಾದ ಬಳಿಕವೇ ಶವಸಂಸ್ಕಾರ ನಡೆಯಬೇಕೆಂದು ಪಟ್ಟುಹಿಡಿಯುತ್ತಾಳೆ. ಶವಸಂಸ್ಕಾರ ನೆರವೇರಿಸಿದವರಿಗೆ ಪಟ್ಟಾಧಿಕಾರ ಸಿಗುತ್ತದೆಂಬ ನಂಬಿಕೆ ಅವಳದು. ರಾಜ್ಯದ ಹಿರಿಯ ಸಚಿವರಾದ ಭುವನಪ್ಪನವರ ಭರವಸೆಯೊಂದಿಗೆ ಗೌರವ್ವ ನಾಗತಿಯು ಶವಸಂಸ್ಕಾರಕ್ಕೆ ಅನುಮತಿ ನೀಡುತ್ತಾಳೆ. ತನ್ನ ತಮ್ಮನನ್ನು ದತ್ತು ಸ್ವೀಕರಿಸಿ ಪಟ್ಟಕ್ಕೆ ತರಬೇಕೆಂಬ ಆಸೆ ಇವಳದಾಗಿರುತ್ತದೆ. ಈ ಒಂದು ಜವಾಬ್ದಾರಿಯನ್ನು ಹಿರಿಯ ಓಬವ್ವ ನಾಗತಿಗೆ ವಹಿಸುತ್ತಾಳೆ. ಓಬವ್ವ ನಾಯಕಿ ಲಿಂಗಣ್ಣ ನಾಯಕನನ್ನು ಅಧಿಕಾರ ತ್ಯಾಗಮಾಡುವಂತೆ ಮನವೊಲಿಸುತ್ತಾಳೆ. ಓಬಣ್ಣ ನಾಯಕನನ್ನು ಪಟ್ಟಕ್ಕೆ ತರಲಾಗುತ್ತದೆ. ಮುದ್ದಣ್ಣನಾದಿಯಾಗಿ ಅನೇಕ ದಳವಾಯಿಗಳು ಈ ಕುರಿತು ಪ್ರತಿಭಟನೆ ನಡೆಸುತ್ತಾರೆ. ಕೊನೆಗೆ ದಳವಾಯಿ ದೇಸಣ್ಣನು ಅರಮನೆಯವರ ನಿರ್ಧಾರಕ್ಕೆ ಬದ್ಧನಾಗುತ್ತಾನೆ. ಇದರಿಂದ

ದಳವಾಯಿ ಮುದ್ದಣ್ಣನು ಕೆಂಡಾಮಂಡಲವಾಗುತ್ತಾನೆ. ಅಷ್ಟೇಕೆ ದೇಸಣ್ಣನನ್ನು ಕೊಲೆಗೈಯುತ್ತಾನೆ. ಪಟ್ಟಗಾರಿಕೆಯ ಸಲುವಾಗಿ ಅತೃಪ್ತರಾದ ಸೈನಿಕರನ್ನು ಸೇರಿಕೊಂಡು ದಳವಾಯಿ ಮುದ್ದಣ್ಣನು ದಂಗೆಯೇಳುತ್ತಾನೆ. ಭೂಗತನಾಗಿದ್ದುಕೊಂಡು ಚಿಕ್ಕಣ್ಣನಾಯಕನನ್ನು ಪಟ್ಟಕ್ಕೆ ತರುತ್ತಾನೆ. ಓಬಣ್ಣ ನಾಯಕನನ್ನು ಬರ್ಬರವಾಗಿ ಹತ್ಯೆಗೈಯುತ್ತಾನೆ. ಈ ಸುದ್ದಿ ತಿಳಿದ ಹಿರಿಯ ಓಬವ್ವ ನಾಗತಿ ಹೊಂಡಕ್ಕೆ ಬಿದ್ದು ಪ್ರಾಣ ಬಿಡುತ್ತಾಳೆ. ಇಷ್ಟೆಲ್ಲ ನಡೆಯುವುದು ಪ್ರಭುತ್ವಕ್ಕಾಗಿಯೇ ಆಗಿದೆ. ಇದನ್ನು ತ.ರಾ.ಸು. ಅವರು ರಾಜನಿಷ್ಠರು ಮತ್ತು ರಾಜದ್ರೋಹಿಗಳ ಮಧ್ಯ ನಡೆಯುವ ಸಂಘರ್ಷಾತ್ಮಕ ಕಥೆಯಂತೆ ಚಿತ್ರಿಸಿದ್ದು ಕಂಡುಬರುತ್ತದೆ.

ಈ ಕಾದಂಬರಿಯಲ್ಲಿ ತ.ರಾ.ಸು. ಅವರ ಕಾಲ್ಪನಿಕತೆ ವಿಶೇಷವಾಗಿ ಎದ್ದುಕಾಣುತ್ತದೆ. ಇದಕ್ಕೆ ಐತಿಹಾಸಿಕ ಆಕರಗಳ ಕೊರತೆಯು ಕಾರಣವಾಗಿದೆಯೆಂದೆನಿಸುತ್ತದೆ. "ಈ ಕಾದಂಬರಿಯ ಕಥಾವಸ್ತು ಚಿತ್ರದುರ್ಗದ ಇತಿಹಾಸಕ್ಕೆ ಸಂಬಂಧಿಸಿದುದು. ಚಿತ್ರದುರ್ಗದ ಇತಿಹಾಸದ ಆಕರ ಗ್ರಂಥಗಳಲ್ಲಿ ಈ ಘಟನೆಯ ಬಗ್ಗೆ ದೊರೆಯುವ ವಿವರ ತೀರ ಅಲ್ಪ. ದಿವಂಗತ ಶ್ರೀ. ಎಂ.ಎಸ್. ಪುಟ್ಟಣ್ಣನವರ 'ಚಿತ್ರದುರ್ಗದ ಪಾಳೆಯಗಾರರು' ಎಂಬ ಗ್ರಂಥದಲ್ಲಿ ದೊರೆಯುವುದು. ಕೇವಲ ನಾಲ್ಕು ಸಾಲು. 'ಚಿತ್ರದುರ್ಗದ ಬಖೈರು' ಎಂಬ ಕೈಬರಹದ ಪುಸ್ತಕದಲ್ಲಿ ದೊರೆತುದೂ ಇಷ್ಟೆ. ಅಷ್ಟು ಕಥಾ ವಸ್ತುವಿಗೆ, ಇತಿಹಾಸದಲ್ಲಿ ದೊರಕುವ ಬೇರಷ್ಟು ವಿವರವನ್ನು ಬೇರೆಸಿ, ಅದರೊಂದಿಗೆ ನನ್ನ ಕಲ್ಪನೆಯನ್ನು ಧಾರಾಳವಾಗಿ ಬೆರೆಸಿ ಈ ಕಾದಂಬರಿಯನ್ನು ಹೆಣೆದಿದ್ದೇನೆ"[೧೪] ಎಂದು ತ.ರಾ.ಸು. ಅವರು ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. ಅದೇನಿದ್ದರೂ ಪ್ರಭುತ್ವಕ್ಕಾಗಿ ಈ ಕಾದಂಬರಿಯಲ್ಲಿ ರಕ್ತದ ಹೊಳೆಯನ್ನೇ ತ.ರಾ.ಸು. ಹರಿಸಿದ್ದಾರೆ.

ಓಬಣ್ಣನಾಯಕನು ಕೊಲೆಯಾದ ಬಳಿಕ ಚಿಕ್ಕಣ್ಣನಾಯಕನು ದುರ್ಗದ ಪ್ರಭುವಾಗುತ್ತಾನೆ. ಇದರಲ್ಲಿ ಮುದ್ದಣ್ಣನ ಪಾತ್ರ ಪ್ರಮುಖವಾಗುತ್ತದೆ. ಈ ಸನ್ನಿವೇಶದ ಚಿತ್ರಣದೊಂದಿಗೆ 'ರಾಜ್ಯದಾಹ' ಕಾದಂಬರಿ ಪ್ರಾರಂಭವಾಗುತ್ತದೆ. ದಳವಾಯಿ ಮುದ್ದಣ್ಣ ನಾಯಕನ ಕಪಿಮುಷ್ಠಿಯಲ್ಲಿ ಆಡಳಿತ ನಡೆಯುತ್ತದೆ. ಚಿಕ್ಕಣ್ಣ ನಾಯಕನನ್ನು ಪಟ್ಟದಲ್ಲಿ ಕೂಡಿಸಿ, ಆತನಿಗೆ ಮದಿರೆ, ಮಾನಿನಿಯರ ಹುಚ್ಚು ಹಿಡಿಯುವಂತೆ ಮಾಡುತ್ತಾನೆ. ಆ ಮೂಲಕ ಮುದ್ದಣ್ಣನು ಸರ್ವಾಧಿಕಾರಿಯಾಗಿ ಮೆರೆಯುತ್ತಾನೆ. ಚಿತ್ರದುರ್ಗದ ಅಂದಿನ ಪರಿಸ್ಥಿತಿಯನ್ನು ಇಂದಿನ ಸ್ಥಿತಿಗೆ ಇರಿಸಿಕೊಂಡು ಚಿಂತಿಸುವ ತ.ರಾ.ಸು ಅವರ ಬರವಣಿಗೆಯ ಶೈಲಿ ಇಲ್ಲಿ ಅದ್ಭುತವಾಗಿ ಮೂಡಿಬಂದಿದೆ. "ದುರ್ಗದ ಪಟ್ಟಾಭಿಷಿಕ್ತ ದೊರೆಯ ಕಗ್ಗೊಲೆ ನಡೆದ ವಿಚಾರವನ್ನು, ಅಲ್ಲಿನ ವಾತಾವರಣವನ್ನು, ನಡೆದ ರಕ್ತ ಪಾತವನ್ನು ಇದಕ್ಕಿಂತ ಚೆನ್ನಾಗಿ ಹೇಳಲು ಸಾಧ್ಯವೇ? ಓಬಣ್ಣ ನಾಯಕರ ಕಗ್ಗೊಲೆ ನಡೆದಾಗ ಅಲ್ಲಿ ಹೇಗಿದ್ದಿರಬಹುದು ಎಂಬ ಅವರ ಕಲ್ಪನೆ ಅಪೂರ್ವವಾದದ್ದು. ಅದು ಸಿನಿಮೀಯ ರೀತಿಯಲ್ಲಿ ಕಣ್ಣ ಮುಂದೆ

ಹಾದು ಹೋಗುತ್ತದೆ. ಇಂತಹ ಘಟನೆ ನಡೆದಾಗ ಜನ ಏನು ಮಾತನಾಡುತ್ತಾರೆ. ರಾಜ್ಯದಲ್ಲಿ ಉಂಟಾದ ತುರ್ತುಪರಿಸ್ಥಿತಿಯ ವಾತಾವರಣ, ನಾಯಕರ ಪತ್ನಿಯ ಆತ್ಮಹತ್ಯೆ, ಜನತೆಯಲ್ಲುಂಟಾದ ಹಾಹಾಕಾರ, ಪರಿಸ್ಥಿತಿಯ ದುರ್ಲಾಭ ಪಡೆದ ಜನತೆ, ರಾಜ ನಿಷ್ಠರಿಗಾದ ತೊಂದರೆಗಳು ಒಂದು ರಾಜ್ಯದಲ್ಲಿ ಆಡಳಿತದ ವಿರುದ್ಧ ದಂಗೆ ಉಂಟಾದಾಗ ಹೇಗೆಲ್ಲಾ ಬದಲಾವಣೆಗಳಾಗುತ್ತದೆ ಎಂಬುದನ್ನು ತೋರಿಸುತ್ತದೆ, ವಿವರಿಸುತ್ತದೆ"[೧೭] ಎಂಬ ಮುರಲಿಕೃಷ್ಣ ಬೆಳಗಾಲು ಅವರ ಮಾತುಗಳು ಸತ್ಯಕ್ಕೆ ಹತ್ತಿರವಾಗಿವೆ.

ದಳವಾಯಿ ಮುದ್ದಣ್ಣನ ಕಪಿಮುಷ್ಠಿಯಿಂದ ಚಿಕ್ಕಣ್ಣ ನಾಯಕನನ್ನು ಬಿಡಿಸುವ ಪ್ರಯತ್ನವನ್ನು ರಾಜನಿಷ್ಠರಾದ ಪರಶುರಾಮಪ್ಪ ಮತ್ತು ಭರಮಣ್ಣ ನಾಯಕರು ಮಾಡುತ್ತಾರೆ. ಆದರೆ ಚಿಕ್ಕಣ್ಣ ನಾಯಕ ಮುದ್ದಣ್ಣನ ಮಾತನ್ನು ನಂಬುತ್ತಾನೆ. "ಅಂದು ಚುಕ್ಕಣ್ಣ, ಚಿಕ್ಕಣ್ಣ ನಾಯಕನಿಗೆ ಭರವಸೆ ನೀಡಿದ ಸುಖ, ಕೇವಲ ತುದಿನಾಲಿಗೆಯ ನುಡಿಯಲ್ಲಿ ನಿರ್ಮಿತವಾದ ಸ್ವಪ್ನಸೌಧವಾಗಲಿಲ್ಲ. ಚಿಕ್ಕಣ್ಣ ನಾಯಕ, ತನ್ನ ಸಮ್ಮತಿಯನ್ನು ಸೂಚಿಸುತ್ತಿದ್ದ ಹಾಗೆಯೇ, ದಿನಕ್ಕೊಂದು, ಬಗೆಯಲ್ಲಿ, ಆ ಸ್ವರ್ಗ, ಚಿಕ್ಕಣ್ಣ ನಾಯಕನ ಶಯ್ಯೆಯಲ್ಲಿ ಮೈ ತಾಳಲಾರಂಭಿಸಿತು. ಲೋಕದಲ್ಲಿ ಮನುಷ್ಯನ ಬಯಕೆಗಳೆಲ್ಲದ್ದಕ್ಕೂ ತೃಪ್ತಿಯ ಮಿತಿ ಎಂಬುದಿದೆ; ಹೆಣ್ಣು, ಹೊನ್ನು, ಮದಿರೆ ಈ ಮೂರಕ್ಕೆ ಮಾತ್ರ ತೃಪ್ತಿಯ ಮಿತಿಯ ಬೇಡಿಯಿಲ್ಲ. ತೃಪ್ತಿಯಿಂದ ತೀರುವುದಿಲ್ಲ. ಈ ಬಯಕೆಗಳು, ದೊರೆತಷ್ಟು ಮತ್ತಷ್ಟುಬೇಕೆಂಬ ಬಕಾಸುರನ ಸಂತಾನ. ಒಮ್ಮೆ ಮನುಷ್ಯ ಈ ರಾಕ್ಷಸ ಸಹಜವನ್ನು ತಣಿಸುವ ಕೈಂಕರ್ಯವನ್ನು ಕೈಕೊಂಡನೋ ಮುಗಿಯಿತು: ಅವನ ಅಳಿವಿನೊಂದಿಗೇ ಆ ಬಯಕೆಯ ಮುಕ್ತಾಯ. ಈ ಸತ್ಯಕ್ಕೆ ಚಿಕ್ಕಣ್ಣ ನಾಯಕನೂ ಅಪವಾದವಾಗಲಿಲ್ಲ."[೧೮] ಎಂಬಂತೆ ತ.ರಾ.ಸು. ಅವರು ಚಿಕ್ಕಣ್ಣ ನಾಯಕನ ಅದೋಗತಿಯ ಚಿತ್ರಣವನ್ನು ಕೊಡುತ್ತಾರೆ. ಅಂದಿನ ರಾಜಮಹಾರಾಜ ಸ್ಥಿತಿಗತಿಯಂತೆ ಇಂದಿನ ರಾಜಕಾರಣದ ಸ್ಥಿತಿಗತಿಯೂ ನಮ್ಮ ಮುಂದೆ ಕಟ್ಟುವಂತೆ ತ.ರಾ.ಸು. ಅವರು ಅಂದಿನ ಚಿತ್ರಣವನ್ನು ಚಿತ್ರಿಸುತ್ತಾರೆ. ಚಿಕ್ಕಣ್ಣ ನಾಯಕ ಇಲ್ಲಿ ಬೆಂದಬೊಂಬೆಯಂತೆ ಕಾಣುತ್ತಾನೆ. ಅವನನ್ನು ಮುಂದಿಟ್ಟುಕೊಂಡು ದಳವಾಯಿ ಮುದ್ದಣ್ಣ ತನ್ನದೇ ಆದ ಚಾಣಾಕ್ಷ, ಕಾರ್ಯ, ಸಾಹಸಮಯ ಗುಣಗಳನ್ನು ಮೆರೆದು 'ರಾಜ್ಯದಾಹ'ವನ್ನು ತೀರಿಸಿಕೊಳ್ಳುವ ವ್ಯಕ್ತಿಯಂತೆ ಕಾಣುತ್ತಾನೆ.

ತ.ರಾ.ಸು. ಅವರ ವೀರರಸದ ಆರ್ಭಟವು 'ರಕ್ತರಾತ್ರಿ' ಕಾದಂಬರಿಯಲ್ಲಿ ಮುಂದುವರೆಯುತ್ತದೆ. ಚಿಕ್ಕಣ್ಣ ನಾಯಕನ ಮರಣದ ನಂತರ ದಳವಾಯಿ ಮುದ್ದಣ್ಣ ತಾನೇ ಅಧಿಕಾರಕ್ಕೆ ಬರಲು ಪ್ರಯತ್ನಿಸುತ್ತಾನೆ. ಈ ಸಮಯದಲ್ಲಿ ಅನೇಕ ಕೊಲೆ ಸುಲಿಗೆಗಳು ನಡೆಯುತ್ತವೆ. ರಾಜನಿಷ್ಠರು ಲಿಂಗಣ್ಣನಾಯಕನನ್ನು ಅಧಿಕಾರಕ್ಕೆ ತರಲು ಪ್ರಯತ್ನಿಸುತ್ತಾರೆ. ಆದರೆ ಲಿಂಗಣ್ಣನಾಯಕ ಕೊಲೆ ಸುಲಿಗೆಗಳಿಂದಾಗಿ ವಿರಕ್ತಿ ಭಾವವನ್ನು ತಳೆಯುತ್ತಾನೆ.

'ದುರ್ಗದ ಹಿತಕ್ಕಾಗಿ ಈ ಅಧಿಕಾರವನ್ನು ಒಪ್ಪಿಕೊಳ್ಳಿ' ಎಂದು ಭುವನಪ್ಪನವರ ಮಗ ಪರಶುರಾಮಪ್ಪ ಹೇಳಿದಾಗ, ಲಿಂಗಣ್ಣ ನಾಯಕನು ಪ್ರತಿಕ್ರಿಯಿಸುವ ರೀತಿಯನ್ನು ನೋಡಿ, 'ನೀವು ಈ ಮಾತು ಹೇಳುತ್ತೀರಾ ಪರಶುರಾಮಪ್ಪನವರೇ?' ಪರಶುರಾಮಪ್ಪನ ಮಾತು ಕೇಳಿ ವ್ಯಥೆಗೊಂಡು ಕೇಳಿದ ಲಿಂಗಣ್ಣ ನಾಯಕ. "ನಿಮಗಿನ್ನೂ ಈ ಸಿಂಹಾಸನದ ಭ್ರಾಂತಿ ತೊಲಗಿಲ್ಲವೇ? ಹುಟ್ಟಿದಂದಿನಿಂದಲೂ ಸಾಯುವವರೆಗೂ, ಎಪ್ಪತ್ತು ವರ್ಷಗಳ ಕಾಲ ಈ ಸಿಂಹಾಸನಕ್ಕೇ ಜೀವವನ್ನು ತೆಯ್ದ ಭುವನಪ್ಪನವರನ್ನು ಬೀದಿಯ ಭಿಕಾರಿ ಹೆಣವಾಗಿ ಮಾಡಿದ ಈ ಸಿಂಹಾಸನದ ಬಗ್ಗೆ ಇನ್ನೂ ನಿಮಗೆ ಮೋಹವಿದೆಯೇ? ನೀವೆಲ್ಲರೂ ನನ್ನ ಹಿತೈಷಿಗಳು, ದುರ್ಗದ ಹಿತೈಷಿಗಳು : ನಾನು ಬಲ್ಲೆ. ನಿಮ್ಮ ಮಾತಿಗೆ ಇಲ್ಲವೆನ್ನುವ ಯೋಗ್ಯತೆಯೂ ನನ್ನದಲ್ಲ. ಅದಕ್ಕಾಗಿಯೇ ನಿಮ್ಮಲ್ಲಿ ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ ತಾನಾಗಿಯೇ ತೊಲಗಿ ಹೋಗಿರುವ ಈ ಪಿಶಾಚಿಯನ್ನು ಮತ್ತೆ ನನಗೆ ಕಟ್ಟಬೇಡಿ. ನನ್ನನ್ನು ನಂಬಿದ ತಾಯಿ ನೀರಿನ ಪಾಲಾಗಿ ಹೋದ ಮೇಲೆ ನಾನು ಬದುಕಿರಬಾರದು. ಆದರೂ ಆತ್ಮಹತ್ಯೆಯ ಪಾಪಕ್ಕಳುಕಿ, ಜೀವಂತ ಶವದಂತೆ ಬದುಕಿದ್ದೇನೆ. ಆ ತಾಯಿಯನ್ನು ಉಳಿಸಿಕೊಂಡು ಸೇವೆ ಮಾಡುವಷ್ಟು ಭಾಗ್ಯ ಈ ನಿರ್ಭಾಗ್ಯನ ಹಣೆಯಲ್ಲಿ ಬರೆದಿರಲಿಲ್ಲ. ಇದ್ದಷ್ಟು ದಿನ ಆಕೆಯ ಸಮಾಧಿಗೆ ಹೂವು ಹಾಕಿ, ದೀಪ ಹಚ್ಚಿ ಕಣ್ಣುಮುಚ್ಚುತ್ತೇನೆ. ಅಷ್ಟಕ್ಕೆ ನನಗೆ ಅವಕಾಶ ಕೊಡಿ, ನನಗೆ ಬೇರಾವ ಸ್ವರ್ಗವೂ ಬೇಡ."[೧೯] ಎಂದು ನುಡಿಯುತ್ತಾನೆ. ಆದಾಗ್ಯೂ ಕೊನೆಗೆ, ಹಟ್ಟಿ ಮಲ್ಲವ್ವ ನಾಗತಿ ಮತ್ತು ಉಗ್ರ ಚನ್ನವೀರ ಸ್ವಾಮಿಗಳ ಮೂಲಕ ನಡೆದ ಸಂಧಾನದೊಂದಿಗೆ ಲಿಂಗಣ್ಣ ನಾಯಕನು ಅಧಿಕಾರ ಸ್ವೀಕರಿಸಲು ಒಪ್ಪಿಕೊಳ್ಳುತ್ತಾನೆ. ದಳವಾಯಿ ಮುದ್ದಣ್ಣನು ಒಲ್ಲದ ಮನಸ್ಸಿನೊಂದಿಗೆ ಲಿಂಗಣ್ಣನಾಯಕನನ್ನು ಪಟ್ಟಕ್ಕೇರಿಸುತ್ತಾನೆ. ಆದರೆ ತನ್ನ ಸರ್ವಾಧಿಕಾರವನ್ನು ಮುಂದುವರೆಸುತ್ತಾನೆ. ಮುದ್ದಣ್ಣನ ಸರ್ವಾಧಿಕಾರ ಕೊನೆಗಾಣಿಸಲು ನಾಯಕನು ದುರ್ಗದ ನಿಷ್ಠರೊಂದಿಗೆ ಸಮಾಲೋಚಿಸುತ್ತಾನೆ. ಇದನ್ನರಿತ ಮುದ್ದಣ್ಣ ಅರಮನೆಗೆ ಹಿರಿಯರು ಬಾರದಂತೆ ನಿರ್ಬಂಧ ಹೇರುತ್ತಾನೆ. ಈ ಕಾರಣಕ್ಕಾಗಿ ಲಿಂಗಣ್ಣ ನಾಯಕನು ಮುದ್ದಣ್ಣನಿಗೆ ತಿರುಗಿಬೀಳುತ್ತಾನೆ.

ಕೊನೆಗೆ ದಳವಾಯಿ ಮುದ್ದಣ್ಣನು ಲಿಂಗಣ್ಣ ನಾಯಕನನ್ನು ಬಂಧನದಲ್ಲಿರಿಸುತ್ತಾನೆ. ಚಿತ್ರಹಿಂಸೆಯನ್ನು ನೀಡುತ್ತಾನೆ. ನಾಯಕನ ಒಂದು ಕೈಯನ್ನು ಕತ್ತರಿಸಿ, ಮೆರವಣಿಗೆ ಮಾಡಿಸುತ್ತಾನೆ. ದುರ್ಗದ ಹೊರಭಾಗದ ಉದ್ಯಾನಕ್ಕೆ ಕರೆತಂದು ಬರ್ಬರವಾಗಿ ಕೊಲೆಗೈಯುತ್ತಾನೆ. ಈ ಬೀಭತ್ಸ ದೃಶ್ಯವನ್ನು ಜನತೆ ಮೂಕವಿಸ್ಮಿತರಾಗಿಯೇ ನೋಡುತ್ತಾರೆ. 'ನನ್ನ ಹಗೆ ತೀರಿತು. ಇಂದಿನಿಂದ ದುರ್ಗ ನನ್ನದು' ಎಂದು ಮುದ್ದಣ್ಣನು ವಿಕಟ ಅಟ್ಟಹಾಸದ ನಗೆಯನ್ನು ಬೀರುತ್ತಾನೆ. ರಾಜನಿಷ್ಠರು ಮತ್ತು ರಾಜದ್ರೋಹಿಗಳ ನಡುವಿನ ಸಂಘರ್ಷಾತ್ಮಕ ಕತೆಯಂತೆ ತ.ರಾ.ಸು. ಅವರು ಈ ಕಾದಂಬರಿಯ ಚಿತ್ರಣವನ್ನು ಕೊಟ್ಟಿದ್ದಾರೆ.

ಲಿಂಗಣ್ಣ ನಾಯಕರ ಕೊಲೆಯೊಂದಿಗೆ ಮತ್ತೀವಂಶ ನಿರ್ಮೂಲನೆಯಾಗುತ್ತದೆ. ದಳವಾಯಿ ಮುದ್ದಣ್ಣನು ದುರ್ಗದ ಮೇಲೆ ಸರ್ವಾಧಿಕಾರ ಸ್ಥಾಪಿಸಲು ಮುಂದಾಗುತ್ತಾನೆ. ಇದು 'ತಿರುಗು ಬಾಣ' ಕಾದಂಬರಿಯ ಆರಂಭದಲ್ಲಿ ಕಾಣಿಸಿಕೊಳ್ಳುವ ಚಿತ್ರಣ. ಆದರೆ ಸರ್ವಾಧಿಕಾರಕ್ಕಾಗಿ ದುರ್ಗದ ನಿಷ್ಠರ ಮೇಲೆ ಅವನು ಹೂಡುವ ಸಂಚು ಅವನಿಗೇ 'ತಿರುಗುಬಾಣ'ವಾಗುವ ಚಿತ್ರಣ ಕಾದಂಬರಿಯ ಅಂತ್ಯದಲ್ಲಿದೆ.

ರಾಜಕೀಯ ಮಹತ್ವಾಕಾಂಕ್ಷೆಯ ಮುದ್ದಣ್ಣನು ಸಿಂಹಾಸನದ ಮೇಲೆ ಅಧಿಕಾರ ಸ್ಥಾಪಿಸಲು ನಡೆಸುವ ಅವನ ರಾಕ್ಷಸ ಸ್ವಭಾವವು ಕ್ರೌರ್ಯದ ಭಯಾನಕತೆಯನ್ನು ಸೂಚಿಸುತ್ತದೆ. ಬಲಾತ್ಕಾರದ ಹಿಂಸೆಯ ಮೂಲಕ ಜನತೆಯನ್ನು ತನ್ನ ಹಿಡಿತದಲ್ಲಿರಿಸಿಕೊಳ್ಳುವ ಪ್ರಯತ್ನ ಮಾಡುತ್ತಾನೆ. ಲಿಂಗಣ್ಣ ನಾಯಕನನ್ನು ಹಿಂಸಿಸಿ, ಕೊಲ್ಲುವುದಲ್ಲದೆ ದುರ್ಗಕ್ಕೆ ನಿಷ್ಠರಾದ ಹಿರಿಯರನ್ನು, ಅಧಿಕಾರಿಗಳನ್ನು ಕಾರಾಗೃಹದಲ್ಲಿರಿಸುತ್ತಾನೆ. ಪರಶುರಾಮಪ್ಪ, ದಳವಾಯಿ ಭರಮಣ್ಣ ಕಾರಾಗೃಹದಲ್ಲಿ ಕೊಳೆಯುವಂತೆ ಮಾಡುತ್ತಾನೆ. ಆದರೆ "ಗಿರಿಜೆ ಎಂಬ ಹೆಣ್ಣುಮಗಳು ಅವನ ಕೈಗೆ ಸಿಗದೆ ಗೆರಿಲ್ಲಾ ಹೋರಾಟಗಾರ್ತಿಯಂತೆ ತಲೆಮರೆಸಿಕೊಂಡು ಓಡಾಡುತ್ತಾ, ನಾಯಕನಿಷ್ಠ ಪ್ರಜೆಗಳ ಸಂಘಟನೆಯಲ್ಲಿ ತೊಡಗುತ್ತಾಳೆ. ಅಂಥವಳನ್ನು ಮತ್ತು ಬೇರೆ ಬೇರೆ ಊರುಗಳಲ್ಲಿನ ಕಾಡ ನಾಯಕರು ಇವರನ್ನೆಲ್ಲಾ ಸದೆಬಡೆಯದೆ, ನಿರ್ನಾಮ ಮಾಡದೆ ಅಧಿಕೃತವಾಗಿ ಸಿಂಹಾಸನಾರೋಹಣ ಮಾಡುವುದಾಗಲೀ, ಸಾಮ್ರಾಜ್ಯ ಭೋಗವನ್ನಾಗಲೀ ಅನುಭವಿಸುವುದು ಸಾಧ್ಯವೇ ಆಗುವುದಿಲ್ಲ ಎಂದು ನೆನಸಿಕೊಂಡಾಗ ಅವನ ಮೈಯೆಲ್ಲಾ ಉರಿಯುತ್ತದೆ."[೨೦] ಎಂಬ ಡಾ. ವಿಜಯಾ ಸುಬ್ಬರಾಜ್ ಅವರ ಮಾತು ಗಮನಾರ್ಹವಾಗಿದೆ. ಈ ಕಾರಣದಿಂದಾಗಿಯೇ ಮುದ್ದಣ್ಣನು ಅಧಿಕಾರ ಸ್ಥಾಪಿಸಲು ಮೀನಾಮೇಷ ಎಣಿಸುತ್ತಾನೆ. ಅಷ್ಟೇಕೆ ಚಿಂತಾಕ್ರಾಂತನಾಗುತ್ತಾನೆ.

ಮುದ್ದಣ್ಣನು ರಂಗಪ್ಪನಾಯಕನನ್ನು ಪಟ್ಟದಲ್ಲಿ ಕೂರಿಸಿ ಸರ್ವಾಧಿಕಾರ ಚಲಾಯಿಸಲು ಮುಂದಾಗುತ್ತಾನೆ. ಅದಕ್ಕಾಗಿ ಸಭೆಯನ್ನು ನಡೆಸುತ್ತಾನೆ. ಈ ಸಭೆಯಲ್ಲಿ ರಂಗಪ್ಪನಾಯಕನ ಅಭಿಪ್ರಾಯವನ್ನು ಕೇಳಲಾಗುತ್ತದೆ. ಆಗ ಒಲ್ಲದ ಮನಸ್ಸಿನಿಂದಲೇ ನಾಯಕನು ನುಡಿಯುವ ಈ ಮಾತುಗಳನ್ನು ನೋಡಿ, "ಈ ಸಿಂಹಾಸನ ನಮಗೇನೂ ಬೇಕಾಗಿಲ್ಲ. ಆದರೂ ಎಲ್ಲರೂ ಸೇರಿ ಈ ಹೊಣೆಗಾರಿಕೆಯನ್ನು ನಮ್ಮ ಮೇಲೆ ಹೊರಿಸುವುದಾದರೆ, ನಾವೂ ನಾಯಕರ ವಂಶಕ್ಕೆ ಸೇರಿದವರಾದುದರಿಂದ, ಅಗತ್ಯವಾಗಿ ದುರ್ಗದ ಸೇವೆ ಮಾಡುವುದು ನಮ್ಮ ಕರ್ತವ್ಯವಾದುದರಿಂದ, ಆ ಹೊಣೆಗಾರಿಕೆಯನ್ನು ಹೊರಲು ಸಿದ್ಧರಾಗಿದ್ದೇವೆ."[೨೧] ಎಂದು ನುಡಿಯುತ್ತಾನೆ. ಒತ್ತಾಯ ಪೂರ್ವಕವಾಗಿ ರಂಗಪ್ಪ ನಾಯಕನ ಒಪ್ಪಿಗೆಯನ್ನು ಪಡೆಯುವ ಮುದ್ದಣ್ಣನು ಮುಂದೆ ಪಟ್ಟಾಭಿಷೇಕಕ್ಕಾಗಿ ಬೇಕಾದ ಹಣಕ್ಕಾಗಿ ವ್ಯಾಪರಿಗಳ ಆಕ್ರಮಣ ಮಾಡುತ್ತಾನೆ. ಹಣ ಕೊಡದವರ ಮೇಲೆ ಸೈನಿಕರಿಂದ

ಓಂಕಿಸುತ್ತಾನೆ. ಇಷ್ಟಲ್ಲದೇ ಪಟ್ಟದ ಕಾಣಿಕೆ ಸಲ್ಲಿಸಲು ನಾಡಗೌಡರಿಗೆಲ್ಲ ಪತ್ರ ರವಾನಿಸುತ್ತಾನೆ. ಇದರಿಂದ ಮುದ್ದಣ್ಣನ ಮೇಲೆ ಎಲ್ಲರೂ ಕೆಂಡಾಮಂಡಲರಾಗುತ್ತಾರೆ. ಸರ್ವಾಧಿಕಾರದ ಧೋರಣೆಯಿಂದಾಗಿ, ಅರ್ಥವಿಲ್ಲದ ಆದೇಶಗಳಿಂದಾಗಿ ತನ್ನ ಗೋರಿಯನ್ನು ತಾನೇ ತೋಡಿಕೊಳ್ಳುತ್ತ ಹೋಗುವ ಮುದ್ದಣ್ಣನು ಕೊನೆಗೆ ಗಿರಿಜೆ ಎಂಬ ಹೆಣ್ಣುಮಗಳಿಂದ ಹತನಾಗುತ್ತಾನೆ. ಅವನು ಬಿಟ್ಟ ಸರ್ವಾಧಿಕಾರದ ಬಾಣ ಅವನಿಗೇ 'ತಿರುಗುಬಾಣ'ವಾಗುತ್ತದೆ.

ಭರಮಣ್ಣ ನಾಯಕನ ಪ್ರಭುತ್ವದೊಂದಿಗೆ ದುರ್ಗಕ್ಕೆ 'ಹೊಸಹಗಲು' ಆರಂಭವಾಗುತ್ತದೆ. ಈ ಹಿನ್ನೆಲೆಯಲ್ಲಿ ತ.ರಾ.ಸು. ಅವರು ಮುನ್ನುಡಿಯಲ್ಲಿ ಹೇಳಿದ ಮಾತುಗಳು ಉಲ್ಲೇಖಾರ್ಹಯೆನಿಸಿವೆ. "ಕಂಬನಿಯ ಕುಯಿಲು', 'ರಕ್ತರಾತ್ರಿ', 'ತಿರುಗುಬಾಣ' ಕಾದಂಬರಿಗಳಿಗೂ ಇದಕ್ಕೂ ಒಂದು ದೊಡ್ಡ ವ್ಯತ್ಯಾಸವನ್ನು ಓದುಗರು ಕಾಣಬಹುದು. ಅಲ್ಲಿ ಕಾಣುವುದು ವಿನಾಶೋನ್ಮುಖ ಉಲ್ಕೆಯ ಕಣ್ಣು ಕೊರೈಸುವ ಬೆಳಕು. ಇಲ್ಲಿನದು ದೇಶಕ್ಕೆ ಬೆಳಕು ನೀಡಹೊರಟ ದೀಪದ ಪ್ರಶಾಂತ ಕಾಂತಿ. ಮುದ್ದಣ್ಣನಂತೆ ಭರಮಣ್ಣ ನಾಯಕ, ರಕ್ತಕ್ಕೆ ಹಸಿದ ಹೆಬ್ಬುಲಿಯಲ್ಲ"[೨೨] ಎಂದು ಹೇಳಿದ್ದಾರೆ. ದುರ್ಗದ ಸಿಂಹಾಸನದ ಮೇಲೆ ತನ್ನ ರಕ್ತದ ಪಾದವನ್ನಿರಿಸಿದ ದಳವಾಯಿ ಮುದ್ದಣ್ಣನ ಅವಸಾನವಾಗುತ್ತದೆ. ದುರ್ಗದ ಹಿತೈಷಿಗಳು ಭರಮಣ್ಣನನ್ನೇ ಪ್ರಭುವನ್ನಾಗಿ ಆಯ್ಕೆ ಮಾಡುತ್ತಾರೆ. "ಶಾಲಿವಾಹನ ಶಕೆ ೧೬೧೧ನೆಯ ಸಂವತ್ಸರದ ಆಶ್ವಯುಜ ಶುದ್ಧ ದಶಮಿಯ ದಿನ. ಆ ದಿನ ಚಿತ್ರದುರ್ಗದ ಇತಿಹಾಸದಲ್ಲೇ ಚಿರಸ್ಮರಣೀಯವಾದ ಸುವರ್ಣ ದಿನವಾಯಿತು. ಆ ದಿನ ದಳವಾಯಿ ಮುದ್ದಣ್ಣನ ಮರಣಾನಂತರದ ಬಳಿಕ ಮಬ್ಬು ಕವಿದ ಅಸ್ಪಷ್ಟತೆಯ ವಾತಾವರಣ ತೊಲಗಿ, ಚಿತ್ರದುರ್ಗದ ಸಿಂಹಾಸನದ ಮೇಲೆ ಬಿಳಿಜೋಡಿನ ಭರಮಣ್ಣ ನಾಯಕನ ಅಧಿಕಾರ ಸ್ಥಾಪನೆಯಾಯಿತು. ಚಿತ್ರದುರ್ಗದ ಜೀವನದಲ್ಲಿ ಹೊಸಯುಗ ಆರಂಭವಾಯಿತು. ಎಷ್ಟು ಹರ್ಷ, ಏನು ಆನಂದ ನಾಡಿನ ಜನಕ್ಕೇ ಆ ದಿನ ಮನೆ ಮನೆಯ ಹಬ್ಬವಾಯಿತು."[೨೩] ಭರಮಣ್ಣ ನಾಯಕನು ದುರ್ಗದ ದೊರೆಯಾಗಿ ಜನಪರವಾದ ಕೆಲಸಗಳನ್ನು ಮಾಡಲು ಮುಂದಾಗುತ್ತಾನೆ. ಇವನ ಆಡಳಿತದಿಂದಾಗಿ ದುರ್ಗದಲ್ಲಿ ಶಾಂತಿಯು ನೆಲೆಸುವಂತಾಗುತ್ತದೆ. ಈತನ ಪ್ರಭುತ್ವ ಬರಿ ಕಾಳಗಗಕ್ಕೆ ಸೀಮಿತವಾಗದೆ ಅಭಿವೃದ್ಧಿ ಕಾರ್ಯಕ್ಕೂ ದುರ್ಗವಿಸ್ತರಿಸುವಂತಾಯಿತು. ಸ್ವತಃ ಭರಮಣ್ಣ ನಾಯಕ ಅಧಿಕಾರ ಸ್ವೀಕರಿಸುವಾಗ ಜನರ ಎದುರಿಗೆ ಆಡಿದ ನುಡಿಗಳು ಆತನ ಪ್ರಭುತ್ವಕ್ಕೆ ಹಿಡಿದ ಕನ್ನಡಿಯಂತೆ ಕಾಣುತ್ತವೆ. "ದುರ್ಗದ ಶತ್ರು ಮರ್ದನ ಕಾರ್ಯವಾಗುವವರೆಗೂ ಮತ್ತೆ ಈ ಖಡ್ಗವನ್ನು ಒರೆಗಿಡುವುದಿಲ್ಲ. ದುರ್ಗವನ್ನು ರಕ್ಷಿಸುತ್ತಿರುವ ಮಹಾದೇವಿಯರ ಹರಕೆ ಇರಲಿ, ನಿಮ್ಮ ಆಶೀರ್ವಾದವಿರಲಿ ನಮ್ಮ ಶಪಥ ಸಾಂಗವಾಗಿ ನೆರವೇರಲಿ' ಎಂದು ಒರೆಗಳಚಿದ ಖಡ್ಗವನ್ನು ಹಿಡಿದೇ ಸಭೆಗೆ ವಂಶಿದಿ. ಪೀಠವನ್ನು ಅಲಂಕರಿಸಿದು ನಾಯಕರು'[೨೪] ಜನರಿಗೆ ಕೊಟ್ಟ ಮಾತಿನಂತೆ ಭರಮಣ್ಣ

ನಾಯಕ ನಡೆದುಕೊಳ್ಳುತ್ತಾನೆ. ಇದಕ್ಕೆ ನಿದರ್ಶನ ಎಂಬಂತೆ ಹರಪನಹಳ್ಳಿ ಹಾಗೂ ಬಿದನೂರಿನವರು ದುರ್ಗಕ್ಕೆ ಮುತ್ತಿಗೆಯನ್ನು ಹಾಕಿ ಅಣಜಿ ಕೋಟೆಯನ್ನು ವಶಪಡಿಸಿಕೊಳ್ಳುತ್ತಾರೆ. ಆಗ ಭರಮಣ್ಣ ನಾಯಕ ಜನತೆಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳಲಾಗಲಿಲ್ಲವೆಂದು ಕೊರಗುವ ಪ್ರಸಂಗವನ್ನು ನೋಡಬಹುದು. ನಂತರ ಈ ಕೊರಗಿನಿಂದ ಚೇತರಿಸಿಕೊಂಡು ಸುತ್ತಮುತ್ತಲಿನ ಪಾಳೆಯಗಾರರ ಸಹಾಯದಿಂದ ಹೋರಾಡಿ ಅಣಜಿ ಕೋಟೆಯನ್ನು ಮತ್ತೇ ಗೆದ್ದುಕೊಳ್ಳುತ್ತಾನೆ. ಖಡ್ಗವನ್ನು ಒರೆಸೇರಿಸದೆ ಬಿಚ್ಚುಗತ್ತಿ ಭರಮಣ್ಣ ನಾಯಕನೆಂದು ಕರೆಯಿಸಿಕೊಳ್ಳುತ್ತಾನೆ. ಒಟ್ಟಾರೆ, ಭರಮಣ್ಣ ನಾಯಕನ ಆಡಳಿತದ ವೈಖರಿಯು ಕಾದಂಬರಿಯ ಉದ್ದಕ್ಕೂ ಕಂಡುಬರುತ್ತದೆ. ದುರ್ಗಕ್ಕೆ ಕವಿದ ಕತ್ತಲು ದೂರಾಗಿ ಹೊಸ ಹಗಲು ಮೂಡಲು ಭರಮಣ್ಣ ನಾಯಕನ ಪ್ರಭುತ್ವವೇ ಕಾರಣವೆಂಬಂತೆ ತ.ರಾ.ಸು. ಅವರು ಅವನ ಆಡಳಿತದ ಮೇಲೆ ಬೆಳಕು ಬೀರಿದ್ದಾರೆ. ಅದು ಇಂದಿಗೂ ಮಾದರಿ ಎಂಬಂತೆ ಚಿತ್ರಿಸಿದ್ದಾರೆ.

'ಹೊಸಹಗಲು'ವಿನಲ್ಲಿ ಕಂಡ ಬೆಳಕು 'ವಿಜಯೋತ್ಸವ'ದಲ್ಲಿ ಮುಂದುವರೆಯುತ್ತದೆ. ಈ ಹಿಂದೆ ಅಣಜಿ ವಿಜಯೋತ್ಸವದ ದಿನ ಭರಮಣ್ಣ ನಾಯಕನು ತನ್ನಷ್ಟಕ್ಕೆ ತಾನೇ ಯುದ್ಧ ಬೇಡ ಎಂದು ನಿಶ್ಚಯಿಸಿಕೊಂಡಿದ್ದನು. ಅಂದರೆ ಯುದ್ಧ ವಿರೋಧಿ ನೀತಿಗೆ ಮಾರುಹೋಗಿದ್ದನು. ಮುರುಘರಾಜೇಂದ್ರ ಸ್ವಾಮಿಗಳ ದರ್ಶನವಾದ ನಂತರ ಈ ಭವನೆಯು ಮತ್ತಷ್ಟು ಬಲವಾಗಿತ್ತು. ಆದರೆ ಇಂತಹ ಸಂದರ್ಭದಲ್ಲಿಯೇ ದುರ್ಗದ ಮೇಲೆ ಅನ್ಯ ಪಾಳೆಯಗಾರರ ಆಕ್ರಮಣಗಳು ಆಗುತ್ತವೆ. ಈ ಕಾರಣಕ್ಕಾಗಿ ಅನಿವಾರ್ಯವಾಗಿ ಭರಮಣ್ಣ ನಾಯಕನು ಯುದ್ಧ ಮಾಡಬೇಕಾಗಿ ಬರುತ್ತದೆ. ಈ ನಡುವೆ ಸೀರ್ಯಾದವರು ದುರ್ಗದವರ ಮೇಲೆ ಅಧಿಕಾರ ಸ್ಥಾಪಿಸಲು ಮುಂದಾಗಿರುವ ಸೂಚನೆಗಳು ಕಾಣುತ್ತವೆ. "ಸೀರ್ಯದ ಪಾಳೆಯಗಾರರು ಹಿಂದೆ ಬಿಜಾಪುರದ ರಣದುಲ್ಲಾಖಾನನಿಗೆ ಸೋತು, ಬಿಜಾಪುರದ ಷಾಹಿ ದೊರೆಯಗಳ ಸಾಮಂತತ್ವವನ್ನು ಸ್ವೀಕಾರ ಮಾಡಿದರು. ಅಷ್ಟು ವರ್ಷ ಬಿಜಾಪುರದವನಿಗೆ ಕಪ್ಪುಕಾಣಿಕೆ ಒಪ್ಪಿಸುತ್ತಿದ್ದರು. ಆ ಬಳಿಕ, ದೆಹಲಿಯ ಅಲಂಗೀರ್ ಬಾದಷಹ, ವಿಭವ ಸಂವತ್ಸರದಲ್ಲಿ ಬಿಜಾಪೂರವನ್ನು ವಶಪಡಿಸಿಕೊಂಡ. ಆ ಕಾಲದಲ್ಲಿ ಬಿಜಾಪುರದೊಂದಿಗೆ, ಬಿಜಾಮರಕ್ಕೆ ಸೇರಿದ ಸಾಮಂತ ರಾಜ್ಯಗಳೂ ಮೊಗಲರ ವಶವಾದವು. ಆ ಪಾಳೆಯಪಟ್ಟುಗಳ ಪೈಕಿ, ಬಸವಾಪಟ್ಟಣ, ಬೂದಿಹಾಳು, ಪೆನುಕೊಂಡ, ದೊಡ್ಡಬಳ್ಳಾಪುರ, ಹೊಸಕೋಟೆ, ಕೋಲಾರ ಇವುಗಳನ್ನು ಒಂದು 'ಪರಗಣ'ವಾಗಿ ಮಾಡಿ, ಈ ಪರಗಣಕ್ಕೆ ಸೀರ್ಯವೇ ರಾಜಧಾನಿಯೆಂದು ಗೊತ್ತು ಮಾಡಿ, ಈ ಸೀಮೆಯನ್ನು ಆಳುವುದಕ್ಕೆ ಒಬ್ಬ ಫೌಜುದಾರ್ ದಿವಾನನ್ನು ಬಾದಷಹ ನೇಮಕ ಮಾಡಿದ..."[೨೫] ಆ ಸಮಯದಲ್ಲಿ ದುರ್ಗದ ಸಂಸ್ಥಾನವನ್ನು ಕೇಳಿದಾಗ, ದುರ್ಗದವರು ಅದಕ್ಕೆ ಒಪ್ಪಿರುವುದಿಲ್ಲ. ಈಗ ಮತ್ತೆ ಆ

ವಿಚಾರವನ್ನು ಕೇಳಿಕಿದ್ದಾರೆ. ದಿವಾನ್ ಫೌಜುದಾರ ಖಾಸಿಂಖಾನನು ದುರ್ಗದವರನ್ನು ತಮ್ಮ ಸಾಮಂತರಂತೆ ಕಾಣಲು ಸಂಚನ್ನು ರೂಪಿಸುತ್ತಾನೆ. ಅದಕ್ಕಾಗಿ ದುರ್ಗಕ್ಕೆ ಪತ್ರವೊಂದನ್ನು ರವಾನಿಸುತ್ತಾನೆ. "ಭರಮಣ್ಣ ನಾಯಕನೆನ್ನೋ, ತನ್ನಿಂದ ದುರ್ಗದಿಂದ ಸಾಮಂತತ್ವ ಸ್ವೀಕಾರವನ್ನು ಬಯಸಿದ ಸೀರ್ಯದ ಫೌಜುದಾರ ದಿವಾನನ ಪತ್ರಕ್ಕೆ ಯಾರು ಯಾರ ಸಾಮಂತತ್ವವನ್ನು ಸ್ವೀಕರಿಸಬೇಕೆಂಬ ಪ್ರಶ್ನೆಯನ್ನು ಸಮರವೇ ಇತ್ಯರ್ಥಗೊಳಿಸಲಿ, ಬರಹದಲ್ಲಿರುವ ಬಲ ತೋಳಲ್ಲಿದ್ದರೆ, ಸಮರಕ್ಕೆ ಸಿದ್ಧರಾಗಿರೆಂದು ಪ್ರತ್ಯುತ್ತರ ಕಳಿಸಲು ನಿರ್ಧರಿಸಿದ್ದ."[೨೬] ಇದಕ್ಕೆ ದುರ್ಗದ ದಳವಾಯಿಗಳೆಲ್ಲರೂ ಒಪ್ಪಿಗೆಯನ್ನು ಕೊಟ್ಟಿದ್ದರು. ಮತ್ತೊಂದು ಕಡೆ ಮರಾಠ ನಾಯಕ ಸಂತೋಷ ಘೋರ್ಪಡೆ ಈ ಭಾಗದಲ್ಲಿ ಆಳಲಿಕ್ಕೆ ಯುದ್ಧ ಮಾಡಲು ತಯಾರಿ ನಡೆಸಿರುತ್ತಾನೆ. ಮುಂದೆ ಖಾಸಿಂಖಾನ ಮತ್ತು ಈ ಮರಾಠರ ನಡುವೆ ಯುದ್ಧ ನಡೆದಾಗ, ದುರ್ಗದವರು ಖಾಸಿಂಖಾನನ ಪರವಾಗಿ ಹೋರಾಟ ಮಾಡಲು ಮುಂದಾಗುತ್ತಾರೆ. ದಳವಾಯಿ ಭರಮಣ್ಣ ಹಾಗೂ ಜಾನ್‌ನ ಯುದ್ಧದ ತಂತ್ರದಿಂದಾಗಿ ದುರ್ಗದ ಸೇನೆಗೆ ಜಯವಾಗುತ್ತದೆ. ಇದುವೇ ವಿಜಯೋತ್ಸವವಾಗಿ ಗೋಚರಿಸುತ್ತದೆ.

ಸೀರ್ಯದ ಪಾಳೆಯಗಾರರೊಂದಿಗೆ ದುರ್ಗದವರು ಮಿತ್ರತ್ವ ಹೊಂದಿರುತ್ತಾರೆ. ಈ ಸ್ನೇಹಸಂಬಂಧ ನೆಂಟಸ್ಥಿಕೆಯಾಗಬೇಕೆಂಬ ಮಹದಾಸೆಯಿಂದ ಸೀರ್ಯಾದವರು ದುರ್ಗದ ನಾಯಕರಿಗೆ ಪತ್ರವೊಂದನ್ನು ರವಾನಿಸುತ್ತಾರೆ. ಅಲ್ಲಿಂದ 'ಕಸ್ತೂರಿ ಕಂಕಣ' ಆರಂಭವಾಗುತ್ತದೆ. ಸೀರ್ಯದ ದೊರೆ ರಂಗಪ್ಪನಾಯಕನು ದುರ್ಗದ ದೊರೆ ಕಸ್ತೂರಿ ರಂಗಪ್ಪನಾಯಕನಿಗೆ ಕಳುಹಿಸಿದ ಪತ್ರದ ಸಾರ ಹೀಗಿರುತ್ತದೆ. "ಸದ್ಯ ನಾವು ತಮಗೆ ಈ ಪತ್ರವನ್ನು ಬರೆಸುತ್ತಿರುವ ಕಾರಣವಿಷ್ಟೆ: 'ನಮ್ಮ ವಂಶದ ವಿಚಾರ, ಸಂಸ್ಥಾನದ ವಿಷಯ ತಮಗೂ ತಿಳಿದಿರಬಹುದು. ಪ್ರಕೃತ ನಮ್ಮ ಉದ್ದೇಶ, ಇದುವರೆಗೂ ಕೇವಲ ಮಿತೃತ್ವ ಭಾವನೆಯಿಂದ ಬಂಧಿತವಾಗಿರುವ ನಮ್ಮಿಶ್ವರ ವಂಶಗಳೂ, ವಿವಾಹದ ಶುಭಸೂತ್ರದಿಂದ ಒಂದಾಗಿ ಬೆಳೆಯಬೇಕೆಂಬುದೇ ಆಗಿದೆ. ಅಂದರೆ ತಮ್ಮ ಕುಮೂರ್ತಿಯರನ್ನು ನನ್ನ ಕುಮಾರ, ರಾಜಮಾನ್ಯ ರಾಜೇಶ್ರೀ, ಚಿರಂಜೀವಿ ಕೃಷ್ಣಪ್ಪನಾಯಕರಿಗೆ ತಂದುಕೊಳ್ಳುವ ಅಭಿಪ್ರಾಯವಿದೆ. ಈ ಅಭಿಪ್ರಾಯ ತಮಗೂ ಸಮ್ಮತವಾದಲ್ಲಿ ಈ ಪತ್ರವನ್ನು ತಂದಿರುವ ನಮ್ಮ ವಕೀಲರೊಂದಿಗೆ, ತಮ್ಮ ಕುಮೂರ್ತಿಯವರ ಶುಭಜಾತಕವನ್ನು ಕಳಿಸಕೊಡಬೇಕಾಗಿ ಕೋರುತ್ತೇವೆ. ತಮ್ಮಿಂದ ಜಾತಕ ತಲುಪಿದ ಒಡನೆಯೇ ನಮ್ಮ ಕುಮಾರರ ಜಾತಕವನ್ನೂ ತಮ್ಮ ಅವಗಾಹನೆಗೆ ಕಳಿಸಿಕೊಡುತ್ತೇನೆ. ಮುಂದಿನದು ದೈವ ಚಿತ್ತ. 'ನಮ್ಮ ಈ ಅಭಿಪ್ರಾಯ, ವಿಶ್ವಾಸ ಭಾವನೆಗಳು ತಮಗೂ ಸಮ್ಮತವಾಗಿ, ನಮ್ಮೀಶ್ವರ ವಂಶ. ಪರಸ್ಪರಾಭಿವೃದ್ಧಿ, ಯಶಸ್ಸುಗಳನ್ನು

ಪಡೆಯಲೆಂದು, ಭಗವಂತನಲ್ಲಿ ಪ್ರಾರ್ಥಿಸುತ್ತೇನೆ."[೨೭] ಎಂದು ಸೀರ್ಯಾದಿಂದ ಪತ್ರ ಬಂದಾಗ, ದುರ್ಗದ ಕಸ್ತೂರಿ ರಂಗಪ್ಪನಾಯಕನು ಪತ್ರ ಕುರಿತಾಗಿ ಅದರ ಆಗು ಹೋಗುಗಳ ಕುರಿತಾಗಿ ಸಮಾಲೋಚಿಸಲು ಸಭೆ ಕರೆಯುತ್ತಾನೆ. ಕೊನೆಗೆ ಒಟ್ಟಾಭಿಪ್ರಾಯದೊಂದಿಗೆ ತಮ್ಮ ಕುಮಾರಿ ಓಬವ್ವನ ಜಾತಕವನ್ನು ಕಳಿಸಿಕೊಡಲು ತೀರ್ಮಾನಿಸುತ್ತಾನೆ.

ಮೇಲು ನೋಟಕ್ಕೆ ಇದು ಸಂಬಂಧದ ದ್ಯೋತಕದಂತೆ ಕಂಡರೂ ಇದರೊಳಗೆ ರಾಜಕೀಯ ಕುತಂತ್ರವೂ ಅಡಗಿರುವುದು ಗೋಚರಿಸುತ್ತದೆ. ಅಂದರೆ ಈ ರೀತಿ ಸಂಬಂಧ ಬೆಳೆಸುವುದರೊಂದಿಗೆ ದುರ್ಗದ ಆಳ್ವಿಕೆಯನ್ನು ಅಂತ್ಯ ಮಾಡಬೇಕೆಂಬ ರಾಜಕಾರಣದ ಸಂಚನ್ನು ಸೀರ್ಯಾದವರು ಮಾಡಿರುತ್ತಾರೆ. "ದುರ್ಗದಲ್ಲಿರುವ ಸಹಜಾನಂದ ಸ್ವಾಮಿ, ವೇಷಾಂತರಧಾರಿಯಾದ ವಕೀಲ ವೆಂಕಪ್ಪಯ್ಯ. ಆತನೇ ಈ ಪಿತೂರಿಯ ಮುಖಂಡ. ದುರ್ಗದಲ್ಲಿ ಗದ್ದಲವೆಬ್ಬಿಸಲು ಅಲ್ಲಿ ಸೇರಿದ್ದಾರೆ. ಅವರು ಚಕ್ರ ಎಂದು ಸೀರ್ಯಾದ ನಾಯಕರಿಗೆ ಕೊಟ್ಟದ್ದು, ಚಿತ್ರದುರ್ಗದ ಕೋಟೆಯ ನಕ್ಷೆ."[೨೮] ಎಂಬುದು ಗೊತ್ತಾದಾಗ, ದಳವಾಯಿ ಸೂರ ನಾಯಕನು ಈ ಸಂಚನ್ನು ಬೇಧಿಸುತ್ತಾನೆ. ಇದರಲ್ಲಿ ಹಿರಿಯೂರಿನ ಕೆಂಚಣ್ಣ ನಾಯಕನ ನೆರವು ಗಮನಾರ್ಹವಾದುದು. ಕೊನೆಗೆ ಸೀರ್ಯದ ರಂಗಪ್ಪನಾಯಕನ ಸೇನೆ ಹಿರಿಯೂರನ್ನು ಮುತ್ತಿದಾಗ, ದುರ್ಗದ ಬೇಡಪಡೆ ಆ ಸೇನೆಯನ್ನು ತತ್ತರಿಸುವಂತೆ ಮಾಡುತ್ತದೆ. ಕಸ್ತೂರಿ ರಂಗಪ್ಪ ನಾಯಕ ಈ ಹಿಂದೆ ಕೆಂಚಣ್ಣ ನಾಯಕನ ಮಡದಿ ಹನುಮವ್ವ ನಾಗತಿಗೆ ಕೊಟ್ಟ ಮಾತಿನಂತೆ ಅವಳ ಕುಂಕುಮವನ್ನು ಉಳಿಸುತ್ತಾನೆ. ಈ ಋಣಕ್ಕಾಗಿ ಕುಂಕುಮವಿಡಲು ಬಂದ ಹನುಮವ್ವ ನಾಗತಿಗೆ ಕಸ್ತೂರಿ ರಂಗಪನಾಯಕನೇ ಕುಂಕುಮವಿಟ್ಟು, ಕಂಕಣವನ್ನು ಕೊಡುತ್ತಾನೆ. ಆ ಕಂಕಣವನ್ನು ಕೆಂಚಣ್ಣ ನಾಯಕ ತನ್ನ ಮಡದಿಯ ಕೈಗೆ ಕಟ್ಟುತ್ತಾನೆ. ಅಲ್ಲಿಗೆ 'ಅಣ್ಣ ತಂಗಿ'ಯ ಸಂಬಂಧ ಗಟ್ಟಿಯಾಗುತ್ತದೆ. ಅದುವೇ 'ಕಸ್ತೂರಿ ಕಂಕಣ'ವಾಗುತ್ತದೆ.

ತ.ರಾ.ಸು. ಅವರ 'ಕಂಬನಿಯ ಕುಯಿಲು'ವಿನೊಂದಿಗೆ ಆರಂಭವಾದ ದುರ್ಗದ ಇತಿಹಾಸ 'ದುರ್ಗಾಸ್ತಮಾನ'ದೊಂದಿಗೆ ಕೊನೆಗೊಳ್ಳುತ್ತದೆ. ಹಿರಿಯ ಮದಕರಿ ನಾಯಕ, ಕಸ್ತೂರಿ ರಂಗಪ್ಪ ನಾಯಕರ ನಂತರ ಆಳಿದ ಕೊನೆಯ ದೊರೆ ವೀರ ಮದಕರಿ ನಾಯಕ. ದುರ್ಗಾಸ್ತಮಾನವಾದುದು ಈತನ ಕಾಲದಲ್ಲೇ. ಚಿತ್ರದುರ್ಗದ ಇತಿಹಾಸದಲ್ಲಿ ವೀರಮದಕರಿನಾಯಕನಿಗೆ ವಿಶಿಷ್ಟ ಸ್ಥಾನಮಾನವಿದೆ. ಯಾಕೆಂದರೆ, "ಚಿತ್ರದುರ್ಗದ ಜನರಿಗೆ ಚಿತ್ರದುರ್ಗ ಎಂದರೆ ಒಂದು ಊರಲ್ಲ, ಕೋಟೆಯಲ್ಲ, ಬೆಟ್ಟವಲ್ಲ; ತಮ್ಮ ಕರುಳಿಗೆ ಹೊಂದಿಕೊಂಡು ಬೆಳೆದ ಜೀವಂತ ವಸ್ತು. ಮದಕರಿ ನಾಯಕನೆಂದರೂ ಅಷ್ಟೆ ಇತಿಹಾಸದ ಇದ್ದುಹೋದ ಒಬ್ಬ ಅರಸನಲ್ಲ. ತಮ್ಮ ಜೀವಂತ ಆಪ್ತನೆಂಟ. ಈ ಭಾವನೆ ಹೇಗೋ. ಹಾಗೆಯೇ 'ಚಿತ್ರದುರ್ಗ' 'ಮದಕರಿ ನಾಯಕ' ಎನ್ನುವುದು ಬೇರೆಬೇರೆಯಲ್ಲ.

ಒಂದೇ ಎಂಬ ಅವಿನಾಭಾವ : ದುರ್ಗ ಎಂದರೆ ಮದಕರಿ, ಮದಕರಿ ಎಂದರೆ ದುರ್ಗ ...... ಈ ನಾಯಕ ವಂಶದಲ್ಲಿ ಹಲವಾರು ಮದಕರಿ ನಾಯಕರು ಆಳಿ, ಆಳಿದಿದ್ದರೂ ಚಿತ್ರದುರ್ಗದ ಜನತೆ 'ಮದಕರಿ ನಾಯಕ' ಎಂದ ಕೂಡಲೇ ನೆನಪಿಸಿಕೊಳ್ಳುವುದು ಈ ಕೊನೆಯ ದೊರೆಯನ್ನೇ, ಆತನಲ್ಲದೆ ಬೇರೆ ಯಾರೂ ನೆನಪಿಗೆ ಬರುವುದಿಲ್ಲ. ಅದಕ್ಕೆ ಕಾರಣ ಆತನ ಜೀವನದ ದುರಂತ ಮತ್ತು ಆತನ ಶೌರ್ಯ, ಸಾಹಸ, ಕ್ರೌರ್ಯ, ಕಾಮಲೋಲುಪತೆಯ ಬಗ್ಗೆ ಜನಜನಿತವಾಗಿರುವ ಹಲವಾರು ದಂತಕತೆಗಳು, ನಾಡಹಾಡುಗಳು".[೩೯] ಎಂದು ತ.ರಾ.ಸು. ಅವರು ತಮ್ಮ ಮುನ್ನುಡಿಯಲ್ಲಿ ವೀರಮದಕರಿನಾಯಕನ ವ್ಯಕ್ತಿತ್ವದ ಹಿನ್ನೆಲೆಯಲ್ಲಿ ಹೇಳಿದ ಮಾತುಗಳು ಗಮನಾರ್ಹವಾಗಿವೆ.

ಕಸ್ತೂರಿರಂಗಪ್ಪ ನಾಯಕನು ಪುತ್ರ ಸಂತಾನವಿಲ್ಲದೆ ಮರಣ ಹೊಂದಿದಾಗ, ದುರ್ಗದ ಪಟ್ಟಾಧಿಕಾರಕ್ಕಾಗಿ ಚರ್ಚೆ ನಡೆಯುತ್ತದೆ. ಈ ಸಮಯದಲ್ಲಿ ಹಿರೇಮದಕರಿ ನಾಯಕರ ತಮ್ಮ ಜಂಪಣ್ಣ ನಾಯಕರ ಮಗನಾದ ಕಾಟಪ್ಪನಾಯಕನ ಮಗ ದೊಡ್ಡ ಮದಕರಿ ನಾಯಕನನ್ನು 'ನಾಯಕ'ರನ್ನಾಗಿ ಮಾಡುವ ವಿಚಾರ ಪ್ರಸ್ತಾಪವಾದಾಗ, ಹಿರೇ ಮದಕರಿ ನಾಯಕನ ನಾಗತಿ ಓಬವ್ವ ತನ್ನ ಕನಸಿನ ವೃತ್ತಾಂತವನ್ನು ಮುಂದಿಡುತ್ತಾಳೆ. ಆ ಕನಸಿನ ಪ್ರಕಾರ ವರ್ಷದ ಬಾಲಕನಾದ ಮದಕರಿನಾಯಕನನ್ನು ಉತ್ತರಾಧಿಕಾರಿಯಾಗಿ ಆಯ್ಕೆ ಮಾಡುತ್ತಾರೆ. ಈ ಸಂದರ್ಭದಲ್ಲಿ ಓಬವ್ವ ನಾಗತಿ ಹಾಗೂ ಕಳ್ಳಿ ನರಸಪ್ಪಯ್ಯನವರು ಮದಕರಿನಾಯಕನಿಗೆ ನಾಯಕ ಯೋಗ್ಯವಾದ ವಿದ್ಯೆಗಳೆಲ್ಲವನ್ನು ಕಲಿಸಿಕೊಡುತ್ತಾರೆ. ನಿದರ್ಶನಕ್ಕೆ ಓಬವ್ವ ನಾಗತಿ ಹೇಳುವ ಈ ಮಾತುಗಳನ್ನು ಗಮನಿಸಬಹುದು. "ಆದರೂ ಅರಸು. ಅರಸು ಪದವಿ ಎಂದರೇನೆಂದುಕೊಂಡಿರಿ, ಹತ್ತಾರು ಸಾವಿರ ಹೆಣಗಳ ಬುನಾದಿಯ ಮೇಲೆ ಕಟ್ಟಿದ್ದು ಈ ಅರಸು ಸಿಂಹಾಸನ. ಇದರ ಮೇಲೆ ಕುಳಿತು ಆಳುವಾತ ಹನಿರಕ್ತಕ್ಕೆ ಹೆದರಿದರೆ ಹೇಗೆ? ಯುದ್ಧದಲ್ಲಿ ರಕ್ತದ ಕೋಡಿ ಹರಿಸಬೇಕಾದ ನಿಮಗೆ ಹಾಗೆ ಮೈ ತಪ್ಪದಂತೆ, ಬುದ್ಧಿ ಕೆಡದಂತೆ ರಕ್ತದ ಅಭ್ಯಾಸವಾಗಬೇಕು. ರಕ್ತ ನೀರಿಗಿಂತ ಸದರವಾಗಬೇಕು. ಅರಸೇ ರಕ್ತಕ್ಕೆ ಹೆದರಿದರೆ, ಅವನ ಹಿಂದೆ ಬರುವ ಸೈನಿಕರೇನು ಮಾಡಬೇಕು  ಅವರು ನೀರಿಗೂ ಅಂಜಿ ಓಡಬೇಕೇ?"[೪೦] ಎಂದು ಹೇಳುತ್ತಾಳೆ.

'ದುರ್ಗಕ್ಕೀಗ ಗಂಡಸರ ದಿಕ್ಕಿಲ್ಲ. ಪಟ್ಟದ ಮೇಲೆ ಚೋಟುದ್ದ ಹುಡುಗ. ಆಡಳಿತ ಮಾಡೋ ಮುದುಕಿ' ಎಂಬ ಧೋರಣೆಯಿಂದ ರಾಯದುರ್ಗದವರು ದುರ್ಗದ ಮೇಲೆ ದಾಳಿ ಮಾಡುತ್ತಾರೆ. ಈ ಸಮಯದಲ್ಲಿ ಓಬವ್ವ ನಾಗತಿಯೂ ಸೇರಿದಂತೆ ದೇಶಾಬಾಗ್ ಹೆಣ್ಣು ಪಡೆ ಹಾಗೂ ಎಲ್ಲ ದಳವಾಯಿಗಳು ಒಂದಾಗಿ ಹೋರಾಡಿ, ರಾಯದುರ್ಗದವರನ್ನು ಸದೆ ಬಡೆದು ಗೆಲುವನ್ನು ಸಾಧಿಸುತ್ತಾರೆ. ಈ ಸಂದರ್ಭದಲ್ಲಿಯೇ ಮದಕರಿನಾಯಕನ ವೀರಗುಣ ವ್ಯಕ್ತವಾಗುತ್ತದೆ. 'ತಂಜಿಗೆ ರಕ್ತಕ್ಕೆ, ಹೇಸಿದ್ದ ಮದಕರಿನಾಯಕ ರಕ್ತ ಸ್ನಾನ

ಮಾಡಿ, ರಣಕೇಕೆ ಹಾಕುತ್ತಾ, ಕತ್ತರಿಸಿದ ಶತ್ರು ತಲೆಗಳನ್ನು ಜುಟ್ಟು ಹಿಡಿದು' ತೂರಾಡುತ್ತಾ ಬಂದ ಮದಕರಿ ನಾಯಕನ ಶೌರ್ಯವನ್ನು ಕಂಡು, 'ನೀನು ಗಂಡು, ನಿನ್ನನ್ನು ಮಗ ಎಂದು ಕರೆದದ್ದು ಸಾರ್ಥಕವಾಯಿತು' ಎಂದು ಓಬವ್ವ ನಾಗತಿ ಸಂಭ್ರಮಿಸುತ್ತಾಳೆ.

ಯುದ್ಧದಿಂದ ಯುದ್ಧಕ್ಕೆ ಮದಕರಿನಾಯಕ ಪ್ರಬುದ್ಧನಾಗುತ್ತಲೇ ಹೋಗುವ ಚಿತ್ರಣವನ್ನು ತ.ರಾ.ಸು. ಅವರು ಕೊಡುತ್ತಾರೆ. ದಕ್ಷಿಣದಲ್ಲಿ ತನಗಿಂತ ಬಲಿಷ್ಠರಿಲ್ಲವೆಂದು ಬೀಗುತ್ತಿದ್ದ ಹೈದರಾಲಿಯನ್ನು ಮದಕರಿನಾಯಕ ಕೆಣಕುತ್ತಾನೆ. ಬಿದನೂರಿನ ಸೋಮಶೇಖರನಾಯಕನ ನಾಯಕತ್ವದಲ್ಲಿ ಹರಪನಹಳ್ಳಿ ರಾಯದುರ್ಗ ಹಾಗೂ ಸವಣೂರು ನವಾಬನ ಸೇನೆಯು ದುರ್ಗದ ಮೇಲೆ ದಾಳಿ ಮಾಡುತ್ತಾರೆ. ಹಗಲು ಕಗ್ಗೋಲೆಗೆ ಹೆಸರಾದ ದುರ್ಗದವರು ಈ ಸೇನೆಯನ್ನು ಸದೆಬಡೆಯುತ್ತಾರೆ. ಇದರಿಂದ ಹೈದರಾಲಿಯ ಕಣ್ಣುಗಳು ಕೆಂಪಾಗುತ್ತವೆ. ಅವನು ಹೇಗಾದರೂ ಮಾಡಿ ದುರ್ಗದ ಕೋಟೆಯನ್ನು ವಶಪಡಿಸಿಕೊಳ್ಳಬೇಕೆಂದು ನಿರ್ಧರಿಸುತ್ತಾನೆ. ಅದಕ್ಕಾಗಿ ನಾನಾ ತಂತ್ರ-ಕುತಂತ್ರಗಳನ್ನು ಹೆಣೆಯುತ್ತಾ ಹೋಗುತ್ತಾನೆ. ಆರಂಭದಲ್ಲಿ ವೀರಮದಕರಿನಾಯಕನ ಕೈಮೇಲಾಗುತ್ತಾ ಹೋಗುತ್ತದೆ. ಆದರೆ ಕೊನೆಯಲ್ಲಿ ಹೈದರಲಿಯು ಪ್ರಮುಖ ಸಂಚಿನೊಂದಿಗೆ ದುರ್ಗದ ಮೇಲೆ ಯುದ್ಧ ಸಾರುತ್ತಾನೆ. ಮರಾಠರಿಗೆ ಲಂಚ ಕೋಡುತ್ತಾನೆ. ದುರ್ಗದ ಸೇನೆಯಲ್ಲಿನ ಮುಸಲ್ಮಾನರನ್ನು ಆಮೀಷವೊಡ್ಡಿ, ಧರ್ಮದ ಹೆಸರಿನಲ್ಲಿ ತನ್ನತ್ತ ಸೆಳೆದುಕೊಂಡು ದುರ್ಗದ ಕೋಟೆಯನ್ನು ವಶಪಡಿಸಿಕೊಳ್ಳುತ್ತಾನೆ. ಯುದ್ಧದಲ್ಲಿ ವೀರಾವೇಶದಿಂದ ಹೋರಾಡಿ ವೀರಮರಣವನ್ನಪ್ಪುತ್ತಾನೆ ವೀರಮದಕರಿನಾಯಕ. ಅವನ ಪ್ರಾಣತ್ಯಾಗದೊಂದಿಗೆ 'ದುರ್ಗಾಸ್ತಮಾನ'ವಾಗುತ್ತದೆ. "ಮದಕರಿ ನಾಯಕನು ಒಂದು ಇಡೀ ಸಂಸ್ಥಾನದ ಆರ್ಥಿಕ, ಸಾಮಾಜಿಕ, ಸಂಗತಿಗಳ ಮೇಲೆ ಮಾಡುವ ಪರಿಣಾಮ ತ.ರಾ.ಸು. ಅವರ ಕಣ್ಣತಪ್ಪಿಸಿಕೊಂಡಿಲ್ಲ. ಮದಕರಿ ನಾಯಕನ ಶೌರ್ಯ, ಕಾಮುಕತೆ, ಮಡಿವಂತಿಕೆಯನ್ನು ಪ್ರದರ್ಶಿಸಿಲ್ಲ. ಆದರೂ ನಾಯಕನನ್ನು ಉದಾತ್ತ ಪದವಿಗೇರಿಸುವ ಪ್ರಯತ್ನವೇ ಅತಿಯೆಂದೂ ತೋರಿದರೂ ಆಶ್ಚರ್ಯವಿಲ್ಲ. ಇದಕ್ಕೆ ತ.ರಾ.ಸು. ನಾಯಕನ ಮೇಲೆ ಬೆಳೆಸಿಕೊಂಡಿರುವ ನಿರ್ವಾಜ್ಯ ಪ್ರೇಮವೇ ಕಾರಣ."[೩೧] ಎಂಬ ಮಾತಂತೂ ಸತ್ಯವಾಗಿದೆ.

**೨. ಯುದ್ಧ :**

ಐತಿಹಾಸಿಕವಾಗಿ ಯುದ್ಧಕ್ಕೂ ತುಂಬಾ ಮಹತ್ವವಿದೆ ಯಾಕೆಂದರೆ, ಸೈನ್ಯವೆಂಬುದು ರಾಜ್ಯದ ಅತ್ಯಗತ್ಯ ವಿಭಾಗವಾಗಿ ಕಾರ್ಯನಿರ್ವಹಿಸುತ್ತ ಬಂದಿರುವುದನ್ನು ಕಾಣುತ್ತೇವೆ. ಈ ಯುದ್ಧದೊಂದಿಗೆ ಶಾಂತಿಯ ಹಂಬಲವೂ ಸೇರಿಕೊಳ್ಳುತ್ತದೆ. ಈ ಯುದ್ಧಕ್ಕೂ ಮತ್ತು ಸಾಹಿತ್ಯಕ್ಕೂ ಸಂಬಂಧವಿದೆ. ಕನ್ನಡ ಸಾಹಿತ್ಯದಲ್ಲಿ ಯುದ್ಧವನ್ನು ಕುರಿತಾದ ಸಂದರ್ಭಗಳು ಸಾಕಷ್ಟು ಸಿಗುತ್ತವೆ. ಇದು ಚಾರಿತ್ರಿಕ ಸತ್ಯಯೆನಿಸಿದೆ. ಮಹಾಕಾವ್ಯಗಳೆನಿಸಿದ ಮಹಾಭಾರತ

ಹಾಗೂ ರಾಮಾಯಣಗಳಲ್ಲೂ ಯುದ್ಧದ ಪರಿಕಲ್ಪನೆಗಳೇ ತುಂಬಿಕೊಂಡಿರುವುದನ್ನು ಕಾಣಬಹುದಾಗಿದೆ. ಯುದ್ಧ ಮತ್ತು ಸಾಹಿತ್ಯದ ಸಂಬಂಧ ಪ್ರಾಚೀನ ಕಾಲದಿಂದಲೂ ಮುಂದುವರೆಯುತ್ತ ಬಂದಿರುವ ಒಂದು ಪಾರಂಪರಿಕ ವಿಚಾರವಾಗಿದೆ. ಇಲ್ಲಿ ಮುಖ್ಯವಾಗಿ ತ.ರಾ.ಸು. ಅವರ ಚಾರಿತ್ರಿಕ ಕಾದಂಬರಿಗಳಲ್ಲಿ ಯುದ್ಧದ ಚಿತ್ರಣ ಮೂಡಿಬಂದ ರೀತಿಯನ್ನು ನೋಡಬಹುದು.

ತ.ರಾ.ಸು. ಅವರು ಬರೆದ ಮೊದಲ ಐತಿಹಾಸಿಕ ಕಾದಂಬರಿ 'ನೃಪತುಂಗ'. ಇದು ರಾಷ್ಟ್ರಕೂಟ ದೊರೆ ಅಮೋಘವರ್ಷ ನೃಪತುಂಗನ ಬದುಕಿಗೆ ಸಂಬಂಧಿಸಿದ ಕಾದಂಬರಿ. ಕ್ರಿ.ಶ. ೮೧೪ ರಲ್ಲಿ ಅಧಿಕಾರಕ್ಕೆ ಬಂದನು. ಇವನು ಸುಮಾರು ೬೨ ವರ್ಷಗಳ ಕಾಲ ಆಳ್ವಿಕೆ ನಡೆಸಿದ ದೊರೆ. "ಕ್ರಿ.ಶ. ೮೩೦ರಲ್ಲಿ ಅಮೋಘವರ್ಷನು ವೆಂಗಿ ಚಾಲುಕ್ಯ ದೊರೆ ಗುಣಗ ವಿಜಯಾದಿತ್ಯನನ್ನು ವೆಂಗವಳ್ಳಿ ಎಂಬಲ್ಲಿ ತನ್ನ ಬಲಯುತವಾದ ಸೈನ್ಯದಿಂದ ಸೋಲಿಸಿದನು."[೩೨] ಎಂಬುದನ್ನು ತ.ರಾ.ಸು. ಅವರು ಚಿತ್ರಿಸಿರುವ ರೀತಿಯನ್ನು ನೋಡಿ, "ನಿಂತಲ್ಲಿ ನಿಲ್ಲದೆ ಸಾಗಿದ, ಕೆಣಕಿದ ಜೇನು ಪಡೆಯಂಥ ಕನ್ನಡ ಸೇನೆ, ವೆಂಗಿಹಳ್ಳಿಯ ಬಯಲಲ್ಲಿ ಚಾಲುಕ್ಯ ಸೇನೆಯ ಮೇಲೆ ಎರಗಿತು ಹಾವಿನ ಮೇಲೆ ಎರಗುವ ಗರುಡನಂತೆ. ರಾಷ್ಟ್ರಕೂಟ ಸೇನೆಯ ಸಿಡಿಲಾಘಾತದಿಂದ ಚಾಲುಕ್ಯ ಸೇನೆ ತತ್ತರಿಸಿ, ಸತ್ತ ದೊರೆ ಕಲಿ ವಿಷ್ಣುವರ್ಧನನನ್ನು ಸಮರ ಭೂಮಿಯಲ್ಲೇ ಬಿಟ್ಟು ಸಾಮಂತ ಪದವಿ ಸ್ವೀಕಾರ ಮಾಡಿ ಪಲಾಯನ ಮಾಡಿತು. ಮುಗಿಲಿನಂತೆ ಕವಿದು ಬಂದದ್ದು ಇಬ್ಬನಿಯಂತೆ ಕರಗಿ ಹೋಯಿತು."[೩೩] ಎಂಬಂತೆ ಚಿತ್ರಿಸಿದ್ದಾರೆ. ಮುಂದೆ ಗಂಗರ ವಿರುದ್ಧ ನೃಪತುಂಗನು ಕೈಗೊಂಡ ಯುದ್ಧದಲ್ಲಿ ಚಾಲುಕ್ಯರು ಅವನ ನೆರವಿಗೆ ನಿಲ್ಲುತ್ತಾರೆ. ಆದರೆ ಮುಂದೆ ಪೂರ್ವ ಚಾಲುಕ್ಯ ವಿಜಯಾದಿತ್ಯ, ಪ್ರತೀಹಾರ ನಾಗಭಟ್ಟ, ಪಲ್ಲವ ದಂತಿವರ್ಮ, ಪಾಂಡ್ಯದೊರೆಗಳಾದ ವರಗುಣ, ಶ್ರೀಮಾರ, ಶ್ರೀವಲ್ಲಭರು, ಗಂಗಮಾರಸಿಂಹ, ನೋಳಂಬ ಸಿಂಹಪೋತ ಒಬ್ಬೊಬ್ಬರೂ ಪೊರೆಬಿಟ್ಟ ಹಾವುಗಳಂತೆ ವೈರ ಸಾಧಿಸಲು ಸಿದ್ಧರಾದುರು. ಸುತ್ತ ಎದ್ದುನಿಂತ ಈ ವೈರಿ ಮಂಡಲದ ನಡುವೆ, ರಾಷ್ಟ್ರಕೂಟ ರಾಜ್ಯ ಸುತ್ತಲೂ ಹಾಕಿದ ಬೆಂಕಿಯ ವರ್ತುಲದ ನಡುವೆ ಸಿಕ್ಕ ಬೇಟೆಯ ಮಿಗದಂತಿತ್ತು"[೩೪] ಎಂಬಂತಹ ಚಿತ್ರಣಗಳು ಗಮನಾರ್ಹವಾಗಿವೆ.

ಗಂಗರು ರಾಷ್ಟ್ರಕೂಟರ ಕೃತಜ್ಞತೆಯನ್ನು ಮರೆತು, ಕೃತಘ್ನರಾಗಿ ವರ್ತಿಸಲು ಪ್ರಾರಂಭಿಸಿದರು. ಸೇನಾಸಿದ್ಧತೆಯಿಂದ ಕೂಡಿದ ಗಂಗರ ದಾಳಿಗೆ ಅನಿರೀಕ್ಷಿತವಾಗಿ ಸಿಕ್ಕ ರಾಷ್ಟ್ರಕೂಟ ಗಡಿದುರ್ಗಗಳು ಸೋಲಬೇಕಾಗಿ ಬರುತ್ತದೆ. "ಸಾಕಷ್ಟು ಸಿದ್ಧತೆ ಇಲ್ಲದ ರಾಷ್ಟ್ರಕೂಟರ ಅಲ್ಪಬಲ, ಸಕಲ ಸಿದ್ಧತೆಯನ್ನು ಮಾಡಿಕೊಂಡ ಗಂಗಬಲ ಎದಿರು ಸೋಲಬೇಕಾಯಿತು. ಬಾಣ ವಿದ್ಯಾಧರ ಸಮರಭೂಮಿಯಲ್ಲೇ ಸ್ವರ್ಗಸ್ಥನಾಗಿ, ಅವನ ಮಗ ವಿಜಯಾದಿತ್ಯ ಬಾಣ, ಬೇರೆ ದಾರಿಗಾಣದೆ, ಗಂಗರ ಪ್ರಭುತ್ವನ್ನೊಪ್ಪಿಕೊಂಡ.

ರಾಜಾರಮಡುಪಿನಲ್ಲಿ ರಣಾಂಗಣದಲ್ಲಿ ರಾಷ್ಟ್ರಕೂಟ ಗರುಢ ಧ್ವಜ ಕೆಳಗಿಳಿದು, ಆದರ ಮುಡಿಯ ಮೇಲೆ ಗಂಗರ ಗಜಪತಾಕೆ ಹಾರಿತು."[೩೫] ಈ ಸುದ್ದಿಯು ಬಂಕರಸನ ಕಿವಿಗೆ ಬೀಳುತ್ತಿದ್ದಂತೆಯೇ ಅವನು ಕೆಣಕಿದ ಕಾಳಸರ್ಪದಂತೆ ಸಿಡಿದು ನಿಂತನು. ಕ್ರೋಧದ ಜ್ವಾಲಾಮುಖಿಯಾದನು. ತನ್ನ ಬಳಿ ಅಗತ್ಯ ಸೇನಾಬಲ ಇರದಿದ್ದರೂ ಇದ್ದ ಮೂಲಸೇನಾಬಲದೊಂದಿಗೆ ಗಂಗರ ಮೂಲಬಲಗಳ ಕೇಂದ್ರ ಸ್ಥಾನಯೆನಿಸಿದ ಕೈದಾಳದುರ್ಗದ ಮೇಲೆ ದಾಳಿ ಮಾಡಲು ಮುಂದಾಗುತ್ತಾನೆ. "ಬಂಕರಸರ ಸೇನೆಯಲ್ಲಿದ್ದ ಜನಬಲ ಅಲ್ಪ. ಆದರೆ ಒಬ್ಬೊಬ್ಬನೂ ಉಕ್ಕಿನಾಳು. ಅದು ಜೊತೆಗೆ, ಅವರೆಲ್ಲರ ಹೃದಯವೂ ಪ್ರತೀಕಾರ ತೃಷೆಯಿಂದ ಮತ್ತಷ್ಟು ಉಕ್ಕಾಗಿತ್ತು. ಗಂಗರ ಸೊಕ್ಕಡಗಿಸಿ ತಳವನಪುರವನ್ನು ಸುಟ್ಟು ಬೂದಿ ಮಾಡಬೇಕು, ಇಲ್ಲವೇ ಸಮಾರಾಂಗಣದಲ್ಲಿ ಸಾವನ್ನು ಆಲಂಗಿಸಬೇಕು ಎಂದು ಶಪಥತೊಟ್ಟು ಹೊರಟಿದ್ದರು. ಎದುರಾದವರನ್ನು ಕೊಚ್ಚು ಕೆಡಹುತ್ತಾ, ಕೋಟೆಗಳನ್ನು ಸೀಳುತ್ತಾ ಸಾಗಿದರು. ಕೊಳತೂರಿಂದ ಬಂಕರಸನು ಕಳಿಸಿದ ಸುದ್ದಿ ಮಾನ್ಯಕೇಟವನ್ನು ಮುಟ್ಟುವ ವೇಳೆಗೆ, ಬಂಕರಸರ ಬಲದಾರಿಯಲ್ಲಿ ಇದಿರಾದವರನ್ನು ಮುರಿದು ಕೈದಾಳದುರ್ಗಕ್ಕೆ ಲಗ್ಗೆ ಹಾಕಿತ್ತು"[೩೬] ಹೇಗೆ ರಾಷ್ಟ್ರಕೂಟ ಸೇನೆಯು ಬಂಕರಸರ ನೇತೃತ್ವದಲ್ಲಿ ಗಂಗರ ಪ್ರತೀಕಾರ ತೀರಿಸಿಕೊಂಡಿತೆಂಬುದರ ಚಿತ್ರಣವನ್ನು ತ.ರಾ.ಸು. ಕೊಡುತ್ತಾರೆ. ಇದು ನೃಪತುಂಗನ ರಾಜಕುಮಾರ ಕೃಷ್ಣನು ಮಾಡಿದ ರಾಜದ್ರೋಹ ಕಾರ್ಯಕ್ಕೆ ಬಂಕರಸನು ಪ್ರತೀಕಾರದ ದಾಳಿ ನಡೆಸಬೇಕಾಗಿ ಬಂದಿತು.

'ಸಿಡಿಲ ಮೊಗ್ಗು' ಕಾದಂಬರಿಯಲ್ಲಿ ವಿನಯಾದಿತ್ಯನ ಪರಿವಾರ ಸೊಸೆವೂರಿನಿಂದ ಬಳ್ಳಿಗಾಮೆಗೆ ಪ್ರಯಾಣ ಬೆಳೆಸಿದ ಸಂದರ್ಭದಲ್ಲಿ ಎರೆಯಂಗದೇವ ಮಾತಿನ ಮಧ್ಯೆದಲ್ಲಿ ತನ್ನ ಹೊಯ್ಸಳ ವಂಶದ ರಾಜ್ಯಭಾರದ ಹುಟ್ಟನ್ನು ಕುರಿತು ಹೇಳುವ ಮಾತುಗಳಲ್ಲಿ ಹೊಯ್ಸಳ ನಾಡಿನ ವೀರತ್ವದ ಚಿತ್ರಣವನ್ನು ತ.ರಾ.ಸು. ಅವರು ಕೊಡುತ್ತಾರೆ. "ತನ್ನ ವಂಶದ ಮೂಲ ಪುರುಷ ಸಳರಾಯ, ಸೊಸೆವೂರಿನ ವಾಸನ್ತಿಕಾದೇವಿಯ ಮಂದಿರದಲ್ಲಿ ಸಳೆಯಿಂದ ಹುಲಿಯನ್ನು ಹೊಯ್ದು ಸುದತ್ತಯಾಗಿಗಳ ಹರಕೆಯಿಂದ ತಮ್ಮ ರಾಜ್ಯಭಾರಕ್ಕೆ, ಆಸ್ತಿಭಾರ ಹಾಕಿದ ವೀರಕಥೆಯನ್ನು, ತನ್ನ ತಾತ ವಿನಯಾದಿತ್ಯ ಮಲೆಯರಸುಗಳ ಮೇಲೆ ದಂಡೆತ್ತಿ ಹೋದಾಗ ಆತನನ್ನು ಎದುರಿಸಿ ಸೋತ ಮಲೆಯರಸುಗಳ ಗತಿ, ಕವಿಗಳ ಬಾಯಲ್ಲಿ

ಮಲೆಯರಸು ಮಕ್ಕಳೆಲ್ಲಂ
ತಲೆಯಂತ ಡೆವುತ ಮೆರ್‍ದು ಪಾದಾಂಬುಜಮಂ
ತಲೆಯೋಳ್ತಳೆವಿನೆಗಂಭುಜ
ಬಲಮಂತಳೆದಿರ್ಪನಲ್ತೆ ವಿನಯಾದಿತ್ಯಂ॥

– ಎಂಬ ಹಾಡಾಗಿ ನಾಡೆಲ್ಲ ಹರಡಿದುದನ್ನು ವಿನಯಾದಿತ್ಯರಾಯನ 'ರಕ್ಕಸ ಹೊಯ್ಸಳ' ಎಂಬ ಅದಕ್ಕೇರೆದ ಚಾವುಟವನ್ನು ಕಂಡೆ ಕೊಂಕಣಿಗರು ದಿಕ್ಕಾಪಾಲಾಗಿ ಓಡಿದ ಚೋಹ್ಯವನ್ನು, ಎರೆಯಂಗದೆವನೋ ಚೋಳ ಸಾಮಂತ ಅಣ್ಣಿಗರ ಮೇಲೆ ದಂಡೆತ್ತಿ ಹೋದಾಗ, ಸೋತ ಅಣ್ಣಿಗ ಜೀವ ಭೀತಿಯಿಂದ, ಕಾಡಿನ ಸೊಪ್ಪುಗಳನ್ನೇ ಬಟ್ಟೆಯನ್ನಾಗಿ ಉಟ್ಟು ಕಾಡಿನಲ್ಲಿ ಎಲೆಮರೆಸಿಕೊಂಡು ಓಡಿದ ಸಾಹಸವನ್ನು, ಸೆರೆಸಿಕ್ಕಿದನನ್ನುಗ 'ನಾನು ನನ್ನುಗನಲ್ಲ, ನಿಮ್ಮ ಅಣುಗ ಕಾಪಾಡಿ' ಎಂದು ಬೇಡಿದ ವಿನೋದವನ್ನೂ ಕಥೆಯಾಗಿ ಕೇಳಿ ಮೈ ಮರೆತಿದ್ದ"[೩೭] ಎಂಬಂತಹ ಮಾತುಗಳೊಂದಿಗೆ ಹೊಯ್ಸಳ ಸಂಸ್ಥಾನದ ವೀರಗುಣವನ್ನು ಪರಿಚಯಿಸುತ್ತಾರೆ.

'ಕೀರ್ತಿನಾರಾಯಣ' ಕಾದಂಬರಿಯಲ್ಲಿ ಎರೆಯಂಗದೇವನ ಮೊದಲ ಮಗನಾದ ಬಲ್ಲಾಳರಾಯನ ವಿವಾಹಮಹೋತ್ಸವದಲ್ಲಿ ಹೊಯ್ಸಳ ಸಾಮ್ರಾಜ್ಯ ಮೈಮರೆತಿರುವಾಗ ಚಾಲುಕ್ಯ ಚಕ್ರವರ್ತಿ ವಿಕ್ರಮಾದಿತ್ಯನು, ತನ್ನ ಸಾಮಂತನಾದ ಪೊಟ್ಟ ಪೊಂಬುರ್ಚಪುರದ ಸಾಮಂತರ ಅರಸು ಜಗದೇವನನ್ನು ಹೊಯ್ಸಳ ಸಾಮ್ರಾಜ್ಯ ಮೇಲೆ ದಾಳಿ ಮಾಡಲು ಸೂಚಿಸುತ್ತಾನೆ. ವಿಕ್ರಮಾದಿತ್ಯನ ಈ ಕೃತ್ಯ ಮಿತ್ರದ್ರೋಹದಂತೆ ಕಾಣುತ್ತದೆ. ಅನಿರೀಕ್ಷಿತವಾದ ಈ ದಾಳಿಯಿಂದಾಗಿ ಬಲ್ಲಾಳರಾಯ ಮತ್ತು ಆತನ ದಂಡನಾಯಕರಾದಿಯಾಗಿ ಎಲ್ಲರಿಗೂ ದಿಗ್ಭ್ರಾಂತರಾದರು. ನಿಂತ ನೆಲವೇ ಕುಸಿದಂತಾದ ಈ ಗಳಿಗೆಯಲ್ಲಿ ಅಲ್ಪಕಾಲ ಕಿಂಕರ್ತವ್ಯ ಮೂಢನಾಗಿದ್ದ ಬಲ್ಲಾಳರಾಯನ ಹೃದಯದಲ್ಲಿ ಮರುಗಳಿಗೆಯೇ ಕ್ರೋಧದ ದಾವಾಗ್ನಿ ಪ್ರಜ್ವಲಿಸಿತು. ಆ 'ಮಿತ್ರದ್ರೋಹ ಮೃತ್ಯುವಿಗೆ ಆಹ್ವಾನವೆಂಬ ಪಾಠವನ್ನು ಜಗದೇವರಾಯನಿಗೆ, ಅವನ ಸೋಲಿನ ಮೂಲಕ ಚಾಲುಕ್ಯ ಚಕ್ರವರ್ತಿಗೆ ಕಲಿಸುವ ನಿರ್ಧಾರದಿಂದ, ಬಲ್ಲಾಳರಾಯ ಸ್ವಯಂ ಖಡ್ಗ ಧರಿಸಿದ. ಬಲ್ಲಾಳರಾಯ ಅಟ್ಟಿದ ವೇಗಾಲಯದಿಂದ, ಜಗದೇವರಾಯನ ದಾಳಿಯ ಸುದಿಯನ್ನರಿತ ವಿಷ್ಣುವರ್ಧನ ತೊಂಡನೂರಿನಿಂದ ಪ್ರಬಲವಾದ ಸೇನೆಯೊಂದಿಗೆ ರಾಜಧಾನಿಯ ರಕ್ಷಣೆಗೆ ಧಾವಿಸಿದ."[೩೮] ನಿರಂತರ ನಡೆಯುವ ಯುದ್ಧದ ಆಯಾಸದಿಂದಾಗಿ ಬಲ್ಲಾಳರಾಯ ಸಾವನ್ನಪ್ಪುತ್ತಾನೆ. ಮುಂದೆ ಹೊಯ್ಸಳ ಸಾಮ್ರಾಜ್ಯದ ಕೀರ್ತಿ ಪತಾಕೆಯ ಜವಾಬ್ದಾರಿಯನ್ನು ವಿಷ್ಣುವರ್ಧನನು ಹೊತ್ತುಕೊಳ್ಳುತ್ತಾನೆ. ವಿಷ್ಣುವರ್ಧನನ ಪಟ್ಟಾಭಿಷೇಕದ ನಂತರ ಅವನ ನೇತೃತ್ವದಲ್ಲಿ ತಲಕಾಡಿನ ಚೈತ್ರಯಾತ್ರೆ ಆರಂಭವಾಗುತ್ತದೆ.

ಚೋಳರ ರಾಜಧಾನಿ ಜನನಾಥಪುರಕ್ಕೆ ಹೊಯ್ಸಳ ಸೇನೆಯು ಮುತ್ತಿಗೆ ಹಾಕಿದಾಗ, ಸೈನಿಕರಲ್ಲಿನ ರಣೋತ್ಸಾಹದ ಚಿತ್ರಣವನ್ನು ನೋಡಿ, "ಒಂದುಗಳಿಗೆ ಗೆಲುವಿನ ಕೇಕೆಗಳಿಂದ ತುಂಬಿದ ರಣಾಂಗಣ. ಮರುಗಳಿಗೆ ಗಾಯಗೊಂಡ ಆನೆಗಳು, ಕುದುರೆಗಳು, ಕಾಲಾಳುಗಳ ನೋವಿನ ಚೀರುಧ್ವನಿಯಿಂದ, ಸಾವಿನ ಭೀತಿಯ ಆಕ್ರಂದನದಿಂದ ತುಂಬಿತು. ಕೋಟೆಯ ಬಳಿ ಕೈಕಾಲು ಮುರಿದು, ತಲೆಯೊಡೆದು ನೆತ್ತರು ಸೂಸುವ ಹೆಣಗಳು ರಾಶಿ ರಾಶಿಯಾಗಿ, ರಣರಂಗಕ್ಕಿಕ್ಕಿದ ಭೂತ ಬಲಿಯಂತೆ ಬಿದ್ದವು. ಹಗಲು ಆರಂಭವಾದ ಯುದ್ಧ ಸಂಜೆಯಾಗಿ

ಕತ್ತಲು ಕವಿಯುವ ಹೊತ್ತಾದರೂ ಮುಗಿಯದೆ, ಕಡೆಗೆ ಕತ್ತಲೆಯೇ ಎರಡು ಬಲಗಳಿಗೂ ನಡುವೆ ನಿಂತು, ಆ ರಾತ್ರಿಯ ಮಟ್ಟಿಗೆ ಯುದ್ಧವನ್ನು ನಿಲ್ಲಿಸಿತು."[೩೯] ಎಂದು ಯುದ್ಧದ ಚಿತ್ರಣವನ್ನು ಕೊಡುವ ತ.ರಾ.ಸು. ಅವರು ಆ ಮೂಲಕ ಅದರ ಭಯಂಕರತೆಯನ್ನು ಪರಿಚಯಿಸುತ್ತಾರೆ. ಈ ವರ್ಣನೆಯನ್ನು ನೋಡಿ, "ಗೆದ್ದು ಕೋಟೆಯನ್ನು ಹಿಡಿಯಲೇಬೇಕೆಂಬ ಹಟದಿಂದ ನುಗ್ಗಿದ ಎರಡು ಸಾವಿರ ಮಂದಿ ಭಾಷೆಯಾಳುಗಳ ವಿಕಟಾಟ್ಟಹಾಸದ ಇದಿರು, ಚೋಳ ಸೇನೆ, ಉರಿ ಸೋಕಿದ ಬೆಣ್ಣೆಯಂತೆ ಕರಗಿತು. ಬಣವೆಗಳ ಬೆಂಕಿಯು ಕೆಂಬೆಳಕಿನಲ್ಲಿ ರಕ್ತಸ್ನಾನ ಮಾಡಿ, ವಿಕಟಾಟ್ಟಹಾಸಗೈಯುತ್ತಾ ಮುಂಬರಿಯುವ ಬೇಳೆ ವಡಿಚರರನ್ನು ಕಂಡು, ಭೂತದರ್ಶನವಾದಂತೆ ಬೆದರಿ, ಪಲಾಯನ ಮಾಡಿದರು ಚೋಳರು. ಸಾವಿರಾರು ಜನ ಉರಿಯುವ ಬಣವೆಯ ಹುಲ್ಲನ್ನೇ ಕಿತ್ತು ಬಾಯಲ್ಲಿಟ್ಟುಕೊಂಡು ಶರಣಾಗತರಾಗಿ, ಬೆತ್ತಲೆಯಾಗಿ ನಿಂತು ಜೀವದಾನ ಬೇಡಿದರು...... ಪಾಳೆಯ ದತ್ತಣಿಂದ ನುಗ್ಗಿದ ಸೇನೆಯ ಅಗ್ರ ಭಾಗದಲ್ಲೇ ಕುದುರೆಯೇರಿ ಬಂದ ಗಂಗ ರಾಜರು, ಕೋಟೆಯೊಳಗೆ ಪ್ರವೇಶಿಸುವ ವೇಳೆಗೆ, ಚೋಳ ಸಾಮಾಂತ ದಾಮೋದರನ ಕತ್ತರಿಸಿದ ತಲೆಯನ್ನು, ಖಡ್ಗದ ತುದಿಯಲ್ಲಿ ತನ್ನ ಪರಾಕ್ರಮ ಪತಾಕೆಯನ್ನು ಹಿಡಿದ ವಿಷ್ಣುವರ್ಧನ ಅವರಿಗೆ ಕಾಣಿಸಿಕೊಂಡ. 'ಪ್ರಭೋ' ಎಂದು ಕೂಗುತ್ತಾ ತನ್ನತ್ತ ಧಾವಿಸಿದ ಗಂಗರಾಜರನ್ನು ಕಂಡ ವಿಷ್ಣುವರ್ಧನ, ತನ್ನ ಕುದುರೆಯನ್ನು ಅವರತ್ತ ತಿರುಗಿಸಿ – 'ಜನನಾಥಪುರ ನಮ್ಮದಾಯಿತು ಗಂಗರಾಜರೇ, ಜನನಾಥಪುರ ನಮ್ಮದಾಯಿತು' ಎಂದು ಉತ್ಸಾಹದಿಂದ, ಸಾಮಾನ್ಯ ಸೈನಿಕನಂತೆ ಕೇಕೆ ಹಾಕಿ."[೪೦] ಎಂಬಂತೆ ಹೊಯ್ಸಳ ಸಾಮ್ರಾಜ್ಯದ ಸೈನಿಕರ ಪರಾಕ್ರಮವನ್ನು ಕಣ್ಣಿಗೆ ಕಟ್ಟುವಂತೆ ತ.ರಾ.ಸು. ಚಿತ್ರಿಸಿದ್ದಾರೆ.

ಕೊನೆಗೆ ಹೊಯ್ಸಳ ಸೇನೆ ಕಾವೇರಿ ನದಿಯನ್ನು ತೆಪ್ಪದ ಮೂಲಕ ದಾಟಿ ಬಂದು ತಲಕಾಡಿನ ಕೋಟೆಯ ಸುತ್ತ ಆವರಿಸಿತು. ಅಲ್ಲಿ ಆದಿಯಮನನ್ನು ಸೋಲಿಸಿ, ಸೆರೆಹಿಡಿದು ಅವನಿಗೆ ಪ್ರಾಣಭಿಕ್ಷೆಯನ್ನು ದಯಪಾಲಿಸಿತು. ಅಲ್ಲಿಗೆ ತಲಕಾಡಿನ ಕೋಟೆಯ ಮೇಲೆ ಹಾರಾಡುತ್ತಿದ್ದ ಚೋಳಧ್ವಜವೂ ಉರುಳಿ, ಹೊಯ್ಸಳ ಕೀರ್ತಿ ಪತಾಕೆಯು ಹಾರಾಡಿತು.

ಭರತ–ಬಾಹುಬಲಿಯರ ಯುದ್ಧದ ಚಿತ್ರಣದೊಂದಿಗೆ 'ಶಿಲ್ಪಶ್ರೀ' ಕಾದಂಬರಿ ಆರಂಭವಾಗುತ್ತದೆ. ಆದರೆ ರಾಜ್ಯದ ಬಗೆಗೆ ಇರುವ ವ್ಯಾಮೋಹ ಮತ್ತು ನಿರ್ಮೋಹದ ಗುಣಗಳನ್ನು ಅನಾವರಣಗೊಳಿಸುವುದಕ್ಕಾಗಿ ತ.ರಾ.ಸು. ಅವರು ಇಂತಹ ಸನ್ನಿವೇಶದ ವಿವರಣೆಯನ್ನು ಕೊಡುತ್ತಿದ್ದಾರೆಂದೆನಿಸುತ್ತದೆ. ಭರತ–ಬಾಹುಬಲಿಯ ಮಧ್ಯೆ ಕಾಳಗ ನಡೆದದ್ದು ನಿಜವಾದರೂ ಯುದ್ಧದ ಭಯಂಕರತೆ ಮತ್ತು ಅದು ಮಾನವೀಯ ಸಂಬಂಧಗಳ ಮೇಲೆ ಮಾಡುವ ದುಷ್ಪರಿಣಾಮಗಳ ಹಿನ್ನೆಲೆಯಲ್ಲಿ ಈ ಪ್ರಸಂಗ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ. ಇದಕ್ಕನುಗುಣವಾಗಿ ಒಂದು ಕಾಲಕ್ಕೆ, ರಾಷ್ಟ್ರಕೂಟ ಮತ್ತು ಗಂಗ ಮನೆತನಗಳು ದಕ್ಷಿಣಭಾರತದಲ್ಲಿ ತಮ್ಮ ಪರಮಾಧಿಕಾರಕ್ಕಾಗಿ ಸೆಣಸಾಡಿದ ವಿವರಣೆಯನ್ನೂ

ತ.ರಾ.ಸು. ಕೊಡುತ್ತಾರೆ. "ಒಂದು ಕಾಲಕ್ಕೆ ರಾಷ್ಟ್ರಕೂಟ, ಗಂಗ ಮನೆತನಗಳು, ದಕ್ಷಿಣದಲ್ಲಿ ಪರಮಾಧಿಕಾರಕ್ಕೆ ಒಬ್ಬರೊಡನೊಬ್ಬರು ಕಡುವೈರಿಗಳಾಗಿ ಸ್ಪರ್ಧಿಸಿದ್ದರು. ಪ್ರಭೂತವರ್ಷ ಗೋಪಿಂದ, ಗಂಗವಾಡಿಯ ದೊರೆಯನ್ನು ಸೆರೆಹಿಡಿದು ಕಾರಾಗೃಹದಲ್ಲಿಟ್ಟು ಅಪಮಾನಿಸಿದ್ದ. ಗಂಗವಾಡಿಯ ಮೇಲೆ ತನ್ನ ಸೋದರ ರಣಾವಲೋಕ ಕಂಬಯ್ಯನನ್ನು ಮಂಡಲಾಧಿಕಾರಿಯಾಗಿ ಹೇರಿದ್ದ. ರಾಷ್ಟ್ರಕೂಟ ಶಾಸನಗಳು ಗಂಗದೊರೆಗಳನ್ನು 'ಕೃತಘ್ನ ಗಂಗ' ನೆಂದು ಕರೆದು ಹೀನಾಯ ಮಾಡಿದ್ದವು. ಅಮೋಘವರ್ಷ ನೃಪತುಂಗನ ಮಹಾದಂಡನಾಯಕನಾದ ಬಂಕರಸ ರಾಜಧಾನಿ ತಲವನಪುರವನ್ನು ಸುಟ್ಟಿದ್ದ. ಈ ಪರಸ್ಪರ ಸ್ಪರ್ಧಾ ಸಮರದಲ್ಲೀ, ಸ್ವಾತಂತ್ರ್ಯಪ್ರಿಯನಾದ ಶಿವಮಾರ, ಕಾಗೆ ಮೊಗೆಯೂರಿನ ರಣಭೂಮಿಯಲ್ಲಿ ದೇಹಾರ್ಪಣ ಮಾಡಿದ್ದ. ಹಾಗೆ ಹೊತ್ತಿ ಬೆಳೆದಿತ್ತು ದ್ವೇಷದ ದಾವಾಗ್ನಿ, ಈ ಎರಡು ಮನೆತನಗಳಲ್ಲಿ"[೪೮] ಎಂಬಂತಹ ಚಿತ್ರಣ ಕಂಡು ಬರುತ್ತದೆ.

ಚಾವುಂಡರಾಯನು ರನ್ನಮಯ್ಯರೊಂದಿಗೆ ಶ್ರವಣಬೆಳಗೋಳಕ್ಕೇ ಪ್ರಯಾಣ ಬೆಳೆಸಿದಾಗ, ಅಲ್ಲಿ ಜ್ಯೋತಿಯಂತೆ, ವೈರಾಗ್ಯದ ದಿವ್ಯಧ್ವಜದಂತೆ ಬೆಳಗುವ ಬಾಹುಬಲಿಯ ದಿವ್ಯಮೂರ್ತಿಯಲ್ಲೇ ಮಗ್ನನಾಗಿರಬೇಕಾದರೆ ಮಾನ್ಯಖೇಟದಿಂದ ಯುವರಾಜ ರಾಚಮಲ್ಲನಿಂದ ಪತ್ರವೊಂದು ಬರುತ್ತದೆ. "ಮಾನ್ಯಖೇಟದಿಂದ ಅತ್ಯಂತ ಘೋರವಾರ್ತೆ ಬಂದಿದೆ. ಪರಮಾರ ಸೀಯರನು ರಾಜಧಾನಿಯ ಮೇಲೆ ದಾಳಿ ಮಾಡಿದಾಗ, ನಮ್ಮ ಸೇನೆಗಳಿಗೆ ಸೋಲಾಗಿ, ಸೀಯಕ ತನಗೆ ವಶವಾದ ರಾಜಧಾನಿಯನ್ನು ಕೊಳ್ಳೆಹೊಡೆದು ಬೆಂಕಿಗೆ ಒಪ್ಪಿಸಿದನೆಂದೂ, ಆ ಬಳಿಕ ರಾಜಧಾನಿಯನ್ನು ಮತ್ತೆ ಕೈವಶ ಮಾಡಿಕೊಂಡರು, ರಾಷ್ಟ್ರಕೂಟ ಶಕ್ತಿಕೊಂಚ ದುರ್ಬಲವಾದ ಆ ವೇಳೆಯಲ್ಲೆ ಚಾಲುಕ್ಯ ತೈಲಪನೂ ಬಂಡಾಯ ಹೂಡಿದುದರಿಂದ ಅವನನ್ನು ಅಡಗಿಸಲು ಸೇನೆಯೊಂದಿಗೆ ತಾವು ಬಂಕಾಪುರಕ್ಕೆ ಬಂದಿರುವುದಾಗಿಯೂ, ನಿಮ್ಮನ್ನು ಕೂಡಲೇ ಹೆಚ್ಚಿನ ಸೇನೆಯೊಂದಿಗೆ ಕಳುಹಿಸಬೇಕೆಂದೂ, ಶ್ರೀಮಾರಸಿಂಹ ಪೆರ್ಮಾಡಿಗಳು ಓಲೆ ಕಳುಹಿಸಿದ್ದಾರೆ. ಆದುದರಿಂದ ನೀವು ಅವಸರವಾಗಿ ತಲವನಪುರಕ್ಕೆ ಹಿಂದಿರುಗುವುದು. ಇಲ್ಲಿ ಸೇನೆ ಪ್ರಯಾಣ ಸನ್ನದ್ಧವಾಗಿ ನಿಮ್ಮ ಆಗಮನವನ್ನು ಕಾಯುತ್ತಿರುತ್ತದೆ."[೪೨] ಎಂದು ಪತ್ರ ಬರೆಯಲಾಗುತ್ತದೆ. ಈ ವಿಷಯ ತಿಳಿದ ಚಾವುಂಡರಾಯನು ದಿಗ್ಭ್ರಾಂತನಾಗುತ್ತಾನೆ. ನಿಂತ ನೆಲವೇ ಕುಸಿದ ಅನುಭವ ಅವನಿಗಾಗುತ್ತದೆ. ಈ ಘೋರತಮ ಯುದ್ಧದಿಂದಾಗಿ ಸಂಭವಿಸುವ ಅನೇಕ ಸಾವು-ನೋವುಗಳ ಚಿತ್ರಣವನ್ನು ಇಂತಹ ಪ್ರಸಂಗಗಳ ಮೂಲಕ ತ.ರಾ.ಸು. ಅವರು ಕೊಟ್ಟಿದ್ದನ್ನು ಕಾಣಬಹುದಾಗಿದೆ.

ಇದೇರೀತಿ 'ಕಂಬನಿಯ ಕುಯಿಲು' ಕಾದಂಬರಿಯಲ್ಲಿ ನೇರವಾದ ಯಾವುದೇ ಯುದ್ಧದ ಚಿತ್ರಣ ಬರುವುದಿಲ್ಲ. ಆದರೆ ದಳವಾಯಿಗಳು ರಾಜ್ಯಾಧಿಕಾರ ಮತ್ತು ತಮ್ಮ ಕರ್ತವ್ಯವನ್ನು ಕುರಿತು ಚಿಂತಿಸುವಾಗ, ಈ ಹಿಂದೆ ನಡೆದ ಯುದ್ಧದ ವರ್ಣನೆಯನ್ನು

ತ.ರಾ.ಸು. ಅವರು ಸಾಂದರ್ಭಿಕವಾಗಿ ನೀಡಿದ್ದನ್ನು ಕಾಣಬಹುದು. "ಸೀರ್ಯದ ಕೃಷ್ಣಪ್ಪನಾಯಕ ದುರ್ಗದ ಮೇಲೆ ದಂಡೆತ್ತಿ ಬಂದಾಗ ಈ ದುರ್ಗವನ್ನು ಕಾಪಾಡಿದವರು ಸರ್ಜೇರಾಯರು. ತಮ್ಮ ಕೈಯ ಗಂಡುಗೊಡಲಿಯಿಂದಲೇ ನೂರಾರು ಮಂದಿಯನ್ನು ಕಡಿದು ರಾಜ್ಯವನ್ನು ರಕ್ಷಿಸಿದ ಪರಾಕ್ರಮ ಅವರದು. ಅವರು ಕಟ್ಟಿದ ರಾಜ್ಯ ಅವರದಾಗಬೇಕಿತ್ತು. ಇಲ್ಲವೇ ಅವರ ಮಕ್ಕಳದಾಗಬೇಕಿತ್ತು"[೬೩] ಎಂಬಂತಹ ಯುದ್ಧದ ವಿವರಣೆಯನ್ನು ತ.ರಾ.ಸು. ಅವರು ಕೊಡುತ್ತಾರೆ. ಹಾಗೆಯೇ ಜನಸಾಮಾನ್ಯರ ಬದುಕಿನ ಮೇಲೆ ಈ ಯುದ್ಧವು ಉಂಟುಮಾಡುವ ಗಾಢವಾದ ಪರಿಣಾಮದ ಹಿನ್ನೆಲೆಯಲ್ಲಿ ತ.ರಾ.ಸು. ಅವರು ಈ ಕಾದಂಬರಿಯಲ್ಲಿ ನೀಡುವ ಈ ವಿವರಣೆಯನ್ನು ನೋಡಬಹುದು. "ಹುಚ್ಚಿ ಹನುಮವ್ವ ವೀರಣ್ಣನಂತೆಯೇ ಗೋಣೂರಿನವಳು. ಗೋಣೂರಿನಲ್ಲಿ ಅವಳನ್ನು ಅರಿಯದವರು ಯಾರೂ ಇಲ್ಲ. ಅಬಾಲವೃದ್ಧರಿಗೂ ಅವಳ ಬಾಳ ಕರುಣಕಥೆ ಗೊತ್ತು...... ಹುಚ್ಚಾಗಿ ಹಾಡುತ್ತಾ ಚೀರುತ್ತಾ ಅಲೆಯುತ್ತಿರುವ ಹನುಮವ್ವ ಎಂದೂ ಹಾಗೆಯೇ ಇರಲಿಲ್ಲ. ಕೆಲವೇ ವರ್ಷಗಳ ಹಿಂದೆ, ಆಕೆ ಎಲ್ಲರಂತೆಯೇ ಇದ್ದಳು. ಕಸ್ತೂರಿರಂಗಪ್ಪ ನಾಯಕರ ಕಾಲದಲ್ಲಿ ಆಕೆಯ ಗಂಡ, ಅವರ ಸೇನೆಯಲ್ಲೊಬ್ಬ ಮುಖ್ಯಸ್ಥನಾಗಿದ್ದ. ಸೀರ್ಯದ ರಂಗಪ್ಪನಾಯಕ ಹಿರಿಯೂರಿನ ಕೋಟೆಗೆ ಲಗ್ಗೆ ಹಾಕಿದಾಗ, ಅದರ ರಕ್ಷಣೆಗೆಂದು ತೆರಳಿದ ದುರ್ಗದ ಪಡೆಯೊಂದಿಗೆ ಹೋದ ಹನುಮವ್ವನ ಗಂಡ, ಆ ಯುದ್ಧದದಿಂದ ಹಿಂದಿರುಗಲಿಲ್ಲ. ಹಿಂದಿರುಗಿ ಬಂದದು ನೂರಾರು ಬಾಣಗಳ ಆಘಾತದಿಂದ ತೂತು ತೂತಾಗಿದ್ದ ವಿಕಾರವಾಗಿ ಕೊಳೆತು ನಾರುತ್ತಿದ್ದ ಅವನ ಶವ."[೪೪] ಇದ್ದ ಒಬ್ಬ ಮಗ ಚಿನ್ನೋಬ್ಬಯ್ಯನನ್ನು ಸಾಕಿ ಬೆಳೆಸಲು ಹನುಮವ್ವ ಬದುಕಿದಳು. ಆದರೆ ಅವನು ಮದಕರಿನಾಯಕರ ಕಾಲದಲ್ಲಾದ ದೇವಪುರದ ಲಡಾಯಿಯಲ್ಲಿ ಮೃತನಾಗಿದ್ದನು. ಗಂಡನ ಹೆಣವನ್ನಾದರೂ ಕಂಡ ಹನುಮವ್ವ ಮಗನ ಹೆಣವನ್ನು ಕಾಣಲಿಲ್ಲ. ಆ ಕಾರಣಕ್ಕಾಗಿ ಅವಳು ಹುಚ್ಚಳಾಗಬೇಕಾಯಿತು.

ದುರ್ಗದ ಆಜನ್ಮ ವೈರಿಗಳಾದ ಹರಪನಹಳ್ಳಿಯವರ ಮಾತಿಗೆ ಪ್ರಚೋದಿತನಾದ ಷಂಷೇರಖಾನನು ಹರಿಹರ ಕೋಟೆಯ ಮೇಲೆ ದಾಳಿ ಮಾಡುವ ವಿವರ 'ರಾಜ್ಯದಾಹ' ಕಾದಂಬರಿಯಲ್ಲಿ ಬರುತ್ತದೆ. ಷಂಷೇರಖಾನನು ತನ್ನ ಬಲಾಢ್ಯ ಸೈನ್ಯದೊಂದಿಗೆ ತುಂಗಭದ್ರಾ ತೀರದಲ್ಲಿದ್ದ ಹರಿಹರ ಕೋಟೆಯ ಮೇಲೆ ದಾಳಿ ಮಾಡುತ್ತಾನೆ. ದುರ್ಗದ ದಳವಾಯಿ ಮುದ್ದಣ್ಣನು ವೀರಾವೇಶದಿಂದ ಹೋರಾಡಿ ಅವರನ್ನು ಸೋಲಿಸುತ್ತಾನೆ. ಪ್ರಬಲ ದಾಳಿಯ ಸಲುವಾಗಿ ತಂದ ಆಯುಧ, ವಸ್ತು, ವಾಹನ, ಸಂಪತ್ತುಗಳ ಅಗಾಧ ಭಂಡಾರವನ್ನು ಮುದ್ದಣ್ಣನಿಗೆ ಒಪ್ಪಿಸಿ, ಹರಿಹರದ ರಣಾಂಗಣದಿಂದ ಪಲಾಯನ ಮಾಡುತ್ತಾನೆ. ಷಂಷೇರಖಾನ. ರಾಜ್ಯದಾಹಕ್ಕಾಗಿ ನಡೆಯುವ ಅಂತ:ಕಲಹಗಳನ್ನು 'ರಕ್ತರಾತ್ರಿ' ಮತ್ತು 'ತಿರುಗುಬಾಣ'ಗಳಲ್ಲಿ ಕಾಣುತ್ತೇವೆ. ರಕ್ತರಾತ್ರಿಯಲ್ಲಿ ಮುದ್ದಣ್ಣನು ಲಿಂಗಣ್ಣ ನಾಯಕನೊಂದಿಗೆ

ಸಂಘರ್ಷಕ್ಕಿಳಿಯುತ್ತಾನೆ. ಅರಮನೆಗೆ ಮುತ್ತಿಗೆ ಹಾಕಿ ಅಲ್ಲಿನ ಸೈನಿಕರನ್ನೆಲ್ಲಾ ಕೊಂದು, ಲಿಂಗಣ್ಣ ನಾಯಕನನ್ನು ಸೆರೆ ಹಿಡಿಯುತ್ತಾನೆ. ಇದೇ ರೀತಿ ಮುದ್ದಣ್ಣನ ಆಟಾಟೋಪ 'ತಿರುಗುಬಾಣ' ಕಾದಂಬರಿಯಲ್ಲೂ ಮುಂದುವರೆಯುತ್ತದೆ. ಗೋಪಾಲಪುರದ ಗೌಡನ ಮೇಲೆ ಮುದ್ದಣ್ಣನು ದಾಳಿ ನಡೆಸುತ್ತಾನೆ. ಆಗ ಗೌಡನು ಅವನನ್ನು ಎದುರಿಸಲು ಮುಂದಾಗುತ್ತಾನೆ. "ದಳವಾಯಿಗಳೇ – ಸ್ನೇಹಿತರಂತೆ ಬಂದವರನ್ನು ಅಪ್ಪಳಿಸುವ ವಿದ್ಯೆ ನಿಮಗೆ ರಕ್ತ ಗತವಾಗಿದೆ. ಪೌರುಷವಿದ್ದರೆ ಕತ್ತಿ ಹಿಡಿದು ಬನ್ನಿ" ಎಂದ, ಬಿಸಿಲಿನಲ್ಲಿ ಹೊಳೆಯುತ್ತಿದ್ದ ಕುಡುಗೋಲನ್ನು ಝಳಪಿಸುತ್ತ, "ನಿಮ್ಮಂಥ ಕುನ್ನಿಗಳ ಮೇಲೆ ಕೈ ಎತ್ತುವಷ್ಟು ಹೀನಸ್ಥಿತಿಗೆ ನಮ್ಮ ಕತ್ತಿ ಇನ್ನೂ ಇಳಿದಿಲ್ಲ ಗೌಡರೇ. ಆ ಒಣ ಪೌರುಷ ಬಿಡಿ" ಮುದ್ದಣ್ಣ ಹೇಳಿದ "ನಿಜ, ನಿಜ, ನಿಶ್ಯಸ್ತ್ರರಾಗಿದ್ದವರನ್ನು ಕೊಂದೆ ನಿಮಗೆ ಅಭ್ಯಾಸ" ಎಂದ ಗೌಡ, ಮುದ್ದಣ್ಣನ ಮಾತನ್ನು ಮುದ್ದಣ್ಣನ ಮುಖಕ್ಕೇ ಅಪ್ಪಳಿಸುತ್ತ, "ಹಿಡಿಯಿರಿ ಅವನನ್ನು" ಎಂದು ರೋಷಾಭೀಷಣನಾದ ಮುದ್ದಣ್ಣ. ಆ ಮಾತನ್ನು ಕೇಳಿದ ಸೈನಿಕರು ಗೌಡನ ಮೇಲೆ ಕವಿದರು. ಗೌಡ ತನ್ನ ಸುತ್ತಮುತ್ತಲೂ ಕುಡುಗೋಲನ್ನೇ ತಿರುಗಿಸುತ್ತಾ ತನ್ನನ್ನು ರಕ್ಷಿಸಿಕೊಳ್ಳತೊಡಗಿದ. ಹತ್ತಾರು ಜನ ಸೈನಿಕರ ಮಧ್ಯೆ ಗೌಡ ಬಹಳ ಹೊತ್ತು ಕಾದಾಡಲಾಗಲಿಲ್ಲ. ನಾಲ್ಕೇ ನಿಮಿಷವೆನ್ನುವುದರೊಳಗಾಗಿ, ನಾಲ್ಕಾರು ಭಲ್ಲೆಗಳು ಅವನ ಬೆನ್ನಲ್ಲಿ ಹೊಕ್ಕು ಹೃದಯದಲ್ಲಿ ಹೊರಬಂದವು. ಮೈಯ ಅಂಗಾಂಗಳಿಂದಲೂ ನೆತ್ತರುಗಾರುತ್ತ ಗೌಡ ನೆಲಕ್ಕುರುಳಿದ – ಹದ್ದು ಹೊಡೆದ ಹಕ್ಕಿಯಂತೆ"[೪೫] ಎಂದು ಗೋಪಾಲಪುರದ ಗೌಡ ಮತ್ತು ಮುದ್ದಣ್ಣನ ಸಂಘರ್ಷಾತ್ಮಕ ಕಥೆಯನ್ನು ತ.ರಾ.ಸು. ಅವರು ಚಿತ್ರಿಸಿದ ರೀತಿ ವಿಶಿಷ್ಟವಾಗಿದೆ.

ಹಾಗೆಯೇ, ಮುದ್ದಣ್ಣನ ಅಪ್ಪಣೆಯಂತೆ, ರಾಜಾಜ್ಞೆಯನ್ನು ಧಿಕ್ಕರಿಸಿ ಹಳ್ಳಿಗಳ ಗೌಡರನ್ನು ಸೆರೆ ಹಿಡಿಯಲು ನೇಮಿತವಾದ ಸೇನೆಯ ತುಕಡಿಗಳು ಹಳ್ಳಿಗಳತ್ತ ಹೊರಟವು. "ಗಾಳಿಯ ಮರಿಯಂತೆ ಧಾವಿಸುತ್ತ ಬರುವ ಕುದುರೆಗಳ ಸದ್ದಿಗೆ ದುರ್ಗದ ನೆಲೆ ನಡುಗಿತು. ಒಂದೊಂದಾಗಿ ಕೋಟೆಯ ಬಾಗಿಲನ್ನು ದಾಟಿದ ಸೈನಿಕರ ತುಕಡಿಗಳನ್ನು ನೋಡಿ, ಅವು ಯಾವ ಉದ್ದೇಶಕ್ಕಾಗಿ ತೆರಳುತ್ತಿವೆ ಎಂಬುದನ್ನರಿತ ದುರ್ಗದ ನಾಗರಿಕರು, ಮುಂದಾಗಲಿರುವ ಭೀಭತ್ಸವನ್ನು ನೆನೆದು ನಡುಗಿದರು."[೪೬] ಎಂದು ತ.ರಾ.ಸು. ಅವರು ಮುದ್ದಣ್ಣನ ಸರ್ವಾಧಿಕಾರದೊಂದಿಗೆ ಅವನಲ್ಲಿನ ರಕ್ತಪಿಪಾಸತನವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುವುದು ದುರ್ಗದ ಸರಣಿ ಕಾದಂಬರಿಗಳಲ್ಲಿ ಕಾಣಸಿಗುವ ಸಾಮಾನ್ಯ ಸಂಗತಿಯಂತೆ ಕಂಡಿದೆ. ಆದರೆ ಎಲ್ಲದಕ್ಕೂ ಅಂತ್ಯವಿರುವಂತೆ, ಮುದ್ದಣ್ಣನ ಅಂತ್ಯವು ಗಿರಿಜೆಯಿಂದ ಆಗುತ್ತದೆ.

ಹರಪನಹಳ್ಳಿಯವರು ಕೆಂಚಯ್ಯ, ರಂಗಪ್ಪನಾಯಕ ಮತ್ತು ಹೊಳಲ್ಕೆರೆಯ ಗೌಡನ ಸಹಾಯವನ್ನು ನಂದಿ ದುರ್ಗದ ಮೇಲೆ ಯುದ್ಧವನ್ನು ಸಾರುವ ಚಿತ್ರಣ 'ಹೊಸಹಗಲು' ಕಾದಂಬರಿಯಲ್ಲಿ ಕಂಡು ಬರುತ್ತದೆ. ಈ ಒಂದು ಯುದ್ಧದಲ್ಲಿ ಬೊಮ್ಮಣ್ಣನ ವೀರೋಚಿತ

ಹೋರಾಟದಿಂದ ದುರ್ಗಕ್ಕೆ ಜಯಲಭಿಸುತ್ತದೆ. ಇದರ ವರ್ಣನೆಯನ್ನು ತ.ರಾ.ಸು. ಅವರು ಚಿತ್ರಿಸುವ ರೀತಿಯನ್ನು ನೋಡಿ, "ಎಲ್ಲಾ ಗುಡ್ಡದಲ್ಲೆ ಅಲ್ಲಲ್ಲಿ ಇದ್ದಾರೆ, ಹೊರಡುವ ಸೂಚನೆ ಕೊಟ್ಟ ಕೂಡಲೇ ಎಲ್ಲರೂ ಗುಡ್ಡದ ಕೆಳಗೆ ಕಲೆಯಲು ಸಿದ್ಧತೆಯಾಗಿದೆ. ಬಹುಶ: ಈಗ ಅವರೆಲ್ಲಾ ತಮ್ಮ ತಮ್ಮ ಶಸ್ತ್ರಗಳನ್ನು ಸಿದ್ಧತೆ ಮಾಡಿಕೊಳ್ಳುತ್ತಿರಬಹುದು" ಎಂದು ಉತ್ತ ಕೊಟ್ಟ ಕೆಂಚಯ್ಯ. ಸ್ವಲ್ಪ ಹೊತ್ತು ಅವರೊಂದಿಗೆ ದಾಳಿಯ ವಿಷಯದ ವಿವರಗಳನ್ನು ಚರ್ಚಿಸುತ್ತಿದ್ದು ಬಳಿಕ ಕೆಂಚಯ್ಯ, ಎದ್ದು ನಿಂತ. "ಇನ್ನು ಹೊರಡೋಣ' ಎಂದು ಹೇಳಿ ಸೊಂಟದಲ್ಲಿ ಜೋತಾಡುತ್ತಿದ್ದ ಕೊಂಬನ್ನು ಎತ್ತಿ ಊದಿದ. ಕೊಂಬಿನ ಸದ್ದು ಕೇಳುತ್ತಿದ್ದ ಹಾಗೇ ನಿಶ್ಯಬ್ದವಾಗಿದ್ದ ಗುಡ್ಡ, ಕೆರಳಿದ ಜೇನು ಹುಟ್ಟಿನಂತೆ ಬಗೆಬಗೆಯ ಶಬ್ದದ ಬೀಡಾಯಿತು. ಗುಡ್ಡದ ಬಂಡೆಗಳು ಹಡೆದಂತೆ, ಬಂಡೆ ಬಂಡೆಗಳ ಮರೆಯಿಂದಲೂ ಜನ ಕಾಣಿಸಿಕೊಂಡರು. ಸ್ವಲ್ಪ ಹೊತ್ತಿನಲ್ಲೇ ಸುಮಾರು ಒಂದು ಸಾವಿರದಷ್ಟು ಜನ ಕಲಿಯಿತು. ಗುಡ್ಡ ಇಳಿಜಾರಿನಲ್ಲಿ ಆ ಗುಂಪಿನಲ್ಲಿ ಸುಮಾರು ಒಂದು ನೂರು ಜನರಷ್ಟು ಅಶ್ವಾರೋಹಿಗಳು. ಕೆಂಚಯ್ಯ ಪ್ರಯಾಣ ಸನ್ನದ್ಧವಾಗಿ ನಿಂತ ಸೇನೆಯನ್ನು ನೋಡಿ, "ಇನ್ನು ಸೇನೆ ಮುಂದು ನಡೆಯಲಿ" ಎಂದು ಅಪ್ಪಣೆ ಮಾಡಿದ. ಅವರೊಂದಿಗೆ ಕುದುರೆಯನ್ನೇರಿದ ಗೌಡ, ಬೊಮ್ಮಣ್ಣನ ಕಡೆ ತಿರುಗಿ "ಆಗಬಹುದೇ?" ಎಂದು ಬೊಮ್ಮಣ್ಣ ಸೈನಿಕರ ನಡುವೆ ಹೋಗಿ ತನ್ನ ಕಡೆಯ ಜನರ ಮುಖ್ಯಸ್ಥನನ್ನು ಕಂಡು, "ಎಲ್ಲ ಸಿದ್ಧರಾಗಿದೀರಾ?" ಎಂದು ವಿಚಾರಿಸಿ, ಅವರು ಸಿದ್ಧವಾಗಿರುವುದನ್ನು ಅರಿತು ಬಂದು ರಂಗಪ್ಪನಾಯಕನ ಪಕ್ಕದಲ್ಲಿ ಕುದುರೆಯನ್ನು ನಿಲ್ಲಿಸಿ, ಒರೆಯಲ್ಲಿದ್ದ ಕತ್ತಿಯನ್ನು ಹಿಡಿದು ಮೇಲೆತ್ತಿ "ಜೈ ಏಕನಾಥೇಶ್ವರಿ!" ಎಂದು ಕೂಗಿದ, ಕೇಳುವವರ ಎದೆಯ ರಕ್ತ ಹೆಪ್ಪುಗಟ್ಟುವಂಥ ಭಯಂಕರ ಧ್ವನಿಯಲ್ಲಿ ಆತನ ಕೂಗೂ ಮುಗಿಯುತ್ತಿದ್ದಂತೆಯೇ ಮೇಲೆತ್ತಿದ್ದ ಕತ್ತಿ ಕೆಳಗಿಳಿದು, ಪಕ್ಕದಲ್ಲೇ ನಿಂತ ರಂಗಪ್ಪ ನಾಯಕನ ಕತ್ತನ್ನು ಹಾರಿಸಿತು ಆತನಿಗೆ ಚೀರುವುದಕ್ಕೂ, ಅವಕಾಶ ಕೊಡದೆ."[೪೭] ಹೀಗೆ ದುರ್ಗದ ಸೇನೆ ಉಪಾಯದಿಂದ ಜಯಸಾಧಿಸಿ, ಜಯಘೋಷ ಹಾಕುತ್ತಾ ದುರ್ಗದ ಕಡೆಗೆ ಹೊರಡುತ್ತದೆ.

ಮರಾಠರ ದಾಳಿಯಿಂದ ಸೀಯರದ ಸೀಮೆಯನ್ನು ರಕ್ಷಿಸುವ ಮತ್ತು ಮರಾಠರ ಸೇನೆಯನ್ನು ಮಾರ್ಗ ಮಧ್ಯದಲ್ಲೇ ಮಟ್ಟ ಹಾಕುವ ಸಲುವಾಗಿ, ತನ್ನ ಪ್ರಬಲ ಪಡೆಗಳೊಂದಿಗೆ ಬಂದ ಸೀರ್ಯದ ದಿವಾನ್, ಫೌಜುದಾರ ಖಾಸಿಂಖಾನ್‌ನು ಹಿರಿಯೂರಿನಿಂದ ರಾಯದುರ್ಗಕ್ಕೆ ಹೋಗುವ ರಾಜಮಾರ್ಗದಲ್ಲಿದ್ದ ತಳಕಿನ ಕೋಟೆಯಲ್ಲಿ ತನ್ನ ಪಾಳಯವನ್ನು ಹೂಡುವ ಯುದ್ಧದ ಪ್ರಸಂಗವು 'ವಿಜಯೋತ್ಸವ' ಕಾದಂಬರಿಯಲ್ಲಿ ಬರುತ್ತದೆ. ಈ ಸಂದರ್ಭದಲ್ಲಿ ಸೀರ್ಯಾದವರು ಮತ್ತು ಮರಾಠರ ನಡುವೆ ಹೋರಾಟ ನಡೆಯುತ್ತದೆ.

ಸೀರ್ಯದ ಹಮೀದುಲ್ಲಾ ಬೇಗನ ಪಡೆ ಆ ಏರನ್ನು ಹತ್ತಿ, ಇಳುವನ್ನು ನಿಧಾನವಾಗಿ ಇಳಿಯುತ್ತಿರುವಾಗ ಬದಿಯ ಈಚಲ ವನದಿಂದ ನಾಲ್ಕಾರು ಕೇಕೆಗಳ ಸದ್ದು ಕೇಳಿ ಬಂದು ಅವನು ಇದೇನು ಎಂದು ಅಚ್ಚರಿಪಡುತ್ತಿರುವಾಗಲೇ ರಸ್ತೆಯ ನಾಲ್ಕು ಬದಿಯಿಂದ 'ಹರ ಹರ ಮಹಾದೇವ' ಎಂದು ರಣಕೇಕೆಯನ್ನು ಹಾಕುತ್ತಾ ನುಗ್ಗಿದ ಮರಾಠರ ಪಡೆಯು ಅವನ ಮೇಲೆ ದಾಳಿಯನ್ನು ಮಾಡುತ್ತದೆ. ಸೀರ್ಯದವರು ಮರಾಠರ ವಿರುದ್ಧ ಬಲವಾಗಿ ಸೆಣಸಲು ಪ್ರಯತ್ನಿಸಿದರೂ ಅವರಿಗಿಂತ ಬಹು ಪ್ರಬಲರಾದ ಮರಾಠರ ವಿರುದ್ಧ ಸೋಲಬೇಕಾಗುತ್ತದೆ. ಯಾರನ್ನೂ ಸೆರೆಹಿಡಿಯುವ ಉದ್ದೇಶವಿಲ್ಲದ ಸಂತೋಜಿ ಶರಣಾಗತರಾದವರನ್ನು ಕಟ್ಟಿ ಹಾಕುವಂತೆ ಅಪ್ಪಣೆ ಮಾಡುತ್ತಾನೆ.

ಮರಾಠರ ಸಂತೋಜಿ ಘೋರ್ಪಡೆಯ ದಂಡಯಾತ್ರೆಯು ದುರದ್ದೇಶದಿಂದ ಕೂಡಿದ್ದಾಗಿರುತ್ತದೆ. ಆ ಕಾರಣದಿಂದಾಗಿಯೇ ಅವನು ಸೀರ್ಯಾದವರ ಮೇಲೆ ದಾಳಿ ಮಾಡಿರುತ್ತಾನೆ. ಇಂತಹ ದಾಳಿಗಳಿಗೆ ಸಂತೋಜಿ ಘೋರ್ಪಡೆಯಲ್ಲಿರುವ ಲೂಟಿಪರ ಗುಣಗಳೇ ಕಾರಣವಾಗಿರುತ್ತವೆ. "ಖಾಸಿಂಖಾನ್ ಊಹಿಸಿದಂತೆ ಸಂತೋಜಿ ಘೋರ್ಪಡೆಯ ದಾಳಿಯ ಉದ್ದೇಶ, ಆ ಭಾಗದಲ್ಲಿ ರಾಜ್ಯ ಸ್ಥಾಪನೆ ಮಾಡುವುದಾಗಲಿ, ಆ ಪ್ರಾಂತದಲ್ಲಿ ಮೊಗಲರ ಅಧಿಕಾರಶಾಹಿಯನ್ನು ಮುರಿಯುವುದಾಗಲಿ ಆಗಿರಲಿಲ್ಲ. ಹಲವಾರು ಪಾಳೆಯಪಟ್ಟುಗಳ ನಡುವೆ, ಹರಿದು ಹಂಚಿ ಹೋಗಿ ಪರಸ್ಪರ ಕಲಹದಿಂದ ದುರ್ಬಲವಾಗಿದ್ದ ಈ ಸೀಮೆಯನ್ನು ತನ್ನ ಅತಿ ವೇಗವಾಗಿ ಚಲಿಸಬಲ್ಲ ಸೇನೆಯ ಸಹಾಯದಿಂದ ಲೂಟಿ ಮಾಡುವುದು, ದುರ್ಬಲರಾದವರನ್ನು ವಿನಾಶ ಮಾಡುವುದು, ಬಲಶಾಲಿಗಳಾದವರೊಂದಿಗೆ ತಾನು ಹಿಂದೂ ಮತ ರಕ್ಷಕ ಎಂದು ಸೋಗು ಹಾಕಿ, ಅವರ ಸಹಾಯದಿಂದ ಮೊಗಲರ ಸೇನೆ ಲೂಟಿ ಮಾಡುವುದು, ಅದು ಸಾಧ್ಯವಿಲ್ಲದಿದ್ದಾಗ ಅಲ್ಲಿಯ ಸ್ಥಳೀಯ ರಾಜಕೀಯದಲ್ಲಿ ತಲೆಹಾಕಿ, ಅವರ ಪರಸ್ಪರ ವೈದಮ್ಯವನ್ನು ತನ್ನ ಲಾಭಕ್ಕೆ ಬಳಸಿಕೊಳ್ಳುವುದು ಇದು ಸಂತೋಜಿ ಘೋರ್ಪಡೆಯ ದಂಡಯಾತ್ರೆಯ ಮೂಲಭೂತ ಉದ್ದೇಶ"[೮೮] ಎಂದು ಚಿತ್ರಿಸುವ ತ.ರಾ.ಸು. ಅವರು ಮರಾಠರ ರಾಕ್ಷಸಿ ಧನದ ಮೋಹ ಹೇಗಿತ್ತೆಂಬುದನ್ನು ವಿವರಿಸುತ್ತಾರೆ. ಈ ಕಾರಣಕ್ಕಾಗಿಯೇ ಮರಾಠರು ಅನ್ಯರ ಮೇಲೆ ದಾಳಿ ನಡೆಸುತ್ತಿದ್ದರೆಂದು ಸತ್ಯಾಂಶ ಇಲ್ಲಿ ತಿಳಿಯುತ್ತದೆ. ಆದರೆ ಇಂತಹ ಲೂಟಿಕೋರರನ್ನು ಮಟ್ಟಹಾಕುವುದಕ್ಕಾಗಿಯೇ ದುರ್ಗದ ಸೇನೆಯು ಪಣ ತೊಡುತ್ತದೆ.

ಸಂತೋಜಿ ಘೋರ್ಪಡೆಯ ಭಯದಿಂದ ಸೀರ್ಯಾದ ಖಾಸಿಂಖಾನನು ತನ್ನ ಬೊಕ್ಕಸದ ಹಣವನ್ನು ತಳಕಿನಿಂದ, ದೊಡ್ಡೇರಿಯ ಕೋಟೆ ಕಡೆಗೆ ಸಾಗಿಸುತ್ತಿರುವಾಗಲೇ ಮಿಂಚಿನ ವೇಶದಿಂದ ಬಂದ ಸಂತೋಜಿಯ ಸೇನೆ, ಖಾಸಿಂಖಾನನ ಸೇನೆಯೊಂದಿಗೇ ದೊಡ್ಡೇರಿಯ ಕೋಟೆಯನ್ನು ಪ್ರವೇಶ ಮಾಡುತ್ತದೆ. "ಈ ಎಲ್ಲ ಗದ್ದಲದಲ್ಲಿಯೂ ಖಾಸಿಂಖಾನ್

ತನ್ನ ಅಳವಿನೊಳಗೆ ಸಿಕ್ಕುವುದನ್ನೇ ಕಾಯುತ್ತಿದ್ದ ಸಂತೋಜಿ ಘೋರ್ಪಡೆ, ಬಹು ಚತುರತೆಯಿಂದ ಅವನನ್ನು ರಕ್ಷಕರಿಂದ ಬೇರ್ಪಡಿಸಿ, ಅವನು ಒಂಟಿಯಾದ ಕ್ಷಣವನ್ನೇ ಸಾಧಿಸಿ, ಮಿಂಚಿನ ವೇಗದಿಂದ ತನ್ನ ಕುದುರೆಯನ್ನು ನುಗ್ಗಿಸಿ, ಹಿರಿದ ಕತ್ತಿಯನ್ನು ಖಾಸಿಂಖಾನನ ಎದೆಯೊಳಗೆ ನುಗಿಸಿದ. 'ಯಾ ಅಲ್ಲಾ' ಎಂದು ಖಾಸಿಂಖಾನ್ ಕೆಳಗುರುಳುತ್ತಿದ್ದ ಹಾಗೇ ಸಂತೋಜಿ, ಅವನ ಕತ್ತನ್ನು ಕತ್ತರಿಸಿ, ತನ್ನ ಕತ್ತಿಯ ತುದಿಗೆ ಸಿಕ್ಕಿಸಿ ಅದು ಎಲ್ಲರಿಗೂ ಕಾಣುವಂತೆ ಮೇಲಕ್ಕೆ ಎತ್ತಿ ಹಿಡಿದು, 'ಹರ ಹರ ಮಹಾದೇವ' ಎಂದು ಜಯಘೋಷ ಮಾಡಿದ"[೪೯] ಅಷ್ಟೇ ಅಲ್ಲ, ಕಂಡ ಕಂಡವರನ್ನು ತನ್ನ ಸೇನೆಗೆ ಕೊಲ್ಲಲು, ಸಿಕ್ಕಿದ್ದನ್ನು ದೋಚಿ ಮನೆಗಳಿಗೆ ಬೆಂಕಿ ಹಚ್ಚಲು ಆಜ್ಞೆ ಮಾಡುತ್ತಾನೆ. ಈ ವೇಳೆಗಾಗಲೇ ದುರ್ಗದ ಸೇನೆ ದೊಡ್ಡೇರಿ ಕೋಟೆಯನ್ನು ಸುತ್ತವರೆಯುತ್ತದೆ. ದುರ್ಗದ ಸೇನೆಯಲ್ಲಿದ್ದ ಜಾನ್‌ನು, ಸಂತೋಜಿ ಘೋರ್ಪಡೆಯೊಂದಿಗೆ ರಣೋತ್ಸಾಹದಿಂದ ಹೋರಾಡಿ, ತನ್ನ ಖಡ್ಗದಿಂದ ಘೋರ್ಪಡೆಯನ್ನು ಹತ್ಯೆ ಮಾಡುತ್ತಾನೆ. ಮುಂದೆ ಸಂತೋಜಿ ಘೋರ್ಪಡೆಯ ನೆರವಿಗೆ ಬಂದಿದ ನಿಂಬಾಳ್ಕರ್ ಸೇನೆಯನ್ನು ದುರ್ಗದವರು ಸದೆಬಡಿಯುತ್ತಾರೆ. ನಿಂಬಾಳ್ಕರ್ ಶರಣಾಗತನಾಗುತ್ತಾನೆ. ಈ ಒಂದು 'ವಿಜಯೋತ್ಸವ'ದೊಂದಿಗೆ ದುರ್ಗದ ಸೇನೆ ನಗರದತ್ತ ಪಯಣ ಬೆಳೆಸುತ್ತದೆ.

ಸೀಯರ್ಾದವರ ಪರವಾಗಿ ಬೇಹುಗಾರಿಕೆ ನಡೆಸಲು ವೇಷಮರೆಸಿಕೊಂಡು, ಸಹಜಾನಂದಸ್ವಾಮಿಗಳ ವೇಷದಲ್ಲಿ ದುರ್ಗವನ್ನು ಪ್ರವೇಶ ಮಾಡಿದ್ದ ವಕೀಲ ವೆಂಕಪ್ಪಯ್ಯನನ್ನು ದುರ್ಗದ ಸರ್ಜಾನಾಯಕ ಕೊಲ್ಲುವ ಬೀಭತ್ಸ ಚಿತ್ರಣವನ್ನು 'ಕಸ್ತೂರಿ ಕಂಕಣ'ದಲ್ಲಿ ಕಾಣುತ್ತೇವೆ. "ಸರ್ಜಾನಾಯಕ, ಅರಮನೆಯಲ್ಲಿ ತನ್ನ ಕೊಠಡಿಯನ್ನು ಸೇರುವ ವೇಳೆ, ಆ ಕೊಠಡಿಯ ಬಾಗಿಲಲ್ಲೇ ಕಾದಿದ್ದ, ಕೃಷ್ಣಪ್ಪನಾಯಕನ ಬೇಹುಗಾವಲು ಕಾಯುತ್ತಿದ್ದ ಪಡೆಯ ಮುಖ್ಯಸ್ಥ ಅವನನ್ನು ಕಂಡು ಕೈಮುಗಿದ. "ಏನು ವಿಷಯ – ಬೇಗ ಹೇಳು?" ಎಂದು ಅಬ್ಬರಿಸಿ ಕೇಳಿದ ಸರ್ಜಾನಾಯಕ. "ಅಳಿಯ ಕೃಷ್ಣಪ್ಪ ನಾಯಕರೊಂದಿಗೆ ಬಂದಿರುವ ಸೀಯರ್ಾದ ಜನ ಅವರ ಅಂಗರಕ್ಷಕರಲ್ಲ, ದುರ್ಗವನ್ನು ಹಾಳು ಗೆಡವಲು ಬಂದ ಧೂಮಕೇತುಗಳು."[೫೦] ಎಂದು ನುಡಿದಾಗ, ಸರ್ಜಾನಾಯಕನು ಕೃಷ್ಣಪ್ಪನಾಯಕನು ತಂಗಿದ್ದ ಮನೆಯ ಕಡೆಗೆ ಗಂಡುಗೊಡಲಿಯನ್ನು ಹೆಗಲಿಗೇರಿಸಿ, ತನ್ನ ಖಾಸಾ ಪಡೆಯೊಂದಿಗೆ ಹೊರಡುತ್ತಾನೆ. ಆಗ ಕೃಷ್ಣಪ್ಪನಾಯಕನ ಮನೆಬಾಗಿಲನ್ನು ಕಾಯುವ ಆಳು 'ಇದೇನಿದು ಹೀಗೇಕೆ ನುಗ್ಗುತ್ತಿದ್ದೀರಿ'? ಎಂದು ಪ್ರಶ್ನಿಸಿದಾಗ, "ಆದರೆ ಅವನು ಮಾತು ಮುಗಿಸುವ ಮುನ್ನವೇ ಸರ್ಜಾನಾಯಕ ಅವನ ಕತ್ತನ್ನು ಕತ್ತರಿಸಿ, ಒಳ ನುಗ್ಗಿದ. ಅವನ ಬೆನ್ನಹಿಂದೆಯೇ ಕುರಿಮಂದೆಯ ಮೇಲೆ ಬೀಳುವ ತೋಳದ ಹಿಂಡಿನಂತೆ ನುಗ್ಗಿತು. ಆತನ ಖಾಸಾ ಭಟಸೇನೆ ಎದುರಾದವರನ್ನೆಲ್ಲಾ ನಿರ್ದಾಕ್ಷಿಣ್ಯವಾಗಿ ತುಂಡರಿಸುತ್ತಾ, ತನ್ನ ಪಡೆಯವರು ಉಳಿದವರನ್ನು ಕಡಿದೊಟ್ಟುತ್ತಿರುವಾಗ,

ಸರ್ಜಾನಾಯಕ, ನೇರವಾಗಿ ಪೂಜಾ ಮಂದಿರಕ್ಕೆ ನುಗ್ಗಿದ. ರಕ್ತ ತೊಟ್ಟಿಕ್ಕುತ್ತಿದ್ದ ಗಂಡುಗೊಡಲಿಯನ್ನು ಹಿಡಿದು ಹಾಗೆ ನುಗ್ಗಿದಾಗ ಅವನ ಕಣ್ಣಿಗೆ ಮೊದಲು ಕಂಡದ್ದು ಸಹಜಾನಂದಸ್ವಾಮಿ. ಆತನನ್ನು ನೋಡುತ್ತಿದ್ದ ಹಾಗೆ ಸರ್ಜಾನಾಯಕನಲ್ಲಿ ಕ್ರೋಧೋನ್ಮಾದ ಉಕ್ಕಿಬಂದು "ನನ್ನ ವಂಶವನ್ನು ನಿರ್ವಂಶವಾಗಿ ಮಾಡಬೇಕೆಂದಿದ್ದಿಯಾ, ವೆಂಕಪ್ಪಯ್ಯಾ ಅನುಭವಿಸು ಅದರ ಫಲವನ್ನು" ಎಂದು ಉನ್ಮತ್ತ ಆಕ್ರೋಶದಿಂದ ಗಂಡುಗೊಡಲಿಯನ್ನು ಹಿಡಿದು ಆತನನ್ನು ಹೊಡೆದ. ಆ ಒಂದು ಏಟಿಗೆ ಸಹಜಾನಂದಸ್ವಾಮಿಗಳು ಎರಡು ತುಂಡಾಗಿ ರಕ್ತ ಕಾರುತ್ತಾ ಉರುಳಿದರು. ಅದನ್ನು ಕಂಡು "ಭಾವಾ ... ಭಾವಾ ... ಬ್ರಹ್ಮಹತ್ಯೆ" – ಎಂದು ಕೃಷ್ಣಪ್ಪನಾಯಕ, ಸರ್ಜಾನಾಯಕನ ಕೈ ತಡೆಯಲು ನುಗ್ಗಿದ. "ಬ್ರಹ್ಮಹತ್ಯೆಯೇ .... ಅದರೊಂದಿಗೆ ಬರಬೇಕಾದ ಪಾಪವೆಲ್ಲವೂ ನನಗೆ ಬರಲಿ. ನಾನು ನರಕದ ಹುಳುವಾದರೂ ದುರ್ಗ ಉಳಿಯಲಿ" ಎಂದು ಹೇಳುತ್ತಲೇ ತನ್ನ ಕೈ ತಡೆಯಬಂದ ಕೃಷ್ಣಪ್ಪನಾಯಕನ ಮೇಲೆ ಗಂಡುಗೊಡಲಿಯನ್ನ ಪ್ರಯೋಗಿಸಿದ. ಆ ಏಟಿಗೆ ಸಿಕ್ಕ ಕೃಷ್ಣಪ್ಪನಾಯಕನ ತಲೆ ಕತ್ತರಿಸಿ, ಅಷ್ಟುದೂರ ಹಾರಿ ನೆತ್ತರುಗಾರುತ್ತಾ ಉರುಳಿತು. 'ಇದೇ ... ಇದೇ... ದುರ್ಗದ ವೈರಿಗಳೆಲ್ಲರಿಗೂ ಇದೇ ಗತಿ' ಎಂದು ರಕ್ತ ಸೋರುತ್ತಿದ್ದ ಗಂಡುಗೊಡಲಿಯನ್ನು ಹಿಡಿದು ಶತ್ರುಗಳನ್ನು ಹುಡುಕಿಕೊಂಡು ಹೊರಟ ಸರ್ಜಾನಾಯಕ, ಅರಿರಕ್ತಪಿಪಾಸಿಯಾಗಿ"[೫೧] ಎಂಬಂತೆ ರಾಜ್ಯ ದ್ರೋಹಿಗಳನ್ನು ಕತ್ತರಿಸಿ ಹಾಕುವ ಭೀಭತ್ಸ ಚಿತ್ರಣವನ್ನು ಸರ್ಜಾನಾಯಕ ಸ್ವಭಾವದೊಂದಿಗೆ ಕೊಡುತ್ತಾರೆ. ಇತ್ತ ಹಿರಿಯೂರಿನಲ್ಲಿ "ಯಾವ ಸುಳಿವೂ ಇಲ್ಲದೆ, ಇರುಳ ಕತ್ತಲಿನಲ್ಲಿ ಆದ ಪ್ರಚಂಡ ದಾಳಿಯ ಹೊಡೆತಕ್ಕೆ ಸಿಕ್ಕು, ಹಿರಿಯೂರನ್ನು ಮುತ್ತಿದ ರಂಗಪ್ಪನಾಯಕನ ಸೇನೆ ತತ್ತರಿಸಿತು. ಆ ಸೇನೆಯ ಮೇಲೆ ಬೇಡಪಡೆ, ಕಣ್ಣಿಗೆ ಇದಿರಾದವರನ್ನು ಕತ್ತರಿಸುತ್ತಾ, ಕೈಗೆ ಸಿಕ್ಕ ಪಂಜನ್ನು ಹಿಡಿದು ಕಂಡದ್ದಕ್ಕೆ ಬೆಂಕಿ ಹಚ್ಚುತ್ತಾ, ಪಿಶಾಚ ಪಡೆಯಂತೆ ವಿಜೃಂಭಿಸಿತ್ತು. ಹಗಲು ಹರಿದಾಗ, ಹೆಸರು ಹೇಳಲೂ ಶತ್ರು ಸೈನಿಕನೊಬ್ಬನೂ ಉಳಿದಿರಲಿಲ್ಲ. ಜೀವಭಯದಿಂದ ದುರ್ಗದ ಸೈನಿಕರ ಕೈಗೆ ಸಿಕ್ಕದ ಹಾಗೆ ಓಡಿಹೋದ ಒಬ್ಬಿಬ್ಬರು ವಿನಾ. ಹಾಗೆ ಅಳಿದ ಶತ್ರು ರಕ್ತದಲ್ಲಿ ಮಿಂದೇ, ಕಸ್ತೂರಿರಂಗಪ್ಪನಾಯಕರು ಹಿರಿಯೂರನ್ನು ಪ್ರವೇಶಿಸಿ, ಅರಮನೆಯತ್ತ ನಡೆದರು"[೫೨] ಆ ವೇಳೆಗೆ ದುರ್ಗದ ಸೇನೆಯ ಸಹಾಯಕ್ಕೆ ಸ್ವಾಗತಕೋರಲು ಕೆಂಚಣ್ಣ ನಾಯಕ ಅರಮನೆಯ ಬಾಗಿಲಲ್ಲೇ ಕಾದು ನಿಂತಿದ್ದನು.

'ದುರ್ಗಕ್ಕೀಗ ಗಂಡಸರ ದಿಕ್ಕಿಲ್ಲ, ಪಟ್ಟದ ಮೇಲೆ ಚೋಟುದ್ದ ಹುಡುಗ, ಆಡಳಿತ ಮಾಡೋಳು ಮುದುಕಿ' ಎಂದು ರಾಯದುರ್ಗದ ಜನ, ದುರ್ಗದ ಹಸುಗಳನ್ನು ಕದ್ದು ಯುದ್ಧಕ್ಕೆ ಕರೆಯುವದರೊಂದಿಗೆ 'ದುರ್ಗಾಸ್ತಮಾನ' ದಲ್ಲಿ ಯುದ್ಧದ ಸನ್ನಿವೇಶಗಳು ಪ್ರಾರಂಭವಾಗುತ್ತವೆ. "ಆಳುತ್ತಿರುವವರು ಹೆಂಗಸರು, ಪಟ್ಟದ ದೊರೆ ಹುಡುಗ" ಎಂದರಲ್ಲವೇ

ಆ ಹೇಡಿ ತರುಗಳ್ಳರು. ನಿಜ–ಇಂಥ ಹೊತ್ತಿನಲ್ಲಿ ಶತ್ರುಗಳ ಕೋಳಿಯ ಪುಕ್ಕಕ್ಕೆ ಗರುಡರೆಕ್ಕೆಯ ಬಲ ಬರುತ್ತದೆ. ಎಂಜಲು ನೆಕ್ಕುವ ನಾಯಿಗೆ ದೇವರೆಡೆಯಲ್ಲಿ ನಾಲಿಗೆ ಚಾಚಬೇಕು ಅನಿಸುತ್ತದೆ. 'ಇದು ನಿಮಗಲ್ಲ ನಮಗೆ ಸವಾಲು. ಈ ಬಾರಿಯ ರಣವೀಳ್ಯವನ್ನು ನಾವು ಯಾರಿಗೀ ಕೊಡುವುದಿಲ್ಲ. ನಾವೇ ತೆಗೆದುಕೊಂಡಿದ್ದೇವೆ. ನಮ್ಮ ಹಸು ಕದ್ದವರನ್ನು ಹಿಡಿದೆಳೆದು ತಂದು, ನಮ್ಮ ಅರಮನೆಯ ಗೋದಲಿಯಲ್ಲಿ ಕಟ್ಟದಿದ್ದರೆ ನಾವು ಗಂಡುಗಲಿ ಮದಕರಿ ನಾಯಕರ ಮಡದಿಯಲ್ಲ. ಹಸುಗಳನ್ನು ಕಟ್ಟುವುದೂ ಒಂದೇ, ಹೆಣ್ಣು ಮಕ್ಕಳ ಸೆರಗಿಗೆ ಕೈ ಹಾಕುವುದೂ ಒಂದೇ. ಇಂಥ ನೀಚ ಮಾತು ಕೇಳಿ, ನಾವು ಸೇನೆಯ ಹಿಂದೆ ಅರಮನೆಯಲ್ಲಿ ಕೂತರೆ ನಮ್ಮ ಕುಲಕ್ಕೇ ಕಳಂಕ. ಪ್ರಧಾನಿಗಳೆ, ದಳವಾಯಿಗಳೆ ಸೇನೆಗೆ ಸಿದ್ಧವಾಗಲು ಹೇಳಿ. ಇಂದೋ ನಾಳೆಯೋ ಮಹೂರ್ತ ಕೇಳಿ, ಕೂಚುಭೇರಿ ಹೊಡೆಯಿಸಿ"[೫೩] ಎಂದು ಓಬವ್ವ ನಾಗತಿ ಯುದ್ಧಕ್ಕೆ ಸಿದ್ಧಳಾಗುತ್ತಾಳೆ. ಇದರಿಂದ ದಳವಾಯ ಭರಮಣ್ಣ ಹಾಗೂ ಪ್ರಧಾನಿ ನರಸಪ್ಪಯ್ಯರಾದಿಯಾಗಿ ಆಶ್ಚರ್ಯವಾಗುತ್ತದೆ. "ರಾಯದುರ್ಗದ ಜನ ಇದೇನಾಯಿತೆಂದು ಅರ್ಥ ಮಾಡಿಕೊಳ್ಳುವುದರೊಳಗಾಗಿ ಮಿಂಚಿನ ವೇಗದಿಂದ ಮುನ್ನುಗ್ಗಿ, ಕಾರ್ಗಾಲದ ಸಿಡಿಲಿನಂತೆ ಭೋರ್ಗರೆದು, ಬಂಡೆ ಬಂಡೆಗಳಿಗೂ ಅರಿರುಂಡ ಮುಂಡಗಳ ಬಲಿಕೊಟ್ಟು, ಗಡಿಗ್ರಾಮಗಳಾದ ಕೋನಾಪುರ, ಕೊಡಗನೂರು ಗ್ರಾಮಗಳನ್ನು ಹಿಡಿದು ಹಗಲಾಗುವ ವೇಳೆಗೆ ರಾಯದುರ್ಗದ ಕೋಟೆಗೆ ಲಗ್ಗೆ ಹಾಕಿತು..... ಅಶ್ವಾರೋಹಿಯಾಗಿ, ಬಿಚ್ಚಿದ ಬಿಳಿಗೂದಲು ರಾಯದುರ್ಗದವರ ಪತನಕ್ಕಾಗಿ ಮೂಡಿದ ಧೂಮಕೇತುವಿನಂತೆ ಆಡುತ್ತಿರಲು, 'ಕಡಿ, ಬಡಿ, ಕೊಲ್ಲು' ಎಂದು ಕೂಗುತ್ತಾ, ಬೀಸಿದ ಕತ್ತಿಗೆ ಅಡ್ಡವಾದ ತಲೆ ಕೈಕಾಲುಗಳನ್ನು ಕತ್ತರಿಸುತ್ತಾ, ಉಟ್ಟ ಬಟ್ಟೆ, ಶತ್ರುರಕ್ತದಲ್ಲಿ ತೋಯ್ದು ರಣಗಾಳಿಯ ರಕ್ತಾಂಬರದಂತೆ ಕಂಡವರ ಎದೆ ನಡುಗಿಸುತ್ತಿರಲು ಮಹಿಷಾಸುರಮರ್ದಿನಿಯಂತೆ ಮುನ್ನುಗ್ಗಿದ ಓಬವ್ವ ನಾಗತಿಯನ್ನು ಕಂಡು ಮದಕರಿನಾಯಕನ ತೋಳುಗಳಲ್ಲೂ ಮಿಂಚು ಸಂಚರಿಸಿ, ಬಿರುಗಾಳಿಯಂತೆ ನುಗ್ಗುವ ಅಶ್ವವು ತನ್ನ ವೇಗಕ್ಕೆ ಸಾಲದೆಂಬಂತೆ ಕುದುರೆಯಿಂದ ಧುಮುಕಿ, ಕೈಯಲ್ಲಿ ಹಿಡಿದ ಎಂಟಲಗಿನ ಪರಿಘವನ್ನು ಚಕ್ರಾಕಾರವಾಗಿ ತಿರುಗಿಸಿ ಹೊಯ್ದು, ಕಡಿದು ಬಿದ್ದ ಶತ್ರು ಸೈನಿಕರನ್ನೇ ಮೆಟ್ಟಿಲಾಗಿಮಾಡಿಕೊಂಡು, ಬೆಟ್ಟದ ನಡುಭಾಗದಲ್ಲಿದ್ದ ರಾಯದುರ್ಗದ ನಾಯಕರ ಮನೆದೇವತೆಯಾದ ಪಟ್ಟದ ಎಲ್ಲಮ್ಮನ ಗುಡಿಯ ಮುಂದಿನ ಕಲ್ಲಾನೆಯನ್ನು ಏರಿ ನಿಂತು "ಎಳೆದು ತನ್ನೀರೋ, ರಾಯದುರ್ಗದ ಕುನ್ನಿ ಕೃಷ್ಣಪ್ಪನನ್ನು" ಎಂದು ಕೇಕೆ ಹಾಕಿದ."[೫೪]

ಹೀಗೆ ಅರಮನೆಯತ್ತ ನುಗ್ಗಿ ಬಂದ ದುರ್ಗದ ಸೇನೆಯನ್ನು ಕಂಡು ಕೃಷ್ಣಪ್ಪನಾಯಕ ಬೆದರಿ ರಾಣಿವಾಸದವರೊಂದಿಗೆ ಗುಪ್ತದಾರಿಯ ಮೂಲಕ ತಪ್ಪಿಸಿಕೊಳ್ಳುತ್ತಾನೆ. 'ತಂಬಿಗೆ ರಕ್ತಕ್ಕೆ ಹೇಸಿದ್ದ ಮದಕರಿನಾಯಕ ರಕ್ತಸ್ನಾನ ಮಾಡಿ, ರಣಕೇಕೆ ಹಾಕುತ್ತ, ಕತ್ತರಿಸಿದ

ಶತ್ರುತಲೆಗಳನ್ನು ಜುಟ್ಟು ಹಿಡಿದು ತೂಗಾಡಿಸುತ್ತ 'ನೀನು ಗಂಡು, ನಿನ್ನನ್ನು ಮಗ ಎಂದು ಕರೆದದ್ದು ಸಾರ್ಥಕವಾಯಿತು' ಎಂದು ಮದಕರಿನಾಯಕ ಓಬವ್ವ ನಾಗತಿಯಿಂದ ಹೊಗಳಿಸಿಕೊಳ್ಳುತ್ತಾನೆ. ಇಲ್ಲಿ ತ.ರಾ.ಸು. ಅವರು ಮದಕರಿನಾಯಕನ ವೀರೋಚಿತ ಬದುಕಿನ ಆರಂಭದ ಹಂತವನ್ನು ಪರಿಚಯಿಸಿಕೊಡುತ್ತಾರೆ. ರಾಯದುರ್ಗದ ಯುದ್ಧ ಮೂರು ದಿನ ನಡೆಯಿತು. ಆದರ ಹಬ್ಬ ಆರು ದಿನ ನಡೆಯಿತೆಂಬಂತೆ ತ.ರಾ.ಸು. ಯುದ್ಧದ ವಿವರಣೆಯನ್ನು ಕೊಡುತ್ತಾರೆ. ಅದರಲ್ಲೂ ಇದು ಮದಕರಿನಾಯಕ ಪಟ್ಟಕ್ಕೆ ಬಂದ ನಂತರ ನಡೆದ ಮೊದಲ ಯುದ್ಧವಾಗಿತ್ತಲ್ಲದೆ ಅದಕ್ಕೆ ಹೆಚ್ಚಿನ ಮಹತ್ವ ಬಂದಿತ್ತು.

ಹೈದರಾಲಿ ಮತ್ತು ದುರ್ಗದವರ ನಡುವೆ ನಡೆಯುವ ಯುದ್ಧಗಳು ವರ್ಣರಂಜಿತವಾಗಿವೆ. ದುರ್ಗದವರ ಏಳಿಗೆಯನ್ನು ಸಹಿಸಲಾರದ ಹೈದರಾಲಿಯು ಮದಕರಿನಾಯಕನ ವಿರುದ್ಧ ಕತ್ತಿ ಮಸೆಯುತ್ತಲೇ ಇರುತ್ತಾನೆ. ತಂತ್ರ-ಕುತಂತ್ರಗಳ ಮೂಲಕ ತನ್ನ ಹಗೆಯನ್ನು ಸಾಧಿಸುವುದು ಸಾಮಾನ್ಯ ಸಂಗತಿಯಾಗಿ ಕಾಣುತ್ತದೆ. ಕೆಲ ಸಂದರ್ಭಗಳಲ್ಲಿ ಒಪ್ಪಂದಗಳು ನಡೆಯುತ್ತವೆ. ಮತ್ತೆ ಮುರಿಯುತ್ತವೆ. ಯಾವುದೇ ಮಾರ್ಗದಿಂದಾದರೂ ದುರ್ಗದ ಕೋಟೆಯನ್ನು ವಶಪಡಿಸಿಕೊಳ್ಳಲೇಬೇಕೆಂಬ ಛಲವನ್ನು ಹೈದರಾಲಿ ಮೆರೆಯುತ್ತಾನೆ. ಆರಂಭದಲ್ಲಿ ನಡೆಯುವ ಯುದ್ಧಗಳಲ್ಲಿ ದುರ್ಗದವರ ಕೈ ಮೇಲಾಗುತ್ತದೆ. ಸಂಧಾನದ ಮಾತನಾಡುವ ಹೈದರಾಲಿಯು ಮದಕರಿ ನಾಯಕನನ್ನು ತನ್ನ ಆಸ್ಥಾನಕ್ಕೆ ಆಹ್ವಾನಿಸುತ್ತಾನೆ. ಆ ಸಮಯದಲ್ಲೇ ಮದಕರಿನಾಯಕನನ್ನು ಸೆರೆಹಿಡಿಯುವ ತಂತ್ರಗಳನ್ನು ರೂಪಿಸುತ್ತಾನೆ. ಹೈದರಾಲಿಯ ಈ ಗುಣವನ್ನರಿತ ಮದಕರಿಯು ಹಲವು ನೆಪಗಳನ್ನು ಒಡ್ಡಿ ಭೇಟಿಯನ್ನು ನಿರಾಕರಿಸುತ್ತಾನೆ.

ಕೊನೆಗೆ ತನ್ನ ಬಲವಾದ ಸೇನೆಯೊಂದಿಗೆ ಹೈದರಾಲಿಯು ದುರ್ಗದ ಮೇಲೆ ಯುದ್ಧವನ್ನು ಸಾರುತ್ತಾನೆ. 'ಮದಕರಿ ನಾಯಕನನ್ನು ಹಿಡಿಯಬೇಕು, ಜೀವಂತ ಹಿಡಿದು ತರಬೇಕು' ಎಂದು ಹೈದರಾಲಿಯು ತನ್ನವರಿಗೆ ಕೂಗಿ ಕೂಗಿ ಹೇಳುತ್ತಾನೆ. ಯಾವುದಕ್ಕೂ ಬಗ್ಗದ ಮದಕರಿನಾಯಕನು ತನ್ನ ದುರ್ಗಕ್ಕಾಗಿ ವಿರೋಚಿತವಾಗಿ ಹೋರಾಡಲು ಮುಂದಾಗುತ್ತಾನೆ. "ನಮ್ಮೊಂದಿಗೆ ಬರುವವರು ಸಿದ್ಧರಾಗಿ, ನಾವು ಬದುಕಿ ಬಂದರೆ ಉಂಟು ಇಲ್ಲದಿದ್ದರೆ ಕುಮಾರ ಭರಮಣ್ಣ ನಾಯಕರಿಗೆ ಪಟ್ಟಕಟ್ಟಿ, ನಮ್ಮೊಂದಿಗೆ ಬರುವವರು, ಯಾರು ಶತ್ರುವಿಗೆ ಬೆನ್ನುಕೊಡಬಾರದು. ವೀರರಲ್ಲಿ ಅದು ನಮ್ಮ ಕೊನೆಯ ಮನವಿ" ಅಷ್ಟು ಹೇಳಿ, ಕುದುರೆಯನ್ನೇರಿ, ಕೊನೆಯ ಬಾರಿಗೆ ಕಡೂರಿ, ನಾಗವ್ವೆಯರನ್ನು ನೆನೆದಂತೆ ದ್ಯಾಮವ್ವ ನಾಗತಿಯ ಹಜಾರದತ್ತ ನೋಡಿ, ದುರ್ಗದ ಕೋಟೆ, ಬುರುಜು, ಬತೇರಿಗಳಿಗೆ, ಝುಂಡಾ ಬತೇರಿಯ ಮೇಲೆ ಹಾರುತ್ತಿದ್ದ ಹನುಮದ್ಗರುಡ ಧ್ವಜಕ್ಕೆ ವಂದಿಸಿ – 'ಬಾಗಿಲನ್ನು ತೆಗೆದು ಬಿಡಿ' ಎಂದು ಬಾಗಿಲಕಾವಲಿನವರಿಗೆ ಹೇಳಿದ ಮದಕರಿನಾಯಕ."[೫೫]

ಈ ಸಂದರ್ಭದಲ್ಲಿ ಶತ್ರು ಸೈನಿಕರೊಂದಿಗೆ ಮದಕರಿನಾಯಕನು ನಡೆಸಿದ ವೀರೋಚಿತ ಹೋರಾಟವನ್ನು ತ.ರಾ.ಸು. ಅವರು ಚಿತ್ರಿಸುವ ರೀತಿಯು ರೋಮಾಂಚನಗೊಳಿಸುವಂಥದ್ದಾಗಿದೆ. "ಕತ್ತಿ, ಗುಂಡುಗಳ ಏಟು ತಿಂದು ಹತ್ತಾರು ಗಾಯಗಳಾಗಿ, ನೆತ್ತರು ಸೋರಿ, ಮದಕರಿ ನಾಯಕನೇರಿದ ಶ್ವೇತಾಶ್ವ ರಕ್ತಾಶ್ವವಾಗಿ ಭಯಂಕರವಾಗಿ ಕೆನೆಯುತ್ತಿತ್ತು

ಆದರೆ ಮದಕರಿನಾಯಕನಿಗೆ ಅದಾವುದರ ಪರಿವೆಯೂ ಇರಲಿಲ್ಲ. ರಣಾವೇಶ ಮೈತುಂಬಿದ ಮದಕರಿನಾಯಕ, ಕೇಳಿದ ಎದೆ ಬಿರಿದಂತೆ ರಣಘೋಷ ಕೂಗುತ್ತಾ, ಕೈಯಲ್ಲಿ ಹಿಡಿದ ಪರಿಘಾಯುಧವನ್ನು ಚಕ್ರಾಕಾರವಾಗಿ ಬೀಸಿ ನಾಲ್ಕು ಕಡೆಯಿಂದಲೂ ತನ್ನತ್ತ ಬರುತ್ತಿದ್ದ ಶತ್ರು ಸೈನಿಕರನ್ನು ಕುದರಿಕಡಿಯುತ್ತಾ ಮೈಮೇಲೆ ಬಿದ್ದ ಏಟಿನ ಲಕ್ಷವೂ ಇಲ್ಲದೆ ಹತ್ತಿರ ಬಂದವರ ಚಂಡಾಡುತ್ತಾ, ಕೈಕಾಲು ಕತ್ತರಿಸುತ್ತಾ, ಹೊಳೆವನೆತ್ತರುಗೆಂಪಿನ ರಣಭೈರವನಂತೆ ಮುನ್ನುಗ್ಗುತ್ತಿದ್ದ, ಮೈಗೆ ಪೆಟ್ಟು ಬಿದ್ದಷ್ಟೂ ಆತನ ರಣೋತ್ಸಾಹ ಮತ್ತಷ್ಟು ಉಗ್ರವಾಗುತ್ತಿತ್ತು. 'ಮುಂದೆ ಬಿದ್ದವರಾರು ಹಿಂದೆ ಸತ್ತವರಾರು' ಎಂಬುದನ್ನು ನೋಡದೆ ರಕ್ತಸರೋವರದಲ್ಲಿ ಜಲಕ್ರೀಡೆಯಾಡುವ ಮದೋನ್ಮತ್ತ ಸಲಗನಂತೆ ಕಡಿದಷ್ಟೂ ಕೈದಣಿಯದೆ, ಪೆಟ್ಟುಬಿದ್ದಷ್ಟೂ ಮೈದಣಿಯದೆ, ಹೂಂಕಾರ ಮಾಡುತ್ತಾ, ಇದಿರಾದವರನ್ನು ಕಡಿಯುತ್ತಾ, ಅಕ್ಕಪಕ್ಕದವರನ್ನು ಕೊಚ್ಚುತ್ತಾ ಕತ್ತರಿಸಿದ ತಲೆ, ಕಡಿದ ಕೈಕಾಲುಗಳಿಂದ ಚಿಮ್ಮಿದ ರಕ್ತ ಹೆಜ್ಜೆಹೆಜ್ಜೆಗೊಮ್ಮೆ ರಕ್ತಸ್ನಾನ ಮಾಡಿಸುತ್ತಿರಲು, ಪರಿಘಾಯುಧದ ಬಿರುಗಾಳಿಗೆ ಸಿಕ್ಕ ಕತ್ತಿಗಳು ಹಿಡಿದ ಕೈಯೊಂದಿಗೇ ಕತ್ತರಿಸಿ ಬೀಳುತ್ತಿರಲು .... ಕುದುರೆ ಜೋಲುವುದು, ಮುಗ್ಗರಿಸುವುದು

ಯಾವುದನ್ನೂ ನೋಡದೆ, ಹಣೆಯ ಮೇಲಾದ ಗಾಯಗಳಿಂದ ಹರಿದ ತನ್ನ ನೆತ್ತರನ್ನೇ ಕುಡಿದು ರಣಾಯಾಸವನ್ನು ಪರಿಹರಿಸಿಕೊಳ್ಳುತ್ತಾ, ಸುತ್ತಲ ಆಕ್ರಂದನ ಧ್ವನಿಗೆ ಕಿವುಡಾಗಿ, ನೆತ್ತರು ಸೋರಿ ಕುರುಡಾಗಿ, ಪ್ರಕ್ಷುಬ್ಧಕಾಲಯಮನ ಕೋಣದಂತೆ, ಹತ್ತಾರು ಗುಂಡೇಟು ತಿಂದ ಹೆಬ್ಬುಲಿಯಂತೆ ಏಟು ಬಿದ್ದ ಕಡೆ ನುಗ್ಗಿ ಕಡಿಯುತ್ತಾ ಚಂಡಮಾರುತದಂತೆ ಭೋರ್ಗರೆಯುತ್ತಾ ಮುನ್ನುಗಿದ."[೫೬] ಎಂಬಂತೆ ಮದಕರಿನಾಯಕನು ತನ್ನ ರಕ್ತದ ಕೊನೆಯ ಹನಿಯವರೆಗೂ ದುರ್ಗದ ನೆಲೆ ರಕ್ಷಣೆಗಾಗಿ ರಣೋತ್ಸಾಹದಿಂದ ಹೋರಾಡಿ, ವೀರಮರಣವನ್ನು ಅಪ್ಪಿದ ಚಿತ್ರಣವನ್ನು ತ.ರಾ.ಸು. ಅವರು ಕೊಡುತ್ತಾರೆ.

ಹೀಗೆ ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳಲ್ಲಿ ಯುದ್ಧದ ವರ್ಣನೆಯು ಕಂಡುಬರುತ್ತದೆ. ಸಾಧಾರಣವಾಗಿ ಅದರ ಚಿತ್ರದ ನಿರೂಪಣೆಯನ್ನು ಮಾತ್ರ ಇಲ್ಲಿ ಮಾಡಲಾಗಿದೆ.

**ಆ) ಧಾರ್ಮಿಕ ಜೀವನ:**

"ಧರ್ಮವೆನ್ನುವುದು ದೈವದ ಮೂರ್ತ ಸ್ವರೂಪ. ಮಾನವನ ಜೀವನವನ್ನು ನೈತಿಕತೆಯತ್ತ ಎಳೆದೊಯ್ಯುವ ಶಕ್ತಿ. ಅಂದರೆ ಅಸತ್ಯದಿಂದ ಸತ್ಯದೆಡೆಗೆ, ಅನ್ಯಾಯದಿಂದ

ನ್ಯಾಯದೆಡೆಗೆ, ಕತ್ತಲೆಯಿಂದ ಬೆಳಕಿನೆಡೆಗೆ ಕರೆದೊಯ್ಯುವ ದಿವ್ಯಶಕ್ತಿಯು ಧರ್ಮಕ್ಕಿದೆ. ಧರ್ಮವು ನಮ್ಮ ಸಾಮಾಜಿಕ ಜೀವನದ ಅವಿಭಾಜ್ಯ ಶಕ್ತಿಯಾಗಿ ಅದರ ಎಲ್ಲ ಅಂಶಗಳನ್ನು ಓತಪ್ರೋತವಾಗಿ ವ್ಯಾಪಿಸಿದೆ".[೨೭] ಎಂಬ ವಿಚಾರವು ಗಮನಾರ್ಹವಾಗಿದೆ. ಇಂತಹ "ಧರ್ಮವನ್ನು ಕುರಿತು ಪ್ರವಾದಿಗಳು ತತ್ವಜ್ಞಾನಿಗಳು ಋಷಿಮುನಿಗಳು ತಮ್ಮದೆ ಆದ ಅಭಿಪ್ರಾಯಗಳಿಂದ ವ್ಯಾಖ್ಯಾನಿಸಿದ್ದಾರೆ. ಸಮಾಜವನ್ನು ಎತ್ತಿ ಹಿಡಿದು, ಜನಮನವನ್ನು ತಿದ್ದಿ, ಅಧಃಪತನದಿಂದ ಪಾರು ಮಾಡಿ, ಉನ್ನತ ಸ್ಥಿತಿಗೆ ಕರೆದೊಯ್ಯುವುದು ನಿಜ ಧರ್ಮ ಎಂಬುದು ಅವರೆಲ್ಲರ ಮತವಾಗಿದೆ".[೨೮]

ಚಿತ್ರದುರ್ಗದ ಕೋಟೆ ಪರಿಸರದ ದೇವಾಲಯಗಳಲ್ಲಿ ಶಾಕ್ತ ಪರಂಪರೆಯು ಅಸ್ತಿತ್ವದಲ್ಲಿತ್ತೆಂಬುದು ತಿಳಿಯುತ್ತದೆ. "ಶಾಕ್ತ ಎಂದರೆ, ಮಾತೃದೇವತೆಯ ರೂಪದಲ್ಲಿರುವ ಶಕ್ತಿ ದೇವತೆಯ ಆರಾಧಿಸುವ ಪಂಥವನ್ನು ಶಾಕ್ತ ಪಂಥವೆಂದು ಕರೆಯುತ್ತೇವೆ".[೨೯] ಇಂತಹ ಶಕ್ತಿ ದೇವತೆಯ ಆರಾಧನೆಯು ಚಿತ್ರದುರ್ಗದ ಪಾಳೆಗಾರರಲ್ಲಿತ್ತೆಂಬುದು ಗಮನಾರ್ಹ. ಉದಾಹರಣೆಗೆ, ಏಕನಾಥೇಶ್ವರಿ, ಬನಶಂಕರಿ, ಕಾಳಿಕಾಪರಮೇಶ್ವರಿ, ಉಚ್ಚಂಗಿ ಎಲ್ಲಮ್ಮನಂತಹ ದೇವತೆಗಳನ್ನು ಗಮನಿಸಬಹುದು.

ಇತಿಹಾಸದ ಪುಟಗಳನ್ನು ತಿರುವಿ ಹಾಕಿದಾಗ ಧರ್ಮವು ಎಲ್ಲ ಕಾಲಘಟ್ಟಗಳಲ್ಲಿ ಮಾನವ ಬದುಕಿನೊಂದಿಗೆ ತನ್ನ ಜೀವಂತಿಕೆಯನ್ನು ಉಳಿಸಿಕೊಂಡು ಬಂದಿರುವುದು ಗೋಚರಿಸುತ್ತದೆ. ಈ ಧರ್ಮವು ಮಾನವ ಸಮಾಜದ ಒಂದು ವಿಭಿನ್ನ ಅಂಗವಾಗಿ ಕಂಡಿದೆ. ಧರ್ಮ, ಅರ್ಥ, ಕಾಮ, ಮೋಕ್ಷ ಈ ನಾಲ್ಕು ವಿಧದ ಪರವಾದಗಳ ಸಂಪಾದನೆಗೆ, ಸಾಧನೆಗೆ ಹಲವು ದಾರಿಗಳಿವೆ. ಮೋಕ್ಷ ಸಾಧನೆಗೆ ಧರ್ಮ, ಅರ್ಥ, ಕಾಮಗಳು ನೆರವಾಗುವ ಹಾದಿಗಳೆಂದು ಭಾವಿಸಲಾಗಿದೆ. ಅದೇನಿದ್ದರೂ ಪ್ರಾಚೀನ ಕಾಲದಿಂದಲೂ ಮನುಷ್ಯ ಇಂತಹ ವ್ಯವಸ್ಥೆಯೊಂದನ್ನು ರೂಪಿಸಿಕೊಂಡಿರುವುದನ್ನು ಕಾಣಬಹುದಾಗಿದೆ. ಇದು ವೇದ-ಪುರಾಣಗಳ ಕಾಲಕ್ಕಾಗಲೇ ಕಂಡು ಬರುವ ಸಂಗತಿಯಾಗಿದೆ. ಮನುಷ್ಯನ ಈ ವ್ಯವಸ್ಥೆಯಲ್ಲಿ ಜಾತಿಯೂ ಹುಟ್ಟಿಕೊಂಡಿತು. ಈ ಜಾತಿ ವ್ಯವಸ್ಥೆಯೇ ನಾಸ್ತಿಕ ಧರ್ಮ-ದೇವರುಗಳ ಹುಟ್ಟಿಗೆ ಕಾರಣವಾಯಿತು. ಇದರ ಪ್ರಭಾವದಿಂದ ಭರತಭೂಮಿ ಬಹುಸಂಸ್ಕೃತಿ, ಬಹುಧರ್ಮ ಬಹುದೈವಗಳ ನೆಲೆವೀಡಾಯಿತೆಂಬುದು ಗಮನಾರ್ಹ ವಿಚಾರವಾಗಿದೆ. ಈಗ ತ.ರಾಸು. ಅವರ ಚಾರಿತ್ರಿಕ ಕಾದಂಬರಿಗಳಲ್ಲಿ ಕಂಡು ಬರುವ ಪ್ರಮುಖ ಧಾರ್ಮಿಕ ಸಂಗತಿಗಳತ್ತ ಗಮನಹರಿಸಬಹುದು.

ರಾಷ್ಟ್ರಕೂಟರು ವೈದಿಕ ಮತ್ತು ಜೈನ ಧರ್ಮಗಳ ಆರಾಧಕರಾಗಿದ್ದರು. ಇದಕ್ಕೆ ಅಮೋಘವರ್ಷ ನೃಪತುಂಗನು ಹೊರತಲ್ಲ. ತ.ರಾಸು. ಅವರ ನೃಪತುಂಗ ಕಾದಂಬರಿಯಲ್ಲಿ ನೃಪತುಂಗನು ಸರ್ವಧರ್ಮಸಹಿಷ್ಣುತೆಯ ಭಾಗದವನಾಗಿದ್ದನೆಂಬುದರ ವಿಚಾರ ತಿಳಿಯುತ್ತದೆ.

"ಧರ್ಮಾಭಿಮಾನಿಗಳಾದ ನೃಪತುಂಗ ಚಕ್ರವರ್ತಿಗಳು ಸಕಲ ಧರ್ಮಗಳ ಸಾರವನ್ನು ತಿಳಿಯಬೇಕೆಂಬ ಆಸೆಯುಳ್ಳವನಾಗಿದ್ದರು. ಬ್ರಾಹ್ಮಣ, ಜೈನ ಬೌದ್ಧ, ಎಲ್ಲ ಮತಗಳ ಗ್ರಂಥಗಳನ್ನು ಓದುತ್ತಿದ್ದರು. ತಿಳಿದವರೊಂದಿಗೆ ವಿಚಾರ ಮಾಡಿ, ಆಯಾ ಮತಗಳ ಹಿರಿಮೆಯನ್ನು ಅರಿತು ಸಂತೋಷಪಡುತ್ತಿದ್ದರು. ಸ್ವತಃ ಚಕ್ರವರ್ತಿಗಳಿಗೆ ಅಹಿಂಸಾ ಪ್ರಧಾನವಾದ ಜಿನಧರ್ಮದಲ್ಲಿ ಹೆಚ್ಚಿನ ಆಸಕ್ತಿ ಇದ್ದರೂ, ಎಲ್ಲ ಧರ್ಮಗಳ ಬಗ್ಗೆಯೂ ಸಮಾನ ಗೌರವವಿತ್ತು ಸಮಾನ ಪ್ರೇಮವಿತ್ತು. ಗೊರವನಾಗಲಿ, ಕಾಲಸಾಲಿಕನಾಗಲಿ, ಶತ್ರುಗಳಾಗಲಿ, ವೇದಾಧ್ಯಾಯಿಯಾಗಲಿ–ಖಾಜಿಯಾಗಲಿ ಎಲ್ಲರೂ ಒಂದೇ ಅವರ ದೃಷ್ಟಿಯಲ್ಲಿ, ಚಕ್ರವರ್ತಿ ವೈಯುಕ್ತಿಕನಾಗಿ ಯಾವ ಧರ್ಮದಲ್ಲೇ ಶ್ರದ್ಧೆ ತೋರಿದರೂ, ಚಕ್ರವರ್ತಿ ವೈಯಕ್ತಿಕವಾಗಿ ಆ ಬಗೆಯ ಬೇಧ ಮಾಡಿದರೆ ಅಂಥ ಅರಸನಿಗೆ ವಿನಾಶ ತಪ್ಪದು. ಚಕ್ರವರ್ತಿ ಚಕ್ರವರ್ತಿಯಾಗಿ ಪಾಲಿಸಬೇಕಾದದು ಪ್ರಜಾಧರ್ಮವೊಂದೇ ಎಂದು ಜಿನಸೇನಾಚಾರ್ಯರು ಅವರ ಮನದಲ್ಲಿ ನಾಟುವಂತೆ ಹೇಳಿದ್ದರು. ಗಾಡಿಯ ಕಾವ್ಯಾದರ್ಶದ ರೀತಿಯಲ್ಲಿ ತಾವೇ ಕವಿ ಶ್ರೀವಿಜಯರಿಂದ ಬರೆಸಿದ ಕವಿರಾಜ ಮಾರ್ಗವೆಂಬ –ಅಲಂಕಾರ ಗ್ರಂಥದಲ್ಲಿ "ಕಾವ್ಯ ಪರಧರ್ಮಗಳಿಗೆ, ಪರಧರ್ಮಿಯರಿಗೆ ನೋವನ್ನುಂಟು ಮಾಡದಂತಿರಬೇಕಾದುದು ಕಾವ್ಯದ ಅಗತ್ಯವಾದ ಗುಣಗಳಲ್ಲೊಂದು ಎಂದು ಹೇಳಿ ಬರೆಸಿದ್ದರು."[೬೦] ನೃಪತುಂಗನು ಜೈನಧರ್ಮದ ದೀಕ್ಷೆಯನ್ನು ಪಡೆದುಕೊಂಡಿದ್ದರೂ ಅವನ ಆ ಸ್ಥಾನದಲ್ಲಿ ಸಕಲ ಧರ್ಮದವರು ಆಶ್ರಯ ಪಡೆದಿದ್ದರು. ಅವನ ಆ ಸ್ಥಾನ ಸಕಲ ವೈವಿಧ್ಯಗಳಿಂದ ಕೂಡಿದ ಉದ್ಯಾನದಂತಿತ್ತು. ಖಾಜಿ ಸೈಯದ್ ಇಮಾಂರು ಉದ್ಯಾನದ ಒಂದು ಪರಿಮಳ ಪುಷ್ಪದಂತಿದ್ದರು. ನೃಪತುಂಗನು ತನ್ನ ರಾಜ್ಯಕ್ಕೆ ಕ್ಷಾಮ ಒದಗಿದಾಗ, ಪ್ರಜೆಗಳ ಕ್ಷೇಮಕ್ಕಾಗಿ ಕೊಲ್ಲಾಪುರದ ಮಹಾಲಕ್ಷ್ಮಿಗೆ ಅಂಗುಲಿದಾನ ಮಾಡುತ್ತಾನೆ. ಇದು ಚಕ್ರವರ್ತಿಯ ಹಿಂದು ಧರ್ಮದಲ್ಲಿಟ್ಟ ನಂಬಿಕೆ ದ್ಯೋತಕವಾಗಿದೆ. ಅವನು ರಾಜಧರ್ಮ ಪ್ರಜಾಧರ್ಮ ವಿಶ್ವಧರ್ಮಗಳನ್ನು ಅನುಸರಿಸುತ್ತಾನೆ.

'ದೊರೆ ಹೆಸರು ಎರೆಯಂಗ, ದೊರೆ ಮಾತು ಕಾಶಿಗಂಗ' ಎಂಬ ಗಾದೆ ಮಾತಿನಂತೆ, ಹೊಯ್ಸಳರ ದೊರೆ ಎರೆಯಂಗನು ತನ್ನ ಪರಿವಾರದೊಂದಿಗೆ ಬಳ್ಳಿಗಾಮೆಗೆ ಪ್ರಯಾಣ ಮಾಡುವಾಗ, ಧರ್ಮಸಂಬಂಧಿ ಮಾತುಗಳನ್ನು ಆಡುತ್ತಾನೆ. 'ಸಿಡಿಲ ಮೊಗ್ಗು' ವಿನಲ್ಲಿ ಇದರ ಚಿತ್ರಣವನ್ನು ಕಾಣುತ್ತೇವೆ. "ಒಮ್ಮೆ ಅರಮನೆಗೆ ನವರಾತ್ರಿಯ ಉತ್ಸವದ ಸಂದರ್ಭದಲ್ಲಿ ಪುಷ್ಪಗಿರಿಯ ಮಠದ ಸ್ಥಾನ ಪತಿಗಳಾದ ತೇಜೋರಾಶಿ ಪಂಡಿತರು ಬಂದರು. ನಿನ್ನ ಕಣ್ಣು ಆ ಗುರುಗಳನ್ನು ಕಾಣಲಾಗಲಿಲ್ಲ. ನೀನು ಜನಿಸುವ ಕೆಲವು ದಿನ ಮೊದಲು ಅವರು ಶಿವಪಾದವಾಸಿಗಳಾದರು, ಆ ಮಟ್ಟಿಗೆ ನೀನು ಅದೃಷ್ಟಹೀನ ಬಿಟ್ಟಿಯಣ್ಣ. ಆ ಗುರುಗಳ ಹೆಸರು ಬೇರೆಯಲ್ಲ, ರೂಪ ಬೇರೆಯಲ್ಲ, ಧ್ಯಾನದಲ್ಲಿ ಕುಳಿತಾಗ ಅವರನ್ನು ನೋಡಿದರು, ಸಾಕ್ಷಾತ್ ಅಗ್ನಿದೇವನೇ ಎದುರಿಗೆ ಕುಳಿತಂತೆ ಕಾಣುತ್ತಿದ್ದರು. ಅವರು ಅರಮನೆಗೆ ಅಷ್ಟು

ಸಮೀಪದಲ್ಲಿದ್ದರೂ, ಅವರ ದರ್ಶನ ಹಿಮಾಲಯದ ದರ್ಶನದಷ್ಟೇ ಅಪರೂಪವಾಗಿತ್ತು. ಸದಾ ತಮ್ಮ ಜಪತಪ ಅನುಷ್ಠಾನದಲ್ಲಿ ನಿರತರಾಗಿರುತ್ತಿದ್ದ ಅವರು, ಆ ಬಾರಿ, ನಮ್ಮ ಪುಣ್ಯ ಫಲಿಸಿ ಅರಮನೆಗೆ ಬರಲು ಒಪ್ಪಿದರು. ಅಂಥವರು ಯಾರಾದರೂ ಬಂದಾರೆಯೇ ಎಂದು ಕಾದಿರುತ್ತಿದ್ದ ಅವ್ವ ದೇವತಾರ್ಚನೆ ಗುರುಗಳ ಪಾದಪೂಜೆ ಎಲ್ಲವೂ ಮುಗಿದ ಬಳಿಕ ಮಾತಲೆಯನ್ನು ಅವರ ಪಾದಕ್ಕೆ ಎರಗಿಸಿ ತಾನೂ ಅವರ ಕಾಲುಗಳ ಮೇಲೆ ಬಿದ್ದು ಅವರ ಪಾದವನ್ನು ಕಣ್ಣೀರಿನಿಂದ ತೊಳೆದು 'ತಾವು ಮಹಾ ಮಹಿಮರು, ನಿಮ್ಮ ಅಮೃತ ಹಸ್ತ ಸ್ಪರ್ಶದಿಂದ ಹೂ ಬಿಡದ ಬಳ್ಳಿ ಹೂ ಬಿಡುತ್ತದೆ, ಹಣ್ಣಾಗದ ಮರ ನಿತ್ಯ ಫಲ ಭರಿತವಾಗುತ್ತದೆ. ಎಂದು ಲೋಕವೆಲ್ಲ ನಿಮ್ಮ ಕೀರ್ತಿಯನ್ನು ಕೊಂಡಾಡುತ್ತದೆ. ಆ ಅನುಗ್ರಹ ನನ್ನ ಸೊಸೆ ಮುದ್ದಿಗೂ ಆಗಬೇಕು ಎಂದು ಬೇಡಿದಳು'[೮೧] ಎಂಬಂತಹ ಚಿತ್ರಗಳೊಂದಿಗೆ ಹೊಯ್ಸಳ ಅರಸು ಕೂಡ ಧರ್ಮದ ಆಚಾರ ವಿಚಾರಗಳಲ್ಲಿ ಬಲವಾದ ನಂಬಿಕೆಯನಿಟ್ಟಿದ್ದರೆಂಬ ಐತಿಹಾಸಿಕ ಸತ್ಯದ ಮೇಲೆ ತ.ರಾ.ಸು. ಅವರು ಬೆಳಕು ಚೆಲ್ಲುತ್ತಾರೆ. ಅದೇ ರೀತಿ ಬಳ್ಳಿಗಾಮೆಯೂ ಸಕಲ ಧರ್ಮಿಯರಿಗೂ ಪುಣ್ಯ ಕ್ಷೇತ್ರವಾಗಿತ್ತೆಂದು ಹೇಳಿದ್ದಾರೆ.

ಹೊಯ್ಸಳ ಇತಿಹಾಸದ ಹಿನ್ನೆಲೆಯಲ್ಲಿ ಬಂದ ತ.ರಾಸು ಅವರ ಮತ್ತೊಂದು ಕಾದಂಬರಿ 'ಕೀರ್ತಿನಾರಾಯಣ' ದಲ್ಲಿ ಗಂಗದೊರೆಗಳ ಮೇಲೆ ಜೈನಧರ್ಮವು ಬೀರಿದ ಪ್ರಭಾವದ ಚಿತ್ರಣವನ್ನು ಕಾಣುತ್ತೇವೆ. "ಗಂಗದೊರೆಗಳು ತಮ್ಮ ಕಾಲದಲ್ಲಿ ಜೈನ ಧರ್ಮಾವಲಂಬಿಗಳಾಗಿದ್ದುದೇ ಅಲ್ಲದೇ ಆ ಮತಕ್ಕೆ ಪ್ರೋತ್ಸಾಹಕರಾಗಿದ್ದರು. ಅವರ ಕಾಲದಲ್ಲಿ ಗಂಗವಾಡಿ ಜೈನಧರ್ಮದ ತವರು ಮನೆಯಾಗಿತ್ತು. ಭದ್ರಬಾಹುಮುನಿಗಳ ಪಾದ ಧೂಳಿಯಿಂದ ಪವಿತ್ರವಾದ ಶ್ರವಣಬೆಳಗೋಳ ಲೋಕಾಶ್ಚರ್ಯಕರವಾದ ಭವ್ಯೋತ್ತುಂಗ ಬಾಹುಬಲಿ ಮೂರ್ತಿ ನಿರ್ಮಿತವಾದುದು ಗಂಗದೊರೆ ರಾಚಮಲ್ಲನ ದಂಡನಾಯಕನಾದ ಚಾವುಂಡರಾಯನಿಂದ ಆ ಬಾಹುಬಲಿ ಮೂರ್ತಿಯ ಪ್ರತಿಷ್ಠೆಯಾದ ಬಳಿಕ, ಶ್ರವಣಬೆಳಗೋಳ 'ಅಭಿನವಪೋದನಪುರ' ವೆಂದು ಖ್ಯಾತವಾಗಿ ಜಿನಮುನಿಗಳ ನೆಲೆವೀಡಾಗಿ, ಜೈನಧರ್ಮಿಯರ ಪ್ರಧಾನ ಧರ್ಮಕ್ಷೇತ್ರವಾಗಿತ್ತು. ಗಂಗ ಅರಸರ ಕಾಲಗಳಲ್ಲಿ ಗ್ರಾಮ ಗ್ರಾಮವೂ ಬಸದಿಗಳಿಂದ ಅಲಂಕೃತವಾಗಿ, ಗಂಗವಾಡಿ, ಜಿನವಾಡಿಯಾಗಿತ್ತು. ಗಂಗ ಅರಸರ ಭಾಗ್ಯ ಬದಲಾಗಿ ಚೋಳ ರಾಜ ರಾಜನ ತೊತ್ತಳದುಳಿತಕ್ಕೆ ಸಿಕ್ಕು ಗಂಗ ಸಿಂಹಾಸನ ಉರುಳಿದ ಬಳಿಕ ಅವರೊಂದಿಗೆ ಪಟ್ಟವೇರಿ, ರಾರಾಜಿಸಿದ ಜಿನಧರ್ಮವೂ ತನ್ನ ಪ್ರತಿಷ್ಠೆಯನ್ನು ಕಳೆದುಕೊಂಡಿತು. ಚೋಳ ದೊರೆಗಳು ಒಪ್ಪಿದ ಶ್ವೇತ, ವೈಷ್ಣವ ಧರ್ಮಗಳು ಪ್ರಬಲಿಸಿ ದಿನ ದಿನಕ್ಕೆ ಬಸದಿಗಳು, ಹಾಳಾಗುತ್ತ ಬಂದವು. ಜೈನ ಬಸದಿಗಳ ದೇವಾಲಯದ ಭೂಮಿ, ಎಷ್ಟೆಲ್ಲ ಚೋಳ ದಳಪತಿಗಳ ಭೋಗಕ್ಕೆ ಸಂದಿತು"[೮೨] ಎಂದು ಚಿತ್ರಿಸುವ ತ.ರಾಸು ಅವರು, ಇದು ಗಂಗರ ವಂಶಕ್ಕಾದ ಹಾನಿಗಿಂತ . ಧರ್ಮಕ್ಕಾಗಿ ಹಾನಿಯ ಗಂಗರ ಒಡಲ ಕಿಚ್ಚಿಗೆ ಕಾರಣವಾಗಿತ್ತೆಂದಿದ್ದಾರೆ. ಈ

ಕಾರಣಕ್ಕಾಗಿಯೇ ಗಂಗವಾಡಿಯನ್ನು ಗೆಲ್ಲಬೇಕು ಮತ್ತ ಗಂಗವಾಡಿಯ ಕೀರ್ತಿಬೆಳಗಬೇಕೆಂಬ ಆಕಾಂಕ್ಷೆಯು ಗಂಗರಲ್ಲಿ ಬಲವಾಗಿದ್ದುದು ತಿಳಿಯುತ್ತದೆ. ವಿಷ್ಣುವರ್ದನನು ಚೋಳರ ಮೇಲೆ ದಂಡೆತ್ತಿ ಹೋಗಲು ಇದು ಕೂಡ ಒಂದು ಪ್ರಮುಖವಾಗಿತ್ತು.

ವಿಷ್ಣುವರ್ಧನನಿಗೆ ಜಯವಾಗಲೆಂದು ಬಸದಿ ದೇವಾಲಯಗಳಲ್ಲಿ ವಿವಿಧ ಪೂಜಾಕೈಂಕರ್ಯಗಳೂ ಜರುಗುತ್ತವೆ. "ಒಂದು ಕಡೆ ದೊರೆಯ ವಿಜಯಾಭಿವೃದ್ಧಿಗಾಗಿ, ನಾನಾ ದೇವಾಲಯಗಳಲ್ಲಿ ಹೋಮ ಹವನಗಳನ್ನು ನಡೆಸುತ್ತಿದ್ದರು. ದೇವತೆಗಳಿಗೆ ವಿಶೇಷ ಪೂಜೆ ಹೋಮ ನಡೆಯುತ್ತಿತ್ತು. ಬಸದಿಗಳಲ್ಲಿ ಶಾಂತಿಪೂಜೆಗಳು ನಡಯುತ್ತಿದ್ದವು. ಅವರೊಂದಿಗೆ ಮನೆ ಮನೆಯವರು ಬಂದು ಹರಕೆ ಹೊತ್ತು ಪೂಜೆ ಮಾಡಿಸುವ ಗದ್ದಲ ಬೆಟ್ಟದ ಬೈರವನ ಗುಡಿಯಲ್ಲಂತೂ ಒಂದು ಗಳಿಗೆಯೂ ಬಿಡುವಿರಲಿಲ್ಲ. ದೊರೆಗೆ ವಿಜಯವನ್ನು ಕೋರಿ ಹರಕೆಯಾಳುಗಳು ಕುರಿ ಕೋಣಗಳೊಂದಿಗೆ ತಮ್ಮ ತಲೆಯನ್ನು ಅರ್ಪಿಸಿದರು. ಆ ನೂರಾರು ಬಲಿಗಳಿಂದ ಬೆಟ್ಟಕ್ಕೆ ಬೆಟ್ಟವೇ ರಕ್ತದಲ್ಲಿ ಅದ್ದಿ ತೆಗೆದಂತೆ ಕೆಂಪಾಯಿತು. ದುರ್ಗಾಂಷ್ಟಮಿಯ ವೇಳೆಗೆ ಒಂದು ಘಟ್ಟಕ್ಕೆ ಬಂದು ಆ ದಿನ ದ್ವಿಜರು ಮಂತ್ರ ತಂತ್ರೋಕ್ತವಾಗಿ ಮಹಿಷಾಸುರ ಮರ್ದಿನಿಯಾದ ದುರ್ಗಾಮಾತೆಯನ್ನು ಆರಾಧಿಸಿ ರಾಜಧಾನಿಯ ಹೊರವಲಯದಲ್ಲಿ 'ರಕ್ತಾಸ್ತಂಬ'ವನ್ನು ಸ್ಥಾಪಿಸಿ ಅದಕ್ಕೆ ಸಲ್ಲಬೇಕಾದ ಪೂಜೆಗಳನ್ನೆಲ್ಲಾ ಮಿಂದು ಮಡಿಯುಟ್ಟ ದೊರೆಯಿಂದ ಸಕಲ ಸೇನಾಧಿಪತಿ ಗಂಗರಾಜನಿಂದ ಮಾಡಿಸಿದರು. ಅದರ ಮಾರನೆಯ ದಿನವೇ ಆಯುಧ ಪೂಜೆ ನಡೆಯಿತು. ದೊರೆಯಂತೆಯೇ ಲಕ್ಷಾಂತರ ಸೇನೆಯು ತನ್ನ ತನ್ನ ಆಯುಧ ವಾಹನಗಳನ್ನು ಅರ್ಚಿಸಿ ವಿಜಯ ಕೋರಿತು"[೬೩] ಎಂಬಂತ ಧರ್ಮಾಚರಣೆಯ ಚಿತ್ರಣವನ್ನು ತ.ರಾ.ಸು. ಕೊಟ್ಟಿದ್ದಾರೆ. ಮುಂದೆ ಇಂತಹ ಧರ್ಮಾಚರಣೆಗಳಿಂದಲೇ ತಮಗೆ ಗೆಲವು ಲಭಿಸಿತೆಂದು ವಿಷ್ಣುವರ್ಧನನು ತನ್ನ ಜನರಿಗೆ 'ನಮ್ಮ ಜನತೆಗೆ ನಾವು ಹೇಳುವುದು ಇದೆ– ಧರ್ಮಕ್ಕೆ ಶರಣಾಗಿ ನಡೆದುಕೊಳ್ಳಿ, ಕೀರ್ತಿ ಕಾಮಿಗಳಾಗಿ ಬಾಳಿ ಎಂದು ಕಿವಿ ಮಾತನ್ನು ಹೇಳುತ್ತಾನೆ.

ಜೈನ ಧರ್ಮದ ವಿಜೃಂಭನೆ ಶಿಲ್ಪಶ್ರೀ ಕಾದಂಬರಿಯಲ್ಲೂ ಎದ್ದು ಕಾಣುತ್ತದೆ ಕಾದಂಬರಿಯ ಉದ್ದಕ್ಕೂ ಈ ಧರ್ಮದ ವಿವರಣೆಯನ್ನು ನಾವು ಕಾಣಬಹುದಾಗಿದೆ. "ಆ ಕಾಲಕ್ಕೆ ಬಂಕಾಪುರ ಬನವಾಸಿ ಹನ್ನೆರಡು ಸಾಲಿನಿಂದ ರಾಜಧಾನಿಯಾಗಿದ್ದಲ್ಲದೆ, ಜೈನ ಧರ್ಮ, ಸಂಸ್ಕೃತಿಯ ಕೇಂದ್ರವೂ ಆಗಿತ್ತು. ರಾಷ್ಟ್ರಕೂಟ ಇಮ್ಮಡಿ ಕೃಷ್ಣನ ಕಾಲದಲ್ಲಿ 'ಮಹಾ ಪುರಾಣದ ಉತ್ತರ ಭಾಗವನ್ನು ಗುಣಭದ್ರಾಚಾರ್ಯರು, ಬಂಕಾಪುರದಲ್ಲಿ ತಮ್ಮ ಶಿಷ್ಯ ಲೋಕಾದಿತ್ಯ ಕಟ್ಟಿಸಿದ ಚೌವಿಸತೀರ್ಥಂಕರ ಬಸದಿಯಲ್ಲಿ ಮುಗಿಸಿ ಕೇವಲ ರಾಜಧಾನಿಯಾಗಿದ್ದ ಬಂಕಾಪುರಕ್ಕೆ ಪುಣ್ಯಕ್ಷೇತ್ರದ ಸ್ವರೂಪವನ್ನು ತಂದುಕೊಟ್ಟಿದ್ದರು. ಗುಣಭದ್ರಾಚಾರ್ಯರ ನಂತರ ಆ ಪೀಠವನ್ನು ಅಲಂಕರಿಸಿದ ಗುರುಗಳೂ ಕೇವಲ ಧರ್ಮ

ಪಂಡಿತರೇ ಆಗಿಲ್ಲದೆ, ಸಾಹಿತ್ಯಶಾಸ್ತ್ರ ಕೋವಿದರು ಸಾಹಿತ್ಯಾಭಿಮಾನಿಗಳು ಆಗಿದ್ದರಿಂದ ಅವರ ಪ್ರಭಾವ ಪ್ರೋತ್ಸಾಹದಿಂದಾಗಿ ನೂರಾರು ಜನ ಪಂಡೀತರು ದೇಶದ ನಾನಾ ಭಾಗದಿಂದ ಬಂದು ಬಂಕಾಪುರದಲ್ಲಿ ನೆಲೆಸಿದ್ದರು. ಇದರಿಂದ ಬಂಕಾಪುರ 'ಪಂಡಿತಪುರಿ' ಎಂದು ಪ್ರಖ್ಯಾತವಾಗಿತ್ತು. ಬಂಕಾಪುರದ ಈ ಖ್ಯಾತಿಯೇ ರನ್ನಮಯ್ಯನನ್ನು ಆದರತ್ತ ಸೆಳೆಯಿತು"[೬] ಎಂದು ತ.ರಾಸು ಅವರು ಧರ್ಮದ ಹಿನ್ನೆಲೆಯಲ್ಲಿ ಬಂಕಾಪುರ ಪಟ್ಟಣದ ಪ್ರಸಿದ್ಧಿಯ ಚಿತ್ರಣವನ್ನು ಕೊಡುತ್ತಾರೆ. ಇದರಂತೆ ಶ್ರವಣಬೆಳಗೊಳದ ಗುಡ್ಡದ ಮೇಲಿರುವ ದೇವತೆಗಳ ವರ್ಣನೆಯೂ ಈ ಕಾದಂಬರಿಯಲ್ಲಿ ಸಾಕಷ್ಟು ಸಿಗುತ್ತದೆ. ಜೈನಧರ್ಮದ ಬಲವಾದ ಸೆಳೆತಕ್ಕ ಒಳಗಾಗುವ ಚಾವುಂಡರಾಯ 'ಖಡ್ಗ ಸನ್ಯಾಸ' ಸ್ವೀಕರಿಸಿ, ಶ್ರವಣಬೆಳಗೊಳದಲ್ಲಿ ಭವ್ಯವಾದ ಗೊಮ್ಮಟೇಶ್ವರನ ಶಿಲಾ ಮೂರ್ತಿ ಸ್ಥಾಪನೆಗೆ ಕಾರಣೀಕರ್ತನಾಗುತ್ತಾನೆ.

ವಚನಕಾರರ ಬದುಕಿನ ಹಿನ್ನೆಲೆಯಲ್ಲಿ ರಚಿಸಿದ ಕಾದಂಬರಿ 'ಅಗ್ನಿರಥ-ಮುಕ್ತಿಪಥ' ಇದರಲ್ಲಿ ತ.ರಾಸು ಅವರು ಅಲ್ಲಮನ ವ್ಯಕ್ತಿತ್ವ ಚಿತ್ರಣ ಕೊಡುತ್ತಾರೆ. ಧರ್ಮ ಸಂಬಂಧಿ ವಿಶೇಷ ಉಲ್ಲೇಖಗಳು ಈ ಕಾದಂಬರಿಯಲ್ಲಿ ಇಲ್ಲವಾದರೂ ಕಾಯಕವೇ ಕೈಲಾಸ ವೆಂಬ ವಚನಕಾರರ ತತ್ವದಡಿಯಲ್ಲಿ ಕಾಯಕ್ಕೆ ಹೆಚ್ಚಿನ ಮಹತ್ವ ನೀಡಲಾಗಿದೆ. ಕಾಯಕದಲ್ಲಿಯೇ ದೈವವನ್ನು ಕಾಣಬೇಕು ಸಕಲ ಸದ್ಭಕ್ತರಿಗೆ ಲೇಸನ್ನು ಬಯಸುವುದೆ ಧರ್ಮ. ಈ ಹಿನ್ನೆಲೆಯಲ್ಲಿ ಅಲ್ಲಮಪ್ರಭು, ಬಸವಣ್ಣ, ಸೊನ್ನಲಿಗೆ ಸಿದ್ಧರಾಮರು ಹೇಳುವ ಮಾತುಗಳು ಗಮನಾರ್ಹವಾಗಿವೆ. ನಾವಿಲ್ಲಿ ನಿಜ ಧರ್ಮದ ಜಾಗೃತಿಯನ್ನು ಕಾಣುತ್ತೇವೆ. ಈ ದೃಷ್ಟಿಯಿಂದ ಅಲ್ಲಮಪ್ರಭು ಮತ್ತು ಬಸವಣ್ಣನ ವಚನಗಳ ಉಲ್ಲೇಖಗಳನ್ನು ತ.ರಾಸು. ಅವರು ಹೇರಳವಾಗಿ ಬಳಸಿಕೊಂಡಿದ್ದಾರೆ. ಅಲ್ಲಮನ ಬದುಕು ಅಗ್ನಿಪಥದಿಂದ ಮುಕ್ತಿಪಥದ ಕಡೆಗೆ ಸಾಗಿದ್ದರ ಚಿತ್ರಣ ಇಲ್ಲಿ ಮುಖ್ಯವಾಗಿದೆ.

'ಕಂಬನಿಯ ಕುಯಿಲು' ವಿನಲ್ಲಿ ರಾಜ ಮದಕರಿನಾಯಕನ ಶವಸಂಸ್ಕಾರಕ್ಕೂ ಮುನ್ನ ಎಲ್ಲ ದೇವಾಲಯಗಳಿಗೆ ಪೂಜೆ ಸಲ್ಲಿಸುವ ಸನ್ನಿವೇಶ ಬರುತ್ತದೆ. "ವಿವಾಹ ವೇದಿಕೆಗೆ ತೆರಳಲು ಶೃಂಗಾರವಾದ ವಧುವಿನಂತೆ ಸಕಲ ಪವಿತ್ರ ಅಲಂಕಾರಗಳಿಂದ ಅಲಂಕೃತವಾದ ಅವರು ಕಲಶ, ಕನ್ನಡಿ, ಅರಿಶಿನ ಕುಂಕುಮದ ಹೆಡಿಗೆಗಳನ್ನು ಮತ್ತು ಬಾಗಿನದ ಉಪಕರಣಗಳನ್ನು ಹೊತ್ತ ದಾಸಿಯರ ಪರಿವಾರದ ನಡುವೆ, ಅರಮನೆಯ ಬಳಿಯ ಗೋಪಾಲಸ್ವಾಮಿಯ ಹೊಂಡಕ್ಕೆ ಹೋಗಿ ಗಂಗೆಯ ಪೂಜೆ ಮಾಡಿ ಮುತ್ತೈದೆಯರಿಗೆ ಬಾಗಿನ ದಾನವಿತ್ತು, ಅಲ್ಲಿಂದ ಏಕನಾಥೇಶ್ವರಿ, ಹಿಡಂಬೇಶ್ವರಿ, ಸಂಪಿಗೆಯ ಸಿದ್ದೇಶ್ವರ ಗೋಪಾಲಕೃಷ್ಣ ಸ್ವಾಮಿ ಅರಮನೆಯ ಬಳಿಯ ಸುಬ್ರಹ್ಮಣ್ಯಸ್ವಾಮಿ ಎಲ್ಲರಿಗೂ ಮನಸ್ಸು ತೃಪ್ತಿಯಾಗುವಷ್ಟು ಪೂಜೆ ಮಾಡಿಸಿ ಅರಮನೆಗೆ ಹಿಂದಿರುಗಿದರು"[೭] ಎಂದು ಚಿತ್ರಿಸುವ ತ.ರಾಸು ಅವರು ರಾಜರ ಶವಸಂಸ್ಕಾರಕ್ಕೂ ಪೂರ್ವರು ಮಾಡುತ್ತಿದ್ದ ಧಾರ್ಮಿಕ ವಿಧಿ

ವಿಧಾನಗಳ ಪರಿಚಯವನ್ನು ಮಾಡಿಕೊಡುತ್ತಾರೆ. ಜೊತೆಗೆ ಮಾಸತಿಯರು ಸತಿಸಹಗಮನ ಮಾಡುವಾಗ ಪೂರೈಸಬೇಕಾದ ಧರ್ಮದ ಆಚರಣೆಗಳ ಮೇಲೂ ಬಳಕು ಚೆಲ್ಲಿದ್ದಾರೆ. "ನಾಗತಿಯ ಅಪ್ಪಣೆಯಂತೆ ಏಕಾದಶಿಯಿಂದ ಅಮವಾಸ್ಯೆಯ ಕೊನೆಯವರೆಗೆ ಒಂದೇ ಸಮನೆ ಬಿಡುವಿಲ್ಲದೆ ದಾನಧರ್ಮಗಳು ನಡೆದವು. ನಾಯಕರ ಆತ್ಮತೃಪ್ತ್ಯರ್ಥವಾಗಿ ದುರ್ಗದ ದೇವಾಲಯಗಳಲ್ಲೆಲ್ಲಾ ಅಭಿಷೇಕ, ಆರಾಧನೆ, ಶಾಂತಿಯ ಹೋಮಗಳು ನಡೆದು, ಆ ಮಂತ್ರಘೋಷದಿಂದ ಹನ್ನೆರಡು ದಿನ ಕಾಲ ದುರ್ಗವನ್ನು ಕವಿದಿದ್ದ ನಾಯಕರ ಮರಣದ ರಾಹುಕಳೆ ತೊಲಗಿ ಹೋಗಿ ಪುನರ್ಜನ್ಮ ಪಡೆದಂತೆ ದುರ್ಗ ರಂಜಿಸಿತು".[೬೬] ಎಂದು ಹೇಳುವ ತ.ರಾಸು ಅವರು ದುರ್ಗವು ಸೂತಕಗಳನ್ನು ಕಳೆದುಕೊಂಡು ಹೊಸ ಬದುಕಿಗೆ ಅಣಿಯಾದುದರ ಚಿತ್ರಣವನ್ನು ಕೊಡುತ್ತಾರೆ.

ಚಿತ್ರದುರ್ಗದ ಪ್ರಮುಖ ದೇವಾಲಯಗಳ ವರ್ಣನೆ 'ರಾಜ್ಯದಾಹ' ಕಾದಂಬರಿಯಲ್ಲಿ ಕಾಣಸಿಗುತ್ತದೆ. ವಿಶೇಷ ಸಂದರ್ಭಗಳಲ್ಲಿ ದೇವರನ್ನು ಪೂಜಿಸುವ ಕಾಯಕ ನಡೆಯುತ್ತಿತ್ತು. ಮತ್ತು ಸಮಾನ್ಯ ಜನರು ಕೂಡ ದೇವತಾ ಕಾರ್ಯದಲ್ಲಿ ಹೇಗೆ ನೆರವಾಗುತ್ತಿದ್ದರೆಂಬುದರ ಚಿತ್ರಣ ಅಲ್ಲಲ್ಲಿ ಕಾಣಸಿಗುತ್ತದೆ. ಅದೇ ರೀತಿ 'ರಕ್ತರಾತ್ರಿ' ಕಾದಂಬರಿಯಲ್ಲಿ ಕಲ್ಲುಮಠದ ವರ್ಣನೆಗೆ ಬರುತ್ತದೆ. ಚಿಕ್ಕಣ್ಣನಾಯಕ ಉಗ್ರ ಚನ್ನವೀರದೇವರಿಗೆ ಕಟ್ಟಿಸಿಕೊಟ್ಟ ಕಲ್ಲುಗೆಲಸದ ಮಠ ಆ ಮಠವನ್ನು ಕಲ್ಲಿನಲ್ಲೇ ಕಟ್ಟಿಸಿದ್ದುದರಿಂದ ಅದು ಕಲ್ಲುಮಠವೆಂದೇ ಹೆಸರಾಗಿತ್ತು. ಇದು ಕಲ್ಲುಮಠವಾದರೂ ಇದು ರಾಜಗುರುಗಳಾಗಿದ್ದವರ ಗೌರವ ಪ್ರತಿಷ್ಠೆಗಳಿಗೆ ಸಲ್ಲುವಂತೆ ಭವ್ಯ ಮಠವಾಗಿತ್ತು.

ಈ ಕಾದಂಬರಿಯಲ್ಲಿ ನವರಾತ್ರಿ ಉತ್ಸವದ ಆಚರಣೆಯಲ್ಲಿ ವಿಶೇಷವಾಗಿದೆ "ಪ್ರತಿವರ್ಷ ಮಹಾಲಯ ಅಮವಾಸ್ಯೆಯ ದಿನದಂದು ದುರ್ಗದ ಪಾಳೆಯಗಾರರು ರಾಜಪರಿವಾರದವರೊಂದಿಗೆ ಜೋಗಿಗಳ ವೇಶ ಧರಿಸಿ ದುರ್ಗದ ಬಳಿಯ ಹತ್ತಾರು ಹಳ್ಳಿಗಳ ಗೌಡರು ಮೊದಲಾದವರ ಮನೆಗೆ ಹೋಗಿ, ಭಿಕ್ಷೆ ಬೇಡಿ ಅವರು ಕೊಟ್ಟ ಕಾಣಿಕೆಯನ್ನು ಸ್ವೀಕರಿಸಿ ಬರುವುದು ವಾಡಿಕೆ"[೬೭] ಆದರೆ ನಾಯಕರಿಲ್ಲದೆ ಈ ವಾಡಿಕೆ ತಪ್ಪಿ ಹೋಗಿ ಈಗ ದೇವಾಲಯಗಳಲ್ಲಿ ಮಾತ್ರ ಉತ್ಸವಗಳು ನಡೆಯುವಂತಾಗಿತ್ತು. ಅದರ ಚಿತ್ರಣವನ್ನು ತ.ರಾಸು. ಅವರು ಹೀಗೆ ಕೊಡುತ್ತಾರೆ "ಅಂದು ನವರಾತ್ರಿಯ ತದಿಗೆ ಪ್ರತಿವರ್ಷವು ನವರಾತ್ರಿಯಲ್ಲಿ ನಾಯಕರು ನಡೆಸುತ್ತಿದ್ದ ವಿಶೇಷ ಓಲಗದ ಉತ್ಸವಗಳಾವವೂ ಇಲ್ಲದೆ ಅವರ ವಿಶೇಷ ಓಲಗ ಶ್ವೇತಬಣ್ಣದ ಚಾವಡಿ ಭಣಗುಟ್ಟುತ್ತಿದ್ದಿತು. ದೇವಾಲಯಗಳಲ್ಲಿ ಮಾತ್ರ ನವರಾತ್ರಿಯಲ್ಲಿ ನಡೆಯಬೇಕಾದ ಪ್ರಜೆಗಳಿಗೆ ಕೊರತೆ ಬಂದಿಲ್ಲ. ಅದರಲ್ಲಿಯೂ ಏಕನಾಥೇಶ್ವರಿ ಉತ್ಸವಾಂಬಾ ಬರಗೇರಮ್ಮ ತಿಪ್ಪಲಗಟ್ಟಮ್ಮ ಮೊದಲಾದ ಉಗ್ರದೇವತೆಗಳ ಗುಡಿಯಲ್ಲಿಯ ಪೂಜೆಯ ವೈಭವ ಊರಿನ ಕಣ್ಣನೆಲ್ಲ ತಮ್ಮತ್ತ ಸೆಳೆದಿವೆ. ಬೇರಾವ ಉತ್ಸವಗಳ ಆಕರ್ಷಣೆಯೂ

ಇಲ್ಲದೆ ಬೇಸರಗೊಂಡ ಜನ, ದೇವಾಲಯದ ಬಳಿಯೇ ಕಿಕ್ಕಿರಿದ್ದಾರೆ. ಉಳಿದೆಲ್ಲ ದೇವಾಲಯಗಳಿಗಿಂತಲೂ ಹೆಚ್ಚು ಜನ ಉತ್ಸಾಂಬಾ ದೇವಾಲಯದ ಬಳಿಯಲ್ಲಿ ನೆರೆದಿದ್ದಾರೆ. ದೇವಾಲಯದ ಇದಿರಿನಲ್ಲಿ ನಾಲ್ಕು ಕಡೆಯ ಪೇಟೆಗಳು ಕೂಡುವುದರಿಂದ ದೇವಾಲಯಕ್ಕೆ ಬಂದ ಜನರೊಂದಿಗೆ ಪೇಟೆಗೆ ವ್ಯಾಪಾರಕ್ಕೆ ಬಂದವರೂ ಇದ್ದಾರೆ. ದೇವಾಲಯದತ್ತ ಹಿಂದೆ ಕೇಳಿ ಬರುವ ಉರುಮೆ ತಮಟೆ, ನಗಾರಿಗಳ ಸದ್ದೂ ಬೆರೆತು ಗಾಳಿಗೆ ಕಳ್ಳುಕುಡಿಸಿದಂತಾಗುತ್ತದೆ".[೬೮] ಎಂದು ಚಿತ್ರಿಸಿರುವ ರೀತಿ ವಿಶೇಷವಾಗಿದೆ.

ಮುಂದೆ ಲಿಂಗಣ್ಣ ನಾಯಕನ ಪಟ್ಟಾಭೀಷೇಕದ ಸಂದರ್ಭದಲ್ಲಿ ನಾಯಕರ ಮೆರವಣಿಗೆ ಆ ಸಂದರ್ಭದಲ್ಲಿ ನಡೆಯುವ ಧಾರ್ಮಿಕ ಆಚರಣೆಗಳ ಹಿನ್ನೆಲೆಯೂ ಈಕಾದಂಬರಿಯಲ್ಲಿನ ಕಾಣಸಿಗುತ್ತದೆ. "ಇಕ್ಕೆಲದಲ್ಲಿ ದಾಸಿಯರು ಚಾಮರವಿಕ್ಕುತ್ತಿರಲು, ಶ್ವೇತಛತ್ರದಡಿಯಲ್ಲಿ ನಡೆದು ಬಂದು ದೇವಾಲಯದ ಹೊರವಲಯದಲ್ಲಿ ನಿಲ್ಲಿಸಿದ ಪಟ್ಟದ ಆನೆಯ ಮೇಲಿನ ಸುವರ್ಣ ರತ್ನ ಖಚಿತವಾದ ಅಂಬಾರಿಯಲ್ಲಿ ಕುಳಿತು ಮೆರವಣಿಗೆ ಹೊರಟರು. ಅವರು ದೇವಾಲಯದಿಂದ ಹೊರಬಂದ ಕೂಡಲೆ ಅವರಿಗೆ ನೂರಾರು ಮಂದಿ ದೃಷ್ಟಿದೋಷ ನಿವಾರಣಾರ್ಥವಾಗಿ ಇಡಿಗಾಯಿಗಳ ಇಳೆ ತೆಗೆದ ಮೇಲೆ ಮೆರವಣಿಗೆ ಮೇಲು ದುರ್ಗದಿಂದ ಕೆಳದುರ್ಗದತ್ತ ಹೊರಟಿತು. ನಾಯಕರು ಏಕನಾಥೇಶ್ವರಿಯ ದೇವಾಲಯದ ಮುಂದಿನ ಕನಕವ್ವ ನಾಗತಿಯ ಕಂಬಕ್ಕೆ ಸಲ್ಲಿಸಬೇಕಾದ ಪೂಜೆಯನ್ನು ಸಲ್ಲಿಸಿ, ಅಲ್ಲಿಯೇ ಏಕನಾಥೇಶ್ವರಿ ಭೂತನಾಥೇಶ್ವರಿ ಗೋಪಾಲಸ್ವಾಮಿ ವಿನಾಯಕ ಮೊದಲಾದ ದೇವತೆಗಳ ಅರ್ಚಕರಿಂದ ರಾಜಾಶಿರ್ವಾದ ತೀರ್ಥ, ಪ್ರಸಾದಗಳನ್ನು ಸ್ವೀಕರಿಸಿ ಅಜ್ಜಿಯ ಬಾಗಲನ್ನು ದಾಟಿ ದುರ್ಗವನ್ನು ಇಳಿಯಲಾರಂಭಿಸಿದರು. ಆ ದಿನ ಪಟ್ಟಾಭೀಷೇಕೋತ್ಸವದೊಂದಿಗೆ ವೆಂಟರಮಣಸ್ವಾಮಿಯ ತೇರಿನ ಉತ್ಸವವೂ ಇದ್ದುದರಿಂದ ದಾರಿಯುದ್ದಕ್ಕೂ ಹತ್ತಾರು ಹಳ್ಳಿಯ ಜನ ನೆರೆದು ತಮ್ಮ ಹೊಸ ದೊರೆಗೆ ಜಯಘೋಷದ ಕಾಣಿಕೆ ಅರ್ಪಿಸಿತು".[೬೯] ಎಂಬಂತೆ ತ.ರಾಸು ಅವರು ಚಿತ್ರದುರ್ಗದ ನಾಯಕರ ಪಟ್ಟಾಭೀಷೇಕದ ಸಂದರ್ಭ ಚಿತ್ರಣವನ್ನು ಕೊಟ್ಟಿದ್ದಾರೆ.

'ತಿರುಗುಬಾಣ ಕಾದಂಬರಿಯಲ್ಲಿ ಭೂತನಾಥೇಶ್ವರ ದೇವರ ವರ್ಣನೆಯು ವಿಶೇಷವಾಗಿ ಕಂಡು ಬರುತ್ತದೆ. ಪಟ್ಟಾಭಿಷೇಕ ಪ್ರಭು ಲಿಂಗಣ್ಣ ನಾಯಕರಿಗಾದ ಅನ್ಯಾಯವನ್ನು ಕಂಡು ಉಗ್ರಚನ್ನವೀರ ಸ್ವಾಮಿಗಳು ಕೊರಗುವ ಮರಗುವ ಸಂದರ್ಭ ಬರುತ್ತದೆ. ಈ ಸಮಯದಲ್ಲಿ ಸ್ವಾಮಿಗಳ ಮೈಯನ್ನು ದಹಿಸುತ್ತಿದ್ದ ಉಗ್ರಭಾವನೆಗಳು ಕರಗಿ, ದುಃಖಿತರಾಗಿ ಕಣ್ಣೀರು ಸುರಿಸುತ್ತ, ಭೂತನಾಥೇಶ್ವರ ಸ್ವಾಮಿಯ ಮುಂದೆ ರೋಧಿಸುತ್ತಾರೆ. "ಶಂಭೋ ಶಂಭೋ ಶಂಕರಾ ಇದೆ ನಿನ್ನ ಬಯಕೆಯೇ? ಇದೇ– ಇದೇ ಈ ರಕ್ತಸ್ರೋತವೇ ನಿನ್ನ ಕರಣಾಲಹರಿಯೇ? ಈ ಕೊನೆಗಾಲದ ಅರ್ತನಾದವೇ ನಿನ್ನ ಅಭಯವಾಣಿಯೇ? ನಿನ್ನ ಪ್ರಜಯತಾಂಡವದ ಚಂಡ ಡಮರುವಿನ ಪ್ರಚಂಡ ಧ್ವನಿ ದಿಕ್ತಟಗಳ ನಿರ್ವೇದ ಮಾಡುವ

ಹೊತ್ತಿನಲ್ಲಿ ಕಲ್ಲಾಗಿ ಕುಳಿತುಕೊಳ್ಳಬೇಡ.. ಭೂತನಾಥ ಹೇಳು ಹೇಳು ಈಗೇನು ನಿನ್ನ ಅಪ್ಪಣೆ? ನಿನ್ನ ಅಪ್ಪಣೆ ಎಂದು ನಾಯಕರಿಗೆ ಶಾಂತಿಯನ್ನು ಬೋಧಿಸಿ ಅವರ ತಲೆ ಶೂಲದ ಮರದ ಮೇಲೆ ಜೋತಾಡುವಂತೆ ಮಾಡಿದೆ. ನಿನ್ನ ಅಪ್ಪಣೆ ನಿನ್ನ ಅಪ್ಪಣೆಯಂತೆ ಕರುಣೆಯ ಪಾಶಗಳಿಂದ ಪರಶುರಾಮಪ್ಪನವರ ಕೈಗಳನ್ನು ಬಿಗಿದು, ಅವರು ಕತ್ತಲು ಮನೆಯಲ್ಲಿ ಕೊಳೆಯುವಂತೆ ಮಾಡಿದೆ. ಅಹಿಂಸೆ – ಅಹಿಂಸೆ ದಯೆ – ದಯೆ ಎಂದು ಹೇಳಿ–ಹೇಳಿ ಭರಮಣ್ಣವರ ಕಾಲುಗಳಿಗೆ ಸರಪಳಿ ಬಿಗಿದೆ. ನಿನ್ನ ಅಪ್ಪಣೆ ನಿನ್ನ ಅಪ್ಪಣೆ ಇದೇನೆ ನಿನ್ನ ಅಭಯ ದಾನ? ಹೇಳು ಹೇಳು ಉತ್ತರ ಕೊಡು ಕಲ್ಲಾಗಬೇಡ ಮೂಕಪಶುವಿನಂತೆ ಕುಳಿತು ನೋಡಬೇಡ ಮೃತ್ಯುಂಜಯ ನಂಬಿ ಕರೆದರೆ ಓ ಎನ್ನದೆ ಶಿವನು ಎಂದ ಅಣ್ಣನವರ ವಾಣಿ ಸುಳ್ಳಾಗಬಾರದೆಂದಿದ್ದರೆ ಉತ್ತರ ಕೊಡು...[೨೦] ಎಂದು ಸ್ವಾಮಿಗಳು ಗದ್ಗದ ಕಂಠದಲ್ಲಿ ಕೇಳುತ್ತ ರೋಧಿಸುತ್ತ ಶಿವನ ಮುಂದೆ ಹಠವಿಡಿದು ಕೂಡುತ್ತಾರೆ. ಸರ್ವಾಧಿಕಾರಿ ಮುದ್ದಣ್ಣ ಮುಂದೆ ಉಗ್ರಚನ್ನವೀರ ಸ್ವಾಮಿಗಳನ್ನು ದುರ್ಗದಿಂದ ಗಡಿಪಾರು ಮಾಡುತ್ತಾನೆ.

ಮತ್ತೆ ತಿಮ್ಮಣ್ಣ ನಾಯಕನಿಗೆ ಸಿದ್ದರ ಅನುಗ್ರವಾಗುವಂತೆ ತನಗೂ ಯಾರಾದರೊಬ್ಬ ಸಿದ್ದರ ಅನುಗ್ರವಾಗಿ ತಾನೂ ಒಂದುರಾಜ್ಯದ ದೊರೆಯಾಗಬಾರದೇ ಎಂದು ಭರಮಣ್ಣ ಕನಸು ಕಾಣುತ್ತಿದ್ದ ಪ್ರಸಂಗದೊಂದಿಗೆ ಹೊಸ ಹಗಲು ಕಾದಂಬರಿ ಆರಂಭವಾಗುತ್ತದೆ. ಕನಸು ನನಸಾಗುವ ರೀತಿಯಲ್ಲಿ ಒಂದು ದಿನ ಮುರಘರಾಜೇಂದ್ರಸ್ವಾಮಿಗಳು ಬಂದು ಇವನಿಗೆ ಆಶೀರ್ವಾದ ಮಾಡುತ್ತಾರೆ. ಅದರಂತೆ ಭರಮಣ್ಣನಾಯಕ ದುರ್ಗದ ದೊರೆಯಾಗುತ್ತಾನೆ. ಈತನು ತನ್ನ ಕಾಲಾವಧಿಯಲ್ಲಿ ದೇವಾಲಯಗಳ ಜೀರ್ಣೋದ್ಧಾರಕ್ಕೆ ಹೆಚ್ಚಿನ ಮಹತ್ವ ಕೊಡುತ್ತಾನೆ. ನಗರದ ಉತ್ಸವಾಂಬ ದೇವಾಲಯವಂತೂ ಅದ್ಭುತ ಪ್ರಮುಖವಾಗಿ ಮೇಲೆ ನಿರ್ಮಾಣವಾಗುತ್ತದೆ. ಕಾಮಗೇತಿ ವಂಶದ ಇಮ್ಮಡಿ ಮದಕರಿನಾಯಕನ ಕಾಲದಲ್ಲಿ ಅವರ ಪುತ್ರೇಚ್ಚೇಯನ್ನು ಈಡೇರಿಸುವುದಕ್ಕಾಗಿ ಉಚ್ಚಶೃಂಗಿ ದುರ್ಗದಲ್ಲಿದ್ದ ಉತ್ಸವಾಂಬೆಯ ಉತ್ಸವ ಮೂರ್ತಿಯ ಚಿತ್ರದುರ್ಗಕ್ಕೆ ಬಿಜಯ ಮಾಡಿತು. ಆಗ ಆಕೆಗೆ ಶಾಶ್ವತವಾದ ಶಿಲಾಮಯವಾದ ದೇವಾಲಯವನ್ನು ಕಟ್ಟಿಸುವುದಾಗದೇ ಒಂದು ಮರದ ದೇವಾಲಯವನ್ನು ಕಟ್ಟಿಸಿ ಪ್ರತಿಷ್ಠಾಪಿಸಲಾಗಿತ್ತು. ಆ ಅರೆಕೊರೆಯಾದ ದೇವಾಲಯವನ್ನು ತನ್ನ ಆಳ್ವಿಕೆಯ ಕೀರ್ತಿ ಶಿಖರದಂತೆ ನಿರ್ಮಿಸಬೇಕು ಎಂದು ಭರಮಣ್ಣನಾಯಕ ಪ್ರಯತ್ನಪಡುತ್ತಿದ್ದ".[೨೧] ತಾನು ಅಂದುಕೊಂಡಂತೆ ಈ ಕಾರ್ಯವನ್ನು ನೆರವೇರಿಸಿದ್ದನು. ಸಕಲ ಧಾರ್ಮಿಕತೆಯಿಂದ ಸಂತುಷ್ಟನಂತೆ ಭರಮಣ್ಣ ನಾಯಕನು ಆಡಳಿತ ನಡೆಸಿದ ವಿವರ ವಿಜಯೋತ್ಸವ ಕಾದಂಬರಿಯಲ್ಲಿ ಕಾಣ ಸಿಗುತ್ತದೆ. ವಿಭಿನ್ನ ಜಾತಿ, ವರ್ಗಗಳ ಜನರ ಬದುಕಿನ ವಿಶೇಷ ಚಿತ್ರಣವನ್ನು ತ.ರಾ.ಸು ಅವರು ಈ ಕಾದಂಬರಿಯ ಮೂಲಕ

ನೀಡುತ್ತಾರೆ. ತಮ್ಮ ತಮ್ಮ ಧರ್ಮ ಜಾತಿಗನುಗುಣವಾಗಿ ಎಲ್ಲವು ಏಕತೆಯಿಂದ ಬದುಕುತ್ತಿದ್ದರೆಂಬುದನ್ನು ವಿದೇಶಿಯವನಾದ ಜಾನ್ ಮುಸ್ಲಿಂಳಾದ ಮೆಹರಾಬಾನು, ಮರಾಠೀಗನಾದ ಸಂತೋಜಿ ಹಾಗೂ ಹಿಂದುವಾದ ಭರಮಣ್ಣ ನಾಯಕರ ಬದುಕಿನೊಂದಿಗೆ ತೋರಿಸಿಕೊಟ್ಟಿದ್ದಾರೆ.

ಪ್ರಭುಗಳಿಗೆ ಧರ್ಮಕ್ಕೂ ವಿಶೇಷವಾದ ನಂಟು. ಧರ್ಮಾಚರಣೆಯ ಜನರ ಮೇಲೆ ದೊರೆಗಳಿಗೆ ಆಗಾಧ ಪ್ರೀತಿ ಅಷ್ಟೇಕೆ ಪ್ರತಿಯೊಂದು ಕಾಯಕ್ಕೂ ಧರ್ಮವನ್ನೇ ಅವಲಂಬಿಸಬೇಕಾದ ಅನಿವಾರ್ಯತೆ ಪ್ರಭುಗಳಿಗೆ ಇಂತಹ ವಿಚಾರ ಕಸ್ತೂರಿ ಕಂಕಣದಲ್ಲಿ ವೈಶಿಷ್ಟವಾಗಿ ಕಂಡು ಬರುತ್ತದೆ. ಈ ಕಾದಂಬರಿಯಲ್ಲಿ ಬರುವ ರಾಮಾಶಾಸ್ತ್ರಿ ಮತ್ತು ಯಜ್ಞನಾರಾಯಣ ಜೋಯಿಸರ ನಡುವೆ ನಡೆಯುವ ಈ ಸಂಭಾಷಣೆಯನ್ನು ನೋಡಿ "ಎಷ್ಟಾದರೂ ನಾನು ಪುರೋಹಿತ. ಅರಮನೆಯ ದೇವರ ಮನೆ ವಿಷಯವಲ್ಲದೆ ಬೇರೆನೂ ನನಗೆ ತಿಳಿಯದು. ನೀವಾದರೆ ಸದಾ ಅರಸರೊಂದಿಗೆ ಸುತ್ತಾಡುವ ರಾಜಪುರೋಹಿತರು ಆದ್ದರಿಂದ ಅವರ ಸಹವಾಸ ಹೇಗೆಂದು ನೀವೇ ಹೇಳಬೇಕು" "ಅರಸರು ಆಡಿದರೆ ಅರಗಿಳಿ, ಕಾಡಿದರೆ ಕಾಳಿಂಗಸರ್ಪ, ಅರಗಿಳಿಯ ನಲಿದಾಟ ಬೇಡವೆಂದರೂ ಕಾಳಿಂಗಸರ್ಪದೊಡನೆ ಕಾದಾಟಕ್ಕೆ ಸಿದ್ಧರಾಗಬೇಕು. ರಂಗಪ್ಪನಾಯಕರ ಸ್ನೇಹದಲ್ಲಿ ಎಷ್ಟು ಔದಾರ್ಯವಿದೆಯೋ ದ್ವೇಶದಲ್ಲಿ ಅಷ್ಟೇ ಪ್ರಬಲವಾದ ಹಾಲಾಹಲವಿದೆ. ಅದರೊಂದಿಗೆ ಸರಸವಾಡಲು ಯತ್ನಿಸಬೇಡಿ ಜೋಯಿಸರೇ ಬ್ರಾಹ್ಮಣರಾಗಿ ನಿಮ್ಮ ಹಿತೈಷಿಯಾಗಿ ಹೇಳುತ್ತೇನೆ ಅರಸರ ಮುನಿಸಿದ್ರೆ ಯಾವ ದೇವರೂ ಅಡ್ಡಿಯಾಗಲಾರ "ಅದು ಬ್ರಾಹ್ಮಣರು ಆಡುವ ಮಾತಲ್ಲ ವೆಂಕಪ್ಪಯ್ಯ ಅರಸು ಪದವಿ ನೀರ ಮೇಲಿನ ಗುಳ್ಳೆ ಅದೆಂದೂ ದೈವಕ್ಕಿಂತ ಹಿರಿದಾಗಲಾರದು"[೨೨] ಎಂದು ನಾರಾಯಣ ಜೋಯಿಸರು ನುಡಿಯುತ್ತಾರೆ. ಮುಂದೊಂದು ಸಂದರ್ಭದಲ್ಲಿ ಇದೇ ಜೋಯಿಸರು ಹೇಳುವ ಈ ಮಾತನ್ನು ನೋಡಿ "ಸತ್ಯವನ್ನೇ ನುಡಿಯಬೇಕು, ಧರ್ಮವನ್ನು ಆಚರಿಸಬೇಕು ಎಂದು ನನಗೆ ಋಷಿಗಳ, ಹಿರಿಯರ ಅಪ್ಪಣೆ ಅದರಂತೆ ನಡೆಯುವುದು ಹೇಗೆ ನನ್ನ ಧರ್ಮವೋ, ಹಾಗೆ ನಮ್ಮ ವರ್ತನೆಯ ಬಗ್ಗೆ ಆಗ್ರಹ ಅನುಗ್ರಹ ತೋರಿಸುವ ಅಧಿಕಾರ ಪ್ರಭುಗಳದಾಗಿದೆ. ಧರ್ಮಕ್ಕೆ ತಲೆಬಾಗಿದಂತೆಯೇ ತಮ್ಮ ಆಜ್ಞೆಗೂ ತಲೆ ಬಾಗುತ್ತೇನೆ"[೨೩] ಎಂದು ಹೇಳುವ ಮಾತಿನಲ್ಲಿ ದೊರೆತನ ಮತ್ತು ಧರ್ಮತನಗಳ ಅವಿನಾಭಾವ ಸಂಬಂಧದ ರೀತಿಯನ್ನು ಕಾಣಬಹುದಾಗಿದೆ.

ಚಿತ್ರದುರ್ಗದ ದೊರೆಗಳ ಮತ್ತು ಜನತೆಯ ಅವಿನಾಭಾವದ ಸಂಬಂಧವಿರುವುದು ಆ ನೆಲದ ಪ್ರಮುಖ ದೇವಾಲಯಗಳಾದ ಸಂಪಿಗೆ ಸಿದ್ದೇಶ್ವರ ಏಕನಾಥೇಶ್ವರಿ ಹಾಗೂ ಉತ್ಸವಾಂಬಾ ದೇಗುಳಗಳೊಂದಿಗೆ ಈ ದೇವಾಲಯಗಳಲ್ಲೇ ದೊರೆ ಮತ್ತು ಜನರ ಧಾರ್ಮಿಕ ಆಚಾರ ವಿಚಾರಗಳ ಸಮ್ಮೇಳನವಾಗುತ್ತಿತ್ತು. ಇದರ ಚಿತ್ರಣವನ್ನು ದುರ್ಗಾಸ್ಥಮಾನ

ಕಾದಂಬರಿಯಲ್ಲಿ ಕಾಣಬಹುದಾಗಿದೆ. ನಾಯಕರ ಪಟ್ಟಾಭೀಷೇಕ ಸಮಾರಂಭವು ಸಂಪಿಗೆ ಸಿದ್ದೇಶ್ವರನ ಸಭಾಂಗಣದಲ್ಲಿ ನೆರವೇರುತ್ತಿತ್ತು. "ಶಕವರ್ಮ ೧೬೭೬ ನೇ ಬಾವಸಂವತ್ಸರದ ಆಷಾಢ ಶುದ್ಧ ದ್ವಾದಶಿಯ ದಿನ-ಸಂಪಿಗೆ ಸಿದ್ಧೇಶ್ವರನ ದೇವಾಲಯದ ಮುಂದಿನ ಪಟ್ಟಾಭಿಷೇಕ ಅಂಗಳದಲ್ಲಿ ಮಣಿಕಚಿತ ದಿವ್ಯ ಹೇಮಸಿಂಹಾಸನದ ಮೇಲೆ ಪುರೋಹಿತರು ನಿಷ್ಕರ್ಮಿಸಿದ ಶುಭಮಹೋರ್ತದಲ್ಲಿ ಹೊನ್ನು ಮಡಿಯುಟ್ಟು ರತ್ನ ಕಿರೀಟ ತೊಟ್ಟು ಬಾಲರವಿಯಂತೆ ಬೆಳಗುತ್ತಾ ಸಿದ್ದರು ಅನುಗ್ರಹಿಸಿದ ದೆಸೆಗಟ್ಟಿನ ಧೂಳಿತ ಉತ್ಸವಾಂಬೆಯ ಭಂಡಾರವನ್ನು ಲಲಾಟದಲ್ಲಿ ಧರಿಸಿ, ಕೈಯಂಬು ಹಿಡಿದು, ವಿಪ್ರಸ್ತೋಮ ಗಂಭೀರ ಧ್ವನಿಯಲ್ಲಿ ರಾಜ್ಯಾಭಿಷೇಕದ ಮಂತ್ರೋಚ್ಚಾರಣೆ ಮಾಡುತ್ತಿರಲು ದುರ್ಗದ ಅರಸು ಪೀಠಕ್ಕೆ ರಕ್ಷೆಯೆಂಬಂತೆ ರಾಜಗುರುಗಳಾದ ಶ್ರೀಮುರಗೀಸ್ವಾಮಿಗಳು, ಕೂಡಲೇ ಶೃಂಗೇರಿಯ ಶ್ರೀ ಶಾರದಾ ಪೀಠದ ಶ್ರೀಗಳು ರಜತ ಪೀಠದಲ್ಲಿ ಮಂಡಿಸಿರಲು ಮದಕರಿನಾಯಕರು ಪಟ್ಟಾಭೀಷೆಕ್ತರಾದರು. ವಿಪ್ರೋತ್ತಮರ ವೇದಾಶೀರ್ವಾದದ ಧ್ವನಿಗಿಂತ ಹತ್ತು ಪಟ್ಟುಮಿಗಿಲಾಗಿ ಉಚ್ಚಸ್ವರದಿಂದ ಜಯಘೋಷ ಕೂಗಿದ ಜನಸ್ಥೋಮ ಹೊಸ ಅರಸರಿಗೆ ಜನತಾಶೀರ್ವಾದ ನೀಡಿತು"[೭೪] ಎಂದು ತರಾಸು ಅವರು ಮದಕರಿನಾಯಕರಿಗೆ ಪಟ್ಟಾಭೀಷೇಕದ ಸಂದರ್ಭದಲ್ಲಿ ನೆರವೇರಿದ ಧಾರ್ಮಿಕ ವಿಧಿ ವಿಧಾನಗಳ ಚಿತ್ರಣವನ್ನು ಕೊಡುತ್ತಾರೆ.

ದೊರೆ ಮನೆಗಳಲ್ಲಿ ಊರ ಮನೆಗಳಲ್ಲಿ ಅತ್ಯಂತ ಉತ್ಸಾಹದಿಂದಲೇ ಹಬ್ಬ ಹರಿದಿನಗಳ ಉತ್ಸವಗಳು ಜರುಗುತ್ತಿದ್ದವು. ಶ್ರಾವಣ ಮಾಸದ ನಾಗರಚೌತಿ-ಪಂಚಮಿ ಹಬ್ಬಗಳನ್ನು ಮಂಗಳಗೌರಿ ಗೋಕುಲಾಷ್ಟಮಿ ಹಬ್ಬಗಳನ್ನು ಆಚರಿಸಿ, ಭಾದ್ರಪದ ಮಾಸದ ಗೌರಿ-ಗಣಪತಿಯ ಪೂಜೆಗೆ ಜನರು ಸಿದ್ದರಾದರೆಂದು ವಿವರಿಸುವ ತ.ರಾ.ಸು ಅವರು ವಿನಾಯಕ ಚೌತಿ ಹಬ್ಬದ ವಿಶೇಷತೆಯೂ ದುರ್ಗದಲ್ಲಿ ಹೇಗೆ ಸಡಗರ-ಸಂಭ್ರಮದಿಂದ ಆಚರಿಸಲ್ಪಡುತ್ತಿತ್ತು ಎಂಬುದನ್ನು ಕುರಿತು ಬಣ್ಣಿಸುತ್ತಾರೆ. "ಚಿತ್ರದುರ್ಗದ ಸಿಂಹಾಸನವನ್ನು ಮೂವತ್ತು ಮೂರು ವರ್ಷಗಳ ಕಾಲ ಅವಿಚ್ಚಿನ್ನವಾಗಿ ಆಳಿ ದುರ್ಗದ ಖ್ಯಾತಿಯನ್ನು ಹಳ್ಳಿಯಿಂದ ದಿಲ್ಲಿಯವರೆಗೂ ಹಬ್ಬಿಸಿದ ಭರಮಣ್ಣನಾಯಕರು, ಎಲ್ಲಾ ಮತದ ಮಠದ ಗುರುಗಳ ಬಗ್ಗೆಯೂ ತಮಗಿದ್ದ ಭಕ್ತಿಯ ದ್ಯೋತಕವಾಗಿ ಆ ದಿನ ಚಿತ್ರದುರ್ಗದಲ್ಲಿದ್ದ ಸಕಲ ಮಠಗಳ ಗುರುಗಳು ತಮ್ಮ ಆಶೀರ್ವಾದವೆಂದು ಅರಮನೆಗೆ ಕಜ್ಜಾಯವನ್ನು ತಂದೊಪ್ಪಿಸಬೇಕೆಂದು ಕಟ್ಟಳೆ ಮಾಡಿದ್ದರು. ಅವರ ಕಾಲದಲ್ಲಿ ಆರಂಭವಾದ ಈ ಶುಭ ಸಂಪ್ರದಾಯಕ್ಕೆ ಜನರ ಉತ್ಸಾಹವೂ ಬೆರೆತು ಶ್ರೀಮಠಗಳ ಗುರುಗಳಿರಲಿ, ನಗರದ ಹಿರಿಯರೆಲ್ಲರೂ ತಮ್ಮ ಮನೆಗಳಲ್ಲಿ ಪೂಜೆ ಮುಗಿಸಿದವರೇ ಮನೆಗೊಬ್ಬ ಮುತ್ತೈದೆ ಹಿರಿಯರು ಬಂದು ಅರಮನೆಗೆ 'ಮಡಿಕಜ್ಜಾಯ' ದ ಕಾಣಿಕೆ ಸಲ್ಲಿಸಿ ಅರಮನೆಯವರು ಮುತ್ತೈದೆಯವರಿಗೆ ಕೊಡುತ್ತಿದ್ದ ಬಾಗೀನ ಹಿರಿಯರಿಗೆ ಕೊಡುತ್ತಿದ್ದ ಗಣಪತಿ ಪ್ರಸಾದವನ್ನು ಸ್ವೀಕರಿಸಿ ಹೋಗುತ್ತಿದ್ದರು. ಆ ದಿನ ಏಕನಾಥೇಶ್ವರಿಯ ಬಾಗಲಿನ್ನು

ಜನ ಪ್ರೀತಿಯಿಂದ ಅಜ್ಜಿಯ ಬಾಗಿಲು ಎಂದು ಕರೆಯುತ್ತಿದ್ದುದು ಕೋಟೆ ಸಾಲಿನ ಹೊರವಲಯದಲ್ಲಿದ್ದ ಸಯಂಭೋ ನಾನಂದಗಣಪತಿಗೆ ನಡೆಯುತ್ತಿದ್ದ ವಿಶೇಷ ಪೂಜೆ ಸಹಸ್ರಮೋದಕ ಹೋಮಗಳನ್ನು ನೋಡಿ ಪಂಚಾಮೃತ ಪಂಚಕಜ್ಜಾಯಗಳ ಪ್ರಸಾದವನ್ನು ಸ್ವೀಕರಿಸಲು ಸಾವಿರಾರು ಜನ ಕಿಕ್ಕಿರಿಯುತ್ತಿದ್ದರು".[೭೫] ಎಂಬಂತೆ ಮಹಾಗಣಪತಿ ಹಬ್ಬದ ವೈಭೋಗದ ಚಿತ್ರಣವನ್ನು ತ.ರಾ.ಸು. ಕೊಡುತ್ತಾರೆ. ಅರಮನೆಯವರಿಗೆ ಹಾಗೂ ಊರ ಜನತೆಗೆ ಈ ಒಂದು ಹಬ್ಬವು ವಾಡಿಕೆಯಾಗಿತ್ತೆಂದು ಹೇಳಿದ್ದಾರೆ.

ಹೈದರಾಲಿಯ ಸೇನೆ ದುರ್ಗವನ್ನು ಮುತ್ತಿದಾಗ, ದುರ್ಗದ ಮದಕರಿನಾಯಕ ಹಾಗೂ ಅವನ ಸೇನೆಯು ಹೋರಾಟಕ್ಕೆ ಅಣಿಯಾಗುವ ಸಮಯದಲ್ಲಿ ನಗರದ ಉತ್ಸವಾಂಬೆಯಲ್ಲಿ ದೀನತೆಯಿಂದ ಬೇಡಿಕೊಳ್ಳುವ ಚಿತ್ರಣವನ್ನು ನೋಡುತ್ತೇವೆ. "ಬೀದಿಯಿಂದ ದೇವಾಲಯದ ಮಂಟಪದ ವರೆಗೂ ಇಬ್ಬದಿಯಲ್ಲೂ ದಿವಟಿಗೆಗಳನ್ನು ಹಿಡಿದವರೊಂದಿಗೆ ಸಶಸ್ತ್ರ ಸೈನಿಕರು ನಿಂತು ದೇವಿಯ ನಿಗ್ರಹಾನುಗ್ರಹಶಕ್ತಿಯೇ ಮೈತಳೆದಂತಿದ್ದರು. ದೇವಿಯ ಗರ್ಭಗೃಹದ ಮುಂಭಾಗದಲ್ಲಿ ಕೆಂಪು ರೇಶಿಮೆಯ ಮುಗುಟ ಉಟ್ಟು ಅದೇ ವರ್ಣದ ಶಲ್ಯವನ್ನು ಮೈಮೇಲೆ ಹೊದ್ದು ನೆತ್ತಿಯ ಮೇಲೆ ಮುತ್ತಿನೆಳಗಳಿಂದ ಅಲಂಕೃತವಾದ ರಕ್ತವರ್ಣದ ಮುಂಡಾಸನ್ನು ಧರಿಸಿದ ನಾಯಕರು ತಮ್ಮಲಿನವರು ಮಡದಿಯರು, ಮಗ ಭರಮಣ್ಣ ನಾಯಕ, ಸೋದರ ಪ್ರಧಾನ ಪರಶುರಾಮನಾಯಕ, ಇತ್ತ ನಾಯಕ ಪರಿವಾರದವರೊಂದಿಗೆ ಕೈಮುಗಿದು ನಿಂತಿದ್ದರು- ದೈವಿ ಅನುಗ್ರಹವನ್ನು ಬೇಡುವ ಪುರುಷ ಪೌರುಷದಂತೆ ಗರ್ಭಗುಡಿಯೊಳಗ ಮಗ ಗಂಡುಗೊಡಲಿಯ ಪರಶುರಾಮನೊಂದಿಗೆ ನಿಂತ ಶ್ರೀ ರೇಣುಕಾ ಉತ್ಸವಾಂಬೆಗೆ ಪ್ರಧಾನ ಅರ್ಚಕರು ಸಹಸ್ರ ನಾಮಪೂರ್ವಕವಾಗಿ ಕುಂಕುಮಾರ್ಚನೆ ಮಾಡುತ್ತಿದ್ದರು. ಮತ್ತಿಬ್ಬರು ಪುಷ್ಪಾರ್ಚಣೆ ಮಾಡುತ್ತಿದ್ದರು".[೭೬] ಹೀಗೆ ಉತ್ಸವಾಂಬೆಯ ಪೂಜೆಯನ್ನು ಮುಗಿಸಿಕೊಂಡು ಉಟ್ಟಬಟ್ಟೆಯಲ್ಲಿಯೇ ಮಗನೊಂದಿಗೆ ಸುಬ್ರಮಣ್ಯ ದೇವಸ್ಥಾನದವರೆಗೂ ಬರುವ ಮದಕರಿನಾಯಕನು ಅಲ್ಲಿನ ಪೂಜಾ ಕೈಂಕರ್ಯವನ್ನು ಮುಗಿಸಿಕೊಂಡು ಯುದ್ಧಕ್ಕೆ ಸಿದ್ದನಾಗುತ್ತಾನೆ. ನೆರೆದ ಜನತೆ ಜಯಘೋಷ ಹಾಕುತ್ತದೆ.

ಹೀಗೆ ಧರ್ಮ ಸಂಬಂಧಿಯಾದ ಆಚಾರ-ವಿಚಾರಗಳು, ಹಬ್ಬ ಹರಿದಿನಗಳಲ್ಲಿ ನಡೆಯುವ ಉತ್ಸವಗಳು, ವಿವಿಧ ದೇವಾಲಯಗಳಲ್ಲಿ ನಡೆಯುವ ಪೂಜಾ ವಿಧಾನಗಳ ಚಿತ್ರಣವನ್ನು ತ.ರಾಸು. ಅವರು ಐತಿಹಾಸಿಕ ಕಾದಂಬರಿಗಳಲ್ಲಿ ಸಂದರ್ಭಕ್ಕನುಗುಣವಾಗಿ ವಿಶೇಷ ರೀತಿಯಲ್ಲಿ ಚಿತ್ರಿಸಿರುವುದನ್ನು ಕಾಣುತ್ತೇವೆ. ಆ ಮೂಲಕ ಯಾವುದೇ ಮತ ಪಂಥ ಬೇದಗಳಿಲ್ಲದೆ ದೊರೆಮನೆಯವರು, ಊರಮನೆಯವರು ಇಂತಹ ಧಾರ್ಮಿಕ ಉತ್ಸವಗಳಲ್ಲಿ ಪಾಲ್ಗೊಳ್ಳುವುದರ ಮೂಲಕ ತಮ್ಮ ಧರ್ಮ ಸಹಿಷ್ಣತೆಯನ್ನು ಮೆರೆಯುತ್ತಿದ್ದರೆಂಬುದನ್ನು ತಿಳಿಸುವ ಪ್ರಯತ್ನವನ್ನು ತ.ರಾಸು. ಅವರು ಮಾಡಿದ್ದಾರೆನ್ನಬಹುದು.

**ಇ) ಸಾಮಾಜಿಕ ವ್ಯವಸ್ಥೆ :**

ಪ್ರಾಚೀನ ಕಾಲದ ಸಾಮಾಜಿಕ ಜೀವನವನ್ನು ತಿಳಿಯಲು ಆಯಾಕಾಲದ ಶಾಸನಗಳು, ಸಾಹಿತ್ಯಗಳು ಪ್ರಮುಖ ಆಕರಗಳಾಗಿ ಕಾಣುತ್ತವೆ. ಈ ಹಿನ್ನೆಲೆಯನ್ನು ಗಮನಿಸಿದಾಗ ಎಲ್ಲ ಕಾಲಕ್ಕೂ ಪ್ರಭುವರ್ಗ ಮತ್ತು ಶ್ರಮಿತವರ್ಗವೆಂಬ ಎರಡು ವರ್ಗಗಳಿದ್ದುದು ಗೋಚರಿಸುತ್ತದೆ. ಇದು ಜಾತಿ, ವರ್ಣ ಹಾಗೂ ವರ್ಗ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ರಚನೆಗೊಂಡ ಸಾಮಾಜಿಕ ವ್ಯವಸ್ಥೆಯ ದ್ಯೋತಕವಾಗಿದೆ. ಪ್ರಭುವರ್ಗದಲ್ಲಿ ರಾಜ, ಪುರೋಹಿತ ಹಾಗೂ ಅಧಿಕಾರಿಗಳು ಪ್ರಮುಖ ಪಾತ್ರವಹಿಸಿದ್ದು ಕಾಣಸಿಗುತ್ತದೆ. ಹಾಗೆಯೇ ವಿವಿಧ ವೃತ್ತಿಗಳನ್ನು ಅನುಸರಿಸುವ ಜನಸಮುದಾಯದವರು ಈ ಎರಡು ವರ್ಗಗಳ ಮಧ್ಯದಲ್ಲಿ ವ್ಯಾಪಾರಿ ವರ್ಗದವರನ್ನು ಕಾಣಬಹುದು. ಇಂತಹ ಸಾಮಾಜಿಕ ವ್ಯವಸ್ಥೆ ಬಹುಪ್ರಾಚೀನ ಕಾಲದಿಂದಲೂ ಮುಂದುವರೆಯುತ್ತ ಬಂದಿರುವುದನ್ನು ನೋಡುತ್ತೇವೆ. ಆದರೆ ಇಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಹಲವು ಪರಿವರ್ತನೆಗಳಾಗಿದ್ದರೂ ಹಿಂದಿನ ವ್ಯವಸ್ಥೆಯೇ ಬೇರೆ ಸ್ವರೂಪದಲ್ಲಿ ಜೀವಂತವಾಗಿರುವುದನ್ನು ಕಾಣುತ್ತೇವೆ. ಅದೇನೆ ಇರಲಿ ಆಯಾ ವ್ಯವಸ್ಥೆ, ವರ್ಗ, ಜಾತಿಗಳಿಂದ ಉಂಟಾಗುವ ನೋವಿನ ನೆಲೆಗಳು ಮಾತ್ರ ವಿಭಿನ್ನವಾಗಿರಲು ಸಾಕು. ಇದು ಎಲ್ಲ ಕಾಲಕ್ಕೂ ಅನ್ವಯಿಸುವ ಮಾತಾಗಿದೆ. ಈ ದೃಷ್ಟಿಯಿಂದ ತ.ರಾ.ಸು. ಅವರು ಅಂದಿನ ಸಮಾಜದ ಬದುಕನ್ನು ಇಂದಿನ ಸಮಾಜದಲ್ಲಿರಿಸಿಕೊಂಡು ಚಿಂತಿಸುವ ಕ್ರಮವಂತೂ ಅವರ ಸಾಹಿತ್ಯದಲ್ಲಿ ಅದ್ಭುತವಾಗಿದೆ. ಅವರ ಈ ಸಂವೇದನೆ ಅವರ ಸಾಮಾಜಿಕ ಕಾದಂಬರಿಗಳಂತೆ ಐತಿಹಾಸಿಕ ಕಾದಂಬರಿಗಳಲ್ಲೂ ಎದ್ದುಕಾಣುವ ಪ್ರಮುಖ ಸಂಗತಿಯಾಗಿದೆ. ಯಾಕೆಂದರೆ, ತ.ರಾ.ಸು. ಎಲ್ಲರೂ ತಿಳಿದಂತೆ ಒಬ್ಬ ಆದರ್ಶವಾದಿ ಹಾಗೂ ಭಾವಜೀವಿ. ಅವರು ಸಮಾಜದ ನಿರ್ಜೀವತೆಯನ್ನು ಹಾಗೂ ಡಾಂಭೀಕತೆಯನ್ನು ತಮ್ಮ ಸೃಜನಶೀಲ ಸಾಹಿತ್ಯದ ಮೂಲಕ ಅಭಿವ್ಯಕ್ತಗೊಳಿಸಿದವರಾಗಿದ್ದಾರೆ. "ಸಾಹಿತ್ಯವು ಸಾಮಾಜಿಕ ಕ್ರಾಂತಿಯ ಹರಿಕಾರನಾಗಬೇಕು ಎಂಬ ದೃಢಸಂಕಲ್ಪದ ಪ್ರಗತಿಶೀಲ ಪಂಥದ ಅತಿರಥರಲ್ಲಿ ತ.ರಾ.ಸು. ಒಬ್ಬರಾದರೂ, ಅವರ ಚೇತನಕ್ಕೆ ಆ ಒಂದು ಪಂಥ ಸಾಲಲಿಲ್ಲ. ಚಿತ್ರದುರ್ಗದಲ್ಲಿನ, ಕನ್ನಡ ನಾಡಿನಲ್ಲಿನ ತೀವ್ರ ಅಭಿಮಾನ ಅವರನ್ನು ಐತಿಹಾಸಿಕ ಕಾದಂಬರಿಗಳ ಕ್ಷೇತ್ರಕ್ಕೆ ಕರೆದೊಯ್ದಿತು. ಇಲ್ಲೊಂದು ವಿಲಕ್ಷಣ ಮಿಲನ ಅವರ ಕಾದಂಬರಿಗಳಿಗೆ ಅಸಾಧಾರಣ ಶಕ್ತಿಯನ್ನು ನೀಡಿತು. ಐತಿಹಾಸಿಕ ಕಾದಂಬರಿ ಬರೆಯುವಾಗ ತ.ರಾ.ಸು. ಭೂತಕಾಲದ ಬಾಳಿನ ಘಟನೆಗಳನ್ನು ರೀತಿಗಳನ್ನು ವಾಸ್ತವವಾಗಿ ತಿಳಿಯಲು ಅಸಾಧಾರಣ ಶ್ರಮವಹಿಸಿದರು, ಸಂಶೋಧನಕಾರರಾದರು. ಆ ಕ್ಷೇತ್ರಗಳ ತಜ್ಞರ ಕಣ್ಣಿಗೇ ಬೀಳದಿದ್ದ ದಾಖಲೆಗಳನ್ನು ಬೆಳಕಿಗೆ ತಂದರು. ಇದರಿಂದ ಅವರ ಐತಿಹಾಸಿಕ ಕಾದಂಬರಿಗಳಲ್ಲಿ ಬಳಸಿಕೊಂಡ ವಿವರಗಳು ಆಧಾರ ಹಿತವಾದಂತಾಯಿತು. ಆದರೆ, ಕಟ್ಟುನಿಟ್ಟಾದ ವಾಸ್ತವಿಕತೆಯನ್ನು

ವರಿಸಿದ ಪ್ರಗತಿಶೀಲ ಪಂಥದ ನೇತಾರರಲ್ಲಿ ಅವರು ಒಬ್ಬರಾದುರೂ ಹೃದಯದಲ್ಲಿ ಅವರು 'ರೊಮ್ಯಾಂಟಿಕ್'. ಅದ್ಭುತ ಸಾಹಸಗಳಲ್ಲಿ ದೈತ್ಯ ವ್ಯಕ್ತಿತ್ವದ ಮನುಷ್ಯರಲ್ಲಿ ಅವರಿಗೆ ಆಕರ್ಷಣೆ. ಹೀಗಾಗಿ ಅವರ ಐತಿಹಾಸಿಕ ಕಾದಂಬರಿಗಳ ಮುಖ್ಯಪಾತ್ರಗಳೆಲ್ಲ ಪೌರಾಣಿಕ ವೀರರಂಥವರು... ಅವರ ಕಡೆಯ ಕಾದಂಬರಿ 'ದುರ್ಗಾಸ್ತಮಾನ'ದ ಮದಕರಿನಾಯಕನವರೆಗೆ ಎಲ್ಲರೂ ಅಸಾಮಾನ್ಯ. ಅತ್ಯುತ್ಕಟ ರಾಗ, ಭಾವಗಳ ದೈತ್ಯರು. ಅವರು ಆರಿಸಿಕೊಂಡ ಯುಗದ ಘರ್ಷಣೆಗಳು ಇಂತಹ ವ್ಯಕ್ತಿಗಳಲ್ಲಿ ಮೂರ್ತಿ ಮತ್ತಾಯಿತು. ಇವರ ಐತಿಹಾಸಿಕ ಕಾದಂಬರಿಗಳ ಅಸಾಧಾರಣ ಜನಪ್ರಿಯತೆಗೆ ಇದೊಂದು ಮುಖ್ಯಕಾರಣ."[೭೭] ಎಂದು ಎಲ್.ಎಸ್. ಶೇಷಗಿರಿರಾವ್ ಅವರು ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳ ಜೀವಂತಿಕೆಯ ಹಿನ್ನೆಲೆಯಲ್ಲಿ ಹೇಳಿದ ಮಾತುಗಳು ಉಲ್ಲೇಖಾರ್ಹಯೆನಿಸಿವೆ. ಈಗ ಅವರ ಐತಿಹಾಸಿಕ ಕಾದಂಬರಿಗಳಲ್ಲಿನ ಸಾಮಾಜಿಕ ಚಿತ್ರಣವನ್ನು, ಅವರು ಸೃಷ್ಟಿಸಿದ ಪುರುಷ ಹಾಗೂ ಮಹಿಳಾ ಪಾತ್ರಗಳ ಜೀವಂತಿಕೆಯೊಂದಿಗೆ ಕಂಡುಕೊಳ್ಳುವ ಪ್ರಯತ್ನ ಮಾಡಬಹುದಾಗಿದೆ.

**೧. ಪುರುಷ :**

*** ನೃಪತುಂಗ :**

ರಾಷ್ಟ್ರಕೂಟ ದೊರೆ ಅಮೋಘವರ್ಷ ನೃಪತುಂಗನನ್ನು ತ.ರಾ.ಸು. ಅವರು ಒಬ್ಬ ಆದರ್ಶ ವ್ಯಕ್ತಿಯಂತೆ ಚಿತ್ರಿಸಿದ್ದಾರೆ. ತಮ್ಮ 'ನೃಪತುಂಗ' ಎಂಬ ಕಾದಂಬರಿಯಲ್ಲಿ ನೃಪತುಂಗನು ರಾಜಧರ್ಮ, ಪ್ರಜಾಧರ್ಮ ಹಾಗೂ ವಿಶ್ವಧರ್ಮದ ಪರಿಪಾಲಕನಾಗಿ ಕಾಣುತ್ತಾನೆ. "ಕನ್ನಡ ನಾಡಿನ ಆದರ್ಶ ದೊರೆ, ಆದರ್ಶ ತಂದೆ, ಆದರ್ಶ ಪತಿ ಎಲ್ಲಕ್ಕಿಂತ ಹೆಚ್ಚಾಗಿ ಆದರ್ಶ ಮಾನವನೊಬ್ಬನ ಚಿತ್ರವನ್ನು, ನೃಪತುಂಗನ ಜೀವನದಲ್ಲಿ ಚಿತ್ರಿಸಲು ಈ ಕಾದಂಬರಿಯಲ್ಲಿ ಯತ್ನಿಸಿದ್ದೇನೆ."[೭೮] ಎಂದು ತ.ರಾ.ಸು. ಅವರು ತಮ್ಮ ಮುನ್ನುಡಿಯಲ್ಲಿ ಹೇಳಿದ ಮಾತಿನಂತೆ ನಡೆದುಕೊಂಡಿದ್ದಾರೆ. ಧರ್ಮ ಸಹಿಷ್ಣುಗುಣದ ನೃಪತುಂಗನ ತನ್ನ ರಾಜ್ಯದಲ್ಲಿ ಸಕಲಧರ್ಮಿಯರಿಗೂ ಶಾಂತಿಯಿಂದ ಬದುಕಲು ಅವಕಾಶ ಕಲ್ಪಿಸಿದ್ದನೆಂಬುದು ಗಮನಾರ್ಹ ವಿಚಾರವಾಗಿದೆ. "ಚಕ್ರವರ್ತಿಗಳ ಈ ವಿಶಾಲ ಧರ್ಮದೃಷ್ಟಿಯಿಂದಾಗಿಯೇ, ಸಕಲ ಧರ್ಮೀಯರೂ ನಿಶ್ಚಿಂತೆಯಿಂದ ರಾಜಧಾನಿಯಲ್ಲಿ ಬಂದು ನೆಲಸುವಂತಾಗಿ ಮಾನ್ಯಖೇಟ ಹತ್ತಾರು ಬಣ್ಣದ ಸುಂದರ, ಪ್ರಫುಲ್ಲ ಪುಷ್ಪಗಳಿಂದ ತುಂಬಿದ ಉದ್ಯಾನದಂತಿತ್ತು. ಖಾಜಿ ಸೈಯದ್ ಇಮಾಯ ಆ ಉದ್ಯಾನದ ಒಂದು ಪರಿಮಳ ಪುಷ್ಪ."[೭೯] ಎಂಬಂತೆ ತ.ರಾ.ಸು. ಅವರು ಪರಧರ್ಮ ಸಹಿಷ್ಣುಗುಣದ ಚಿತ್ರಣವನ್ನು ಕೊಟ್ಟಿದ್ದಾರೆ. ಗುರು ಜಿನಸೇನಾಚಾರ್ಯರ ಮಾರ್ಗದರ್ಶನದಂತೆ ನೃಪತುಂಗನು ನಡೆದುಕೊಳ್ಳುತ್ತಾನೆ. "ನಿನಗಾಗಿ ಪ್ರಾಣತ್ಯಾಗ ಮಾಡಿದವರನ್ನು ಮರೆಯಬೇಡ. ಅರಸೊತ್ತಿಗೆ ನಿತ್ಯ ಸುಖಸಮಾರಾಧನೆಯ ಸುಪ್ಪತ್ತಿಗೆಯಲ್ಲ, ಪ್ರಜೆಗಳ, ವೀರಭಟರ ತ್ಯಾಗದ ಹಾಲಿನಿಂದ ಬೆಳೆದ ರಾಜಶರೀರ ಅವರ ಸೇವೆಗೆ

ಮೀಸಲಾಗಬೇಕು. ರಾಜಮಕುಟ ಆ ಸೇವಾವ್ರತದ ರತ್ನ ಕಂಕಣ. ನಿತ್ಯ ನಿತ್ಯ ನೆನಪಿರಲಿ – ನಿನಗಾಗಿ ಒಬ್ಬನು ಜೀವಪಿತ್ರ, ಅಖಂಡ ಪ್ರಜಾಕೋಟಿಗಾಗಿ ಸಮಯ ಬಂದಾಗ ಪ್ರಾಣಕೊಡಲು ನೀನು ಸಿದ್ಧವಿರು."[೮೦] ಎಂಬ ಜಿನಸೇನಾಚಾರ್ಯರ ಮಾತಿಗನುಗುಣವಾಗಿ ರಾಜ್ಯಭಾರವನ್ನು ನಡೆಸುತ್ತಾನೆ. ತನ್ನ ದೇಶದ ಪ್ರಜೆಗಳ ಕ್ಷೇಮಕ್ಕಾಗಿ ಕೊಲ್ಲಾಪುರದ ಮಹಾಲಕ್ಷ್ಮೀಗೆ ಅಂಗುಲಿದಾನ ಮಾಡಿದ ಧೀಮಂತ ವ್ಯಕ್ತಿತ್ವ ನೃಪತುಂಗ ಚಕ್ರವರ್ತಿಯದಾಗಿದೆ. ಆತನ ವ್ಯಕ್ತಿತ್ವದ ಹಿರಿತನವನ್ನು ಕಾದಂಬರಿಯುದ್ದಕ್ಕೂ ಕಾಣುತ್ತೇವೆ.

**ಕೃಷ್ಣ :**

ಕೃಷ್ಣನು ನೃಪತುಂಗ ಚಕ್ರವರ್ತಿಯ ಮಗ. ಇವನು ರಾಜದ್ರೋಹಿಯಂತೆ ಚಿತ್ರಿಸಲ್ಪಟ್ಟಿದ್ದಾನೆ. ವೇಶ್ಯೆ ಜಯಂತಿ, ಮಂಗಿ ಹಾಗೂ ಶಂಕರಗಣರೆಂಬ ವ್ಯಕ್ತಿಗಳ ಪಿತೂರಿಯಿಂದ ಕೃಷ್ಣನು ತನ್ನ ತಂದೆಯ ವಿರುದ್ಧವೇ ಬಂಡಾಯಸಾರುತ್ತಾನೆ. ಇದೇ ಸಂದರ್ಭದಲ್ಲಿ ಶಂಕರಗಣನು ತನ್ನ ಸಹೋದರಿ ಉಜ್ವಲಾದೇವಿಯನ್ನು ಕೃಷ್ಣನ ಜೊತೆ ವಿವಾಹ ಮಾಡಿಸುತ್ತಾನೆ. ಅನೇಕ ಜನರ ಜೊತೆ ಸೇರಿ ತನ್ನ ತಂದೆಯ ವಿರುದ್ಧ ಬಂಡಾಯ ಏಳುವ ಈತನನ್ನು ಬಂಕರಸನು ಹತ್ತಿಕ್ಕುತ್ತಾನೆ. ಅಷ್ಟೇಕೆ ಆತನನ್ನು ನ್ಯಾಯಧೀಕರಣದ ಮುಂದೆ ತಂದು ನಿಲ್ಲಿಸುತ್ತಾನೆ. ಆದರೆ ಬಂಕರಸ, ಗುಣಭದ್ರಾಚಾರ್ಯ ಹಾಗೂ ಜನರ ಒತ್ತಾಯದ ಮೇರೆಗೆ ಕ್ಷಮಾದಾನ ದೊರೆಯುತ್ತದೆ. ಆಗ ನೃಪತುಂಗನು "ಪ್ರಜೆಗಳ ಅಭಿಮಾನದಿಂದ ಇಂದು ರಾಜಪುತ್ರರಿಗೆ ಪುನರ್ಜನ್ಮವಾಗಿದೆ. ಅವರು ಈ ಪ್ರೇಮಕ್ಕೆ ಪಾತ್ರರಾಗುವಂತೆ ಬದುಕಲೆಂದು ಬಯಸುತ್ತೇನೆ. ಇಂದು ತಮಗೆ ಪುನರ್ಜನ್ಮವಿತ್ತ ಪ್ರಜೆಗಳ ಮಕ್ಕಳಂತೆ ರಾಜಕುಮಾರನು ಬದುಕಲಿ ಪ್ರಜಾಕೋಟಿಯ ಪ್ರೇಮ ಸಾರ್ಥಕವಾಗಲಿ"[೮೧] ಎಂದಾಗ, ಬಂಧಮುಕ್ತನಾದ ರಾಜಕುಮಾರ ಕೃಷ್ಣನು ಸಭೆಗೆ ವಂದನೆಗಳನ್ನು ಸಲ್ಲಿಸಿ 'ಇಂದಿನಿಂದ ನಮ್ಮ ಬಾಳು ನಿಮ್ಮ ಸೇವೆಗೆ ಮೀಸಲು' ಎನ್ನುತ್ತಾನೆ. ಹಾಗೆ ತನ್ನ ತಂದೆಗೆ ನಮಸ್ಕರಿಸುತ್ತಾನೆ.

**ವಿಷ್ಣುವರ್ಧನ :**

'ಸಿಡಿಲ ಮೊಗ್ಗು' ಮತ್ತು 'ಕೀರ್ತಿನಾರಾಯಣ ಕಾದಂಬರಿಗಳಲ್ಲಿ ಬರುವ ಕೇಂದ್ರ ಪಾತ್ರ ವಿಷ್ಣುವರ್ಧನ. 'ಸಿಡಿಲ ಮೊಗ್ಗು'ವಿನಲ್ಲಿ ವಿಷ್ಣುವರ್ಧನನ ಮೊದಲ ಘಟ್ಟಕಂಡು ಬಂದರೆ, ಕೀರ್ತಿನಾರಾಯಣದಲ್ಲಿ ಎರಡನೇ ಘಟ್ಟಕ್ಕೆ ಸಂಬಂಧಿಸಿದ ಸಂಗತಿಗಳು ಕಂಡುಬರುತ್ತವೆ. ಆದ್ದರಿಂದಲೇ ತ.ರಾ.ಸು. ಅವರು "ಕನ್ನಡದ ಕಲೆ, ಸಂಸ್ಕೃತಿಗಳಿಗೆಂದು ತನ್ನ ಬಾಳನ್ನು ಸವೆಸಿದ, ರಾಷ್ಟ್ರ ಶಿಲ್ಪ ಹೊಯ್ಸಳ ವಿಷ್ಣುವರ್ಧನ ಚಕ್ರವರ್ತಿಯ ಜೀವನದ ಒಂದು ಘಟ್ಟವನ್ನಿಂದು ಕಾದಂಬರಿಯಾಗಿ ಹೆಣೆದು ಒಪ್ಪಿಸಿದ್ದೇನೆ"[೮೨] ಎಂದು 'ಸಿಡಿಲಮೊಗ್ಗು'

ಮುನ್ನುಡಿಯಲ್ಲಿ ಹೇಳಿದ್ದಾರೆ. ಚಾಲುಕ್ಯ ಚಕ್ರವರ್ತಿಯನ್ನು ಕಾಣಲು ಸೋಸೆವೂರಿನಿಂದ ಬಳ್ಳಿಗಾಮೆಗೆ ಪ್ರಯಾಣ ಬೆಳೆಸುವ ಸಂದರ್ಭದಲ್ಲಿ ವಿಷ್ಣುವರ್ಧನನಿಗೆ ತನ್ನ ತಂದೆ ಎರೆಯಂಗದೇವನೊಂದಿಗೆ ಮಾತನಾಡುವ ಪ್ರಸಂಗ ಬರುತ್ತದೆ. ತನ್ನ ಅಣ್ಣ ಬಲ್ಲಾಳನ ಅನಾರೋಗ್ಯದ ಪರಿಸ್ಥಿತಿಯನ್ನು ಕಂಡು ತಂದೆ ಎರೆಯಂಗನಿಗೆ ಪ್ರಶ್ನಿಸುವ ರೀತಿಯನ್ನು ನೋಡಿ, "ಅದೆಂಥ ಮಾತು ಅಪ್ಪಾಜಿ ಈ ಚಳಿಗಾಳಿಯ ಪ್ರಯಾಣವನ್ನು ಸಹಿಸಲಾಗದೆ ಅರ್ಧದಾರಿಯವರೆಗೆ ಬಂದೂ ಹೆಂಗಸರು ಹಿಂದುರುಗಿದರು ಎಂದರೂ ಚಕ್ರವರ್ತಿಗಳು ಬೇಸರ ಮಾಡಿಕೊಳ್ಳುತ್ತಾರೆಯೇ? ಈ ಸಣ್ಣ ಮಾತು ಅವರಿಗೆ ಅರ್ಥವಾಗುವುದಿಲ್ಲವೇ? ಅವರು ಮನುಷ್ಯರಲ್ಲವೇ? ಇನ್ನೊಬ್ಬರ ಕಷ್ಟಸುಖ ಅರ್ಥವಾಗದಷ್ಟು ಮೈಮನಸ್ಸು ಮರಗಟ್ಟಿ ಹೋಗಿರುತ್ತದೆಯೇ ಚಕ್ರವರ್ತಿ ಎನಿಸಿಕೊಂಡವರಿಗೆ?"[೬೩] ಎಂದು ಕೇಳುವ ರೀತಿಯ ಮೂಲಕ ವಿಷ್ಣುವರ್ಧನನ ಮಾನವ ಸಹಜ ಅಂತ:ಕರುಣೆಯ ಗುಣದ ಪರಿಚಯವನ್ನು ತ.ರಾ.ಸು. ಮಾಡಿಸುತ್ತಾರೆ. ಇಲ್ಲಿ ವಿಷ್ಣುವರ್ಧನನ ಪ್ರಕೃತಿ ಪ್ರೇಮ, ಪಿತೃಭಕ್ತಿ, ಸೋದರ ಪ್ರೇಮ, ತಾಯಿ ಕುರಿತಾದ ಗೌರವಾದಾರಗಳು ಗಮನಾರ್ಹವಾಗಿ ಚಿತ್ರಿಸಲ್ಪಟ್ಟಿವೆ.

ಬಳ್ಳಿಗಾಮೆಗೆ ಹೋದ ಸಂದರ್ಭದಲ್ಲಿ ತನ್ನ ತಾತ ವಿನಯಾದಿತ್ಯ ಹಾಗೂ ತಂದೆ ಎರೆಯಂಗದೇವರು ಚಕ್ರವರ್ತಿ ವಿಕ್ರಮಾದಿತ್ಯನನ್ನು ಕಂಡಾಗ, "ವಿಕ್ರಮಾದಿತ್ಯನ ಬಳಿಸಾರಿ, ಆತನ ಇದಿರು ಸೊಂಟದವರೆಗೂ ಮೈ ಬಗ್ಗಿಸಿ, ನಮಸ್ಕರಿಸುವ ತನ್ನ ತಾತ, ತಂದೆಯನ್ನು ನೋಡಿ ವಿಷ್ಣುವರ್ಧನನಿಗೆ ಏಕೆ ಕರುಳಲ್ಲಿ ಕೊಳ್ಳೆಯಾಡಿಸಿದಂತಾಯಿತು. ಅವರ ಹಿಂದೆಯೇ ತಾನೂ ನಮಸ್ಕರಿಸಬೇಕೆಂಬ ಸಭಾ ಮರ್ಯಾದೆಯನ್ನು ಮರೆತು ಹಾಗೆ ಚಕ್ರವರ್ತಿಯ ಮುಖವನ್ನು ದಿಟ್ಟಿಸಿ - ನೋಡಿದ"[೬೪] ಓಲಗದಲ್ಲಿ, ತಾನಾಗಿಯೇ ನಮಸ್ಕರಿಸದ ವಿಷ್ಣುವರ್ಧನನು ತನ್ನ ತಂದೆಯ ಸೂಚನೆಯಂತೆ ನಮಸ್ಕರಿಸಿದ್ದೊಂದು ಪ್ರಮಾದವಾಯಿತು. ಈ ಕಾರಣದಿಂದಾಗಿ ಚಾಲುಕ್ಯ ಪ್ರಧಾನಿ ಮಾರಸಿಂಗನು ಸಂಚು ರೂಪಿಸಿ, ಹೊಯ್ಸಳರ ಆಧಿಪತ್ಯದಲ್ಲಿದ್ದ ಗಂಗವಾಡಿಯನ್ನು ಗಂಗಪೆರ್ಮಾಡಿಗೆ ಒಪ್ಪಿಸುತ್ತಾನೆ. ಈ ಅವಮಾನದೊಂದಿಗೆ ಮರಳುವಾಗ, ಹೆಗ್ಗಡೆ ಮಾರಸಿಂಗಯ್ಯನಿಗೆ, ಮುಮದೆ ಇಲ್ಲಿಗೆ ಬರುವುದು 'ಅತ್ತು ಹಿಂದಿರುಗುವುದಕ್ಕಲ್ಲ ಗೆದ್ದು ಆಳುವುದಕ್ಕೆ' ಎಂಬ ಶಪಥದೊಂದಿಗೆ ವಿಷ್ಣುವರ್ಧನನು ಅಲ್ಲಿಂದ ಮರಳುತ್ತಾನೆ. ಇದೇ ಸಂದರ್ಭದಲ್ಲಿ ವಿಷ್ಣುವರ್ಧನನಿಗೆ ಶಾಂತಲೆಯ ಪರಿಚಯವಾಗುತ್ತದೆ.

'ಕೀರ್ತಿನಾರಾಯಣ' ಕಾದಂಬರಿಯಲ್ಲಿ ಬಲ್ಲಾಳರಾಯನ ಸಾವಿನ ನಂತರ ವಿಷ್ಣುವರ್ಧನನ ಪಟ್ಟಾಭಿಷೇಕ ನಡೆಯುತ್ತದೆ. ಸಾಯುವ ತನ್ನ ಅಣ್ಣ ಹೇಳಿದ ಮಾತನ್ನು ಸ್ಮರಿಸಿಕೊಳ್ಳುತ್ತಾನೆ. 'ಈ ಕುನ್ನಿಗಳೆಂದೂ ಮತ್ತೆ ನಮ್ಮ ರಾಜ್ಯದತ್ತ ತಲೆಯಿಕ್ಕದಂತಾಗಬೇಕು ಬಿಟ್ಟಿಯಣ್ಣಾ, ನೀಲಗಿರಿಯಿಂದ ಕೃಷ್ಣೆಯವರೆಗಿನ ನಾನು ನಮ್ಮ ವ್ಯಾಘ್ರ ಲಾಂಛನದ

ಅಡುಂಬೊಲವಾಗಬೇಕು.' 'ಖಂಡಿತ, ಖಂಡಿತ, ನಿನ್ನ ಮಾತನ್ನು ಸತ್ಯವಾಗಿ ಮಾಡುತ್ತೇವೆ. ನಾನು ನಿನ್ನ ಕನಸಿನ ಭಾಷೆಯಾಳು. ನೀನು ಹೇಳಿದ ರಾಜ್ಯವನ್ನು ಕಟ್ಟಿ ನಿನಗೆ ಪರೋಕ್ಷ ವಿಜಯ ಸಲ್ಲಿಸುತ್ತೇನೆ – ಎಚಿದು ಬಾರಿ ಬಾರಿಗೂ ತನಗೆ ತಾನೇ ಹೇಳಿಕೊಂಡು, ಉಕ್ಕಿ ಬರುವ ದುಃಖವನ್ನು ಸಂತೈಸಿಕೊಂಡ...... 'ದೇಶವನ್ನು ಕಂಬನಿಯ ಕಡಲಲ್ಲಿ, ಅದ್ದಿ ಶಿವಪದ ವಾಸಿಗಳಾದ ನಮ್ಮ ಪೂಜ್ಯ ಅಣ್ಣಾಜಿಯವರಾದ ಬಲ್ಲಾಳ ಪ್ರಭುಗಳು, ನಮ್ಮ ಹೆಗಲಿನ ಮೇಲೆ ಬಹು ದೊಡ್ಡ ಹೊರೆಯನ್ನು ಹೊರಿಸಿದ್ದಾರೆ."[೨೫] ಎಂಬ ಜವಾಬ್ದಾರಿಯೊಂದಿಗೆ ವಿಷ್ಣುವರ್ಧನನು ತನ್ನ ಅಣ್ಣನ ಆಸೆಯನ್ನು ಈಡೇರಿಸಲು ಮುಂದಾಗುತ್ತಾನೆ. ಅಂದಿನಿಂದ ಸಮರ ಸಿದ್ಧತೆಗಳು ನಡೆಯುತ್ತವೆ. ತಲಕಾಡಿನ ದಂಡಯಾತ್ರೆಗಾಗಿ ಗಂಗರಾಜನಿಗೆ ಪಟ್ಟಕಟ್ಟುವ ಸಂದರ್ಭದಲ್ಲಿ ವಿಷ್ಣುವರ್ಧನನ ಉದಾರ ಗುಣದ ಚಿತ್ರಣವೂ ಕಾಣಸಿಗುತ್ತದೆ. ಮುಂದೆ ಯುದ್ಧದಲ್ಲಿ ಗಂಗವಾಹಿಯನ್ನು ಗೆದ್ದು ಮರಳಿ ಬಂದಾಗ, ವಿಷ್ಣುವರ್ಧನನು ತನ್ನ ಜನತೆಗೆ ಹೇಳುವ ಈ ಮಾತುಗಳನ್ನು ನೋಡಿ, "ಈ ಗಂಗವಾಡಿ ನಮ್ಮದಲ್ಲ ನಿಮ್ಮದು. ಇಲ್ಲಿ ನಮಗೆ ದೊರೆತ ಭಾಗ್ಯ ಭಂಡಾರವೂ ನಿಮ್ಮದೇ ..... ಅದೇನಿದ್ದರೂ ಪ್ರಖ್ಯಾತವಾದ ಗಂಗವಾಡಿ, ಮತ್ತು ತನ್ನ ಪ್ರಾಚೀನ ಕೀರ್ತಿಯನ್ನು ಪಡೆಯಲು ಏನಾಗಬೇಕೊ, ಏನು ಧರ್ಮಕಾರ್ಯವಾಗಬೇಕೊ – ಅಷ್ಟನ್ನು ನಮ್ಮ ಅಪ್ಪಣೆಗಾಗಿ ಕಾಯದೆಯೇ ಮಾಡಿ ..." 'ನಮ್ಮ ಜನತೆಗೆ ನಾವು ಹೇಳುವುದು ಅಷ್ಟೆ – ಧರ್ಮಕ್ಕೆ ಶರಣಾಗಿ ನಡೆದುಕೊಳ್ಳಿ ; ಕೀರ್ತಿಕಾಮಿಗಳಾಗಿ ಬಾಳಿ."[೨೬] ಎಂದು ಹೇಳಿ ತನ್ನ ಉದಾತ್ತ ಗುಣವನ್ನು ಮೆರೆಯುತ್ತಾನೆ. ಹೀಗೆ, ವಿಷ್ಣುವರ್ಧನನ ಛಲ, ಧೈರ್ಯ, ದಕ್ಷತೆ, ಅಂದುಕೊಂಡದ್ದನ್ನು ಸಾಧಿಸುವ ಮನೋಭಾವ, ಪ್ರೀತಿಗಳು ಈ ಎರಡು ಕಾದಂಬರಿಗಳಲ್ಲಿ ಮೂಡಿ ಬಂದಿವೆ.

ಚಾಲುಕ್ಯ ಚಕ್ರವರ್ತಿ ವಿಕ್ರಮಾದಿತ್ಯ, ವಿಷ್ಣುವರ್ಧನನ ತಾತ, ವಿನಯಾದಿತ್ಯ, ತಂದೆ ಎರೆಯಂಗದೇವ, ಚಾಲುಕ್ಯ ಪ್ರಧಾನಿ ಕಾಳಿದಾಸಯ್ಯ, ಶಾಂತಲೆಯ ತಂದೆ ಹೆಗ್ಗಡೆ ಮಾರಸಿಂಗಯ್ಯ, ಗಂಗರಾಜ, ಗಣಾಚಾರಿ ಈ ಮುಂತಾದ ಪೂರಕ ಪಾತ್ರಗಳ ಜೀವಂತಿಕೆಯನ್ನು ಈ ಎರಡು ಕಾದಂಬರಿಗಳಲ್ಲಿ (ಸಿಡಿಲ ಮೊಗ್ಗು, ಕೀರ್ತಿನಾರಾಯಣ) ಕಾಣಬಹುದಾಗಿದೆ.

**ಚಾವುಂಡರಾಯ :**

ಚಾವುಂಡರಾಯನ ಉದಾತ್ತ ವ್ಯಕ್ತಿತ್ವ ಚಿತ್ರಣ 'ಶಿಲ್ಪಶ್ರೀ' ಕಾದಂಬರಿಯಲ್ಲಿ ಕಂಡುಬರುತ್ತದೆ. ಬೂತುಗ ಚಕ್ರವರ್ತಿಯ ಮಹಾದಂಡನಾಯಕನಾಗಿದ್ದ ಮಹಾಬಲಯ್ಯನ ಮಗ ಚಾವುಂಡರಾಯ. ತನ್ನ ೨೦ನೇ ವಯಸ್ಸಿನಲ್ಲೇ ಸೇನಾಧಿಕಾರಿಯಾಗಿ ನೇಮಕಗೊಂಡಿದ್ದನು. ತನ್ನ ತಂದೆ ಮಹಾಬಲಯ್ಯನೊಡನೆ ರಾಷ್ಟ್ರಕೂಟ ರಾಜಧಾನಿ ಮಾನ್ಯಖೇಟಕ್ಕೆ ಹೋದಾಗ, ಅಲ್ಲಿ ಪಂಪಮಹಾಕವಿಯ ದರ್ಶನವಾಗುತ್ತದೆ. ಆಗ ಪಂಪನು ತನ್ನನ್ನು ನೋಡಲುಬಂದ ಚಾವುಂಡರಾಯನಿಗೆ ಜಿನಧರ್ಮವನ್ನು ಪಾಲುಸುವಂತೆ ಬೋಧಿಸಿ,

ಆಶೀರ್ವದಿಸುತ್ತಾನೆ. ಈ ಒಂದು ಘಟನೆಯು ಚಾವುಂಡರಾಯನ ಬದುಕಿನ ಮೇಲೆ ಅಗಾಧ ಪರಿಣಾಮವನ್ನುಂಟು ಮಾಡುತ್ತದೆಂಬಂತೆ ತ.ರಾ.ಸು. ಅವರು ಅದರ ಚಿತ್ರಣವನ್ನು ಕೊಡುತ್ತಾರೆ. 'ತ್ಯಾಗ – ವೈರಾಗ್ಯಗಳಿಲ್ಲದೆ ಮಾನವನ ಬದುಕು ಭವ್ಯವಾಗದು' ಎಂಬ ಪಾಠವನ್ನು ಚಾವುಂಡರಾಯ ಪಂಪನ 'ಆದಿಪುರಾಣ'ದ ಕಂಡುಕೊಳ್ಳುತ್ತಾನೆ. ಈ ಕಾರಣದಿಂದಾಗಿ ಖಡ್ಗಸನ್ಯಾಸವನ್ನು ಸ್ವೀಕರಿಸಿ, ಅಲೌಕಿಕ ಬದುಕಿನ ಸುಖವನ್ನು ಕಾಣಬೇಕೆಂಬ ಬಯಕೆ ಅವನಲ್ಲಿ ಬಲವಾಗುತ್ತ ಹೋಗುತ್ತದೆ. "ಪಂಪಮಹಾಕವಿಯ 'ಆದಿಪುರಾಣ'ವನ್ನು ಓದಿದಾಗ, ಚಂದ್ರೋದಯ ಸಮಯದ ಸಾಗರದಂತೆ ಪ್ರಕ್ಷುಬ್ಧವಾಗುತ್ತಿದ್ದ ಚಾವುಂಡರಾಯನ ಚಿತ್ತ, ಇಂದು ಹಿಂದೆಂದಿಗಿಂತಲೂ ಉಗ್ರವಾಗಿ, ತನ್ನ ಚಿತ್ರದುರ್ಗಕ್ಕೆ, ಲಗ್ಗೆ ಹಾಕಿದ ಸೈನ್ಯವನ್ನು ಹಿಮ್ಮೆಟ್ಟಿಸಲು ದಾರಿಗಾಣದೆ, ತೋಲಲುತ್ತಾ, ಹಗಲು ಎದ್ದು ಮಾಡಿದ ಸ್ನಾನ, ಪೂಜೆ ಪಾರಾಯಣಗಳಿಂದಲೂ, ಮನಸ್ಸಿಗೆ ಅಲ್ಪಶಾಂತಿಯೂ ಲಭಿಸದೆ ಉಮ್ಮಳಿಸುತ್ತಾ, ದಿನದಂತೆ ಅರಮನೆಗೆ ಹೋಗಲೂ ಮನಸ್ಸಾಗದೆ, ತನ್ನ ಕರುಮಾಡದ ಚೌಪಳಿಗೆಯಲ್ಲಿ ಕುದಿಯುತ್ತ ಕುಳಿತಿದ್ದ ಚಾವುಂಡರಾಯ"[೮೭] ಎಂಬಂತೆ ತ.ರಾ.ಸು. ಅವರು ಚಾವುಂಡರಾಯನ ಮನೋಚಿಂತೆಯನ್ನು ಚಿತ್ರಿಸಿದ್ದಾರೆ.

ಮುಂದೆ ತಾಯಿ ಕಾಳಲಾದೇವಿಯ ಸಲಹೆಯ ಮೇರೆಗೆ ಶ್ರವಣಬೆಳಗೋಳಕ್ಕೆ ಹೋಗುವ ಅವಕಾಶ ಚಾವುಂಡರಾಯನಿಗೆ ಸಿಗುತ್ತದೆ. ಈ ಸಮಯದಲ್ಲಿ ರನ್ನನ ಪರಿಚಯವಾಗುತ್ತದೆ. ಅವನಿಂದ ಬೆಳಗೋಳದ ನೆಲದ ಪಾವಿತ್ರತೆಯನ್ನು ಅರಿಯುತ್ತಾನೆ. ಇಂತಹ ಮನೋಸ್ಥಿತಿಯಲ್ಲಿ, ತನ್ನ ದೊರೆಯ ನಿಧನದ ನಂತರ ತಾನೇ ರಾಜ್ಯಭಾರವಹಿಸಿಕೊಳ್ಳುವ ಅನಿವಾರ್ಯತೆ ಎದುರಾಗುತ್ತದೆ. ಮುಂದೆ ನೇಮಿ ಚಂದ್ರಾಚಾರ್ಯರಿಂದ ಸನ್ಯಾಸ ದೀಕ್ಷೆಯನ್ನು ಪಡೆಯುತ್ತಾನೆ. ಶ್ರವಣಬೆಳಗೋಳದಲ್ಲಿ ಭವ್ಯವಾದ ಗೊಮ್ಮಟೇಶ್ವರನ ಶಿಲ್ಪಕಲಾಕೃತಿಗೆ ಕಾರಣಿಕರ್ತನಾಗುತ್ತಾನೆ. ಪಂಪನ ಕಾವ್ಯ ಚಾವುಂಡರಾಯನ ವೈರಾಗ್ಯವನ್ನು ಸೂಚಿಸಿದರೆ, ರನ್ನನ ವ್ಯಕ್ತಿತ್ವದ ಪ್ರಭಾವ ಅವನ ಸಿದ್ಧಿಯನ್ನು ಸೂಚಿಸುತ್ತದೆ.

ಅಜಿತ ಸೇನಾಚಾರ್ಯರು, ಲಲಿತ ಕೀರ್ತಿ ಪಂಡಿತರು ಹಾಗೂ ನೇಮಿಚಂದ್ರಾಚಾರ್ಯರ ಪಾತ್ರಗಳು ಚಾವುಂಡರಾಯನ ಆದರ್ಶ ಬದುಕಿಗೆ ಪೂರಕ ಚೈತನ್ಯ ನೀಡುತ್ತವೆ.

**ಅಲ್ಲಯ್ಯ:**

'ಅಗ್ನಿರಥ – ಮುಕ್ತಿಪಥ' ಕಾದಂಬರಿಯ ಕಥಾ ನಾಯಕ ಅಲ್ಲಯ್ಯ. ಈತನು ಐತಿಹಾಸಿಕ ವ್ಯಕ್ತಿ ಮಾತ್ರವಲ್ಲ, ಧಾರ್ಮಿಕ ಪುರುಷನಾಗಿದ್ದಾನೆ. ಈತನ ಹುಟ್ಟೂರು ನಾಗರಖಂಡದ ಬಳ್ಳಿಗಾಮೆ. ಆ ಊರಿನ ಅರಸರ ಮಕ್ಕಳಿಗೆ ನೃತ್ಯಕಲಿಸುವ ನಿರಂಹಕಾರಯ್ಯ

ಎಂಬುವವರ ಮಗ. ಮದ್ದಳೆ ನುಡಿಸುವುದರಲ್ಲಿ ಆತನಿಗೆ ಸರಿಸಮನಾದವರು ಊರಿನಲ್ಲೇಕೆ, ಪ್ರಾಂತದಲ್ಲೇ ಯಾರು ಇರಲಿಲ್ಲ. ಈತನು ಪ್ರಾಯಕ್ಕೆ ಬಂದಾಗ ತನ್ನ ತಂದೆಯ ಮನೆಯನ್ನು ಬಿಟ್ಟು ಬನವಾಸಿಗೆ ಬರುವುದರೊಂದಿಗೆ ಅಲ್ಲಯ್ಯನ ಬದುಕಿನ ಪಥ ಆರಂಭವಾಗುತ್ತದೆ. ಅಲ್ಲಮನ ಅಗ್ನಿರಥದ ಬದುಕು ನಾನಾ ಅನುಭವಗಳನ್ನು ಹೊಂದಿ ಕಷ್ಟನಷ್ಟಗಳನ್ನು ಸೋಸಿ, ಬದುಕಿನ ಎಲ್ಲ ಆಗುಹೋಗುಗಳನ್ನು ಕಂಡು–ನೊಂದು–ಬೆಂದು ಆ ಬದುಕಿನ ಎಲ್ಲ ಅನುಭವಗಳ ಹಿಂಸೆಯನ್ನು ಸಹಿಸಿಕೊಂಡು, ಅಗ್ನಿರಥವಾದ ಅವನ ಬದುಕು ಮುಕ್ತಿಪಥದ ಕಡೆಗೆ ಸಾಗುವ ಸಂಗತಿ. ಈ ಕಾದಂಬರಿಯಲ್ಲಿ ಚಿತ್ರಿಸಲ್ಪಟ್ಟಿದೆ. ವೀರಶೈವ ತತ್ವ ಮತ್ತು ಧರ್ಮದ ಹಿನ್ನೆಲೆಯಲ್ಲಿ ತ.ರಾ.ಸು. ಅವರು ಕೊಡುವ ಅಲ್ಲಮನ ಬದುಕಿನ ಕಥನ ಕೌಶಲ ಇಲ್ಲಿ ಅಗಾಧವಾಗಿದೆ. "ಹೊರ ನೋಟಕ್ಕೆ ಅಲ್ಲಯ್ಯ ಎಷ್ಟು ಶಾಂತನಾಗಿ ಕಾಣುತ್ತಿದ್ದನೋ, ಒಳಗೆ ಅಷ್ಟೇ ಅಶಾಂತನಾಗಿದ್ದ. ಕಾಲು ನಡೆಯುತ್ತಿತ್ತು, ದಾರಿ ಸವೆಯುತ್ತಿತ್ತು. ಆದರೆ, ಕಾಲು ನಡೆದುದು, ದಾರಿ ಸವೆದುದು, ಯಾವುದೂ ಅಲ್ಲಯ್ಯನಿಗೆ ಅರಿವಿರಲಿಲ್ಲ. ಸುತ್ತಲು ಯಾವುದರ ಪರಿವೆಯೂ ಇಲ್ಲದಂತೆ, ಆತನನ್ನು ಅಲೆಸುತ್ತಿತ್ತು, ಆತನ ನೆತ್ತಿಯನ್ನೇರಿದ ಅಶಾಂತಿಯ ಬೇತಾಳ"[೮೮] ಎಂದು ನಿರೂಪಿಸುವ ತ.ರಾ.ಸು. ಅವರು ಅಲ್ಲಮನ ಅಗ್ನಿರಥದ ಬೇಗುದಿಯನ್ನು ಕುರಿತು ವಿವರಿಸುತ್ತಾರೆ.

ಅಲ್ಲಯ್ಯನ ಮದುವೆ ವಿಚಾರವಾಗಿ ಆತನ ತಾಯಿ ಪ್ರಸ್ತಾಪಿಸಿದಾಗ, 'ನನ್ನ ದೇಹಕ್ಕೆ, ವಯಸ್ಸಾಗಿದೆ ಬುದ್ಧಿಗೆ ವಯಸ್ಸಾಗಿಲ್ಲ' ಎಂದು ವಿನಮ್ರವಾಗಿ ಪ್ರತಿಕ್ರಿಯಿಸುತ್ತಾ, ಸಂಸಾರ ಜಂಜಾಟದಿಂದ ದೂರ ಉಳಿಯುತ್ತಾನೆ. ಮದ್ದಲಿಯನ್ನು ಹೆಗಲಿಗೆ ಹಾಕಿಕೊಂಡು ಭವ ಬಂಧನಗಳನ್ನು ತೆಗೆದು ಹಾಕಲು ತನ್ನನ್ನು ತಾನು ಕಾಣಲು ಊರುಬಿಟ್ಟು ಹೊರಡುವುದರಲ್ಲಿ 'ಸ್ಥಾವರಕ್ಕಳಿವುಂಟು – ಜಂಗಮಕ್ಕಳಿವಿಲ್ಲ' ಎಂಬ ತತ್ತ್ವದ ಬೆಳಕನ್ನು ಕಾಣುತ್ತೇವೆ. ಅಲ್ಲಯ್ಯನು ದೇವರನ್ನು ಹುಡುಕುತ್ತಾ ದೇವರು ಸಿಗದಿದ್ದರೂ ಚಿಂತೆಯಿಲ್ಲ, ಗುರುವನ್ನಾದರೂ ಕರುಣಿಸು ಎಂದು ಕಾಲನಡಿಗೆಯಲ್ಲಿಯೇ ಸುತ್ತುತ್ತಿರುತ್ತಾನೆ. ಆಗು ವಿಪಿನಖಂಡದ ಮಧ್ಯಭಾಗದಲ್ಲಿ ದಿಬ್ಬದ ಪೂರ್ವ ದಿಗ್ಭಾಗದಲ್ಲೊಂದು ಗುಹೆಯಿಂದ ಪ್ರಣವಧ್ವನಿಯು ಬರುತ್ತಿರುವುದೆಂಬುದು ಅರಿವಾಯಿತು. "ಎತ್ತಣ ಮಾಮರ ಎತ್ತಣ ಕೋಗಿಲೆ? ಎತ್ತಣಿಂದೆತ್ತ ಸಂಬಂಧವಯ್ಯ? ಬೆಟ್ಟದ ನೆಲ್ಲಿಕಾಯಿ ಸಮುದ್ರದೊಳಗಣ ಉಪ್ಪು – ಎತ್ತಣಿಂದೆತ್ತ ಸಂಬಂಧವಯ್ಯ?"[೮೯] ಎಂಬ ಆತ್ಮಸಾಕ್ಷಾತ್ಕಾರದೊಂದಿಗೆ ತನ್ನನ್ನು ತಾನು ಮೈಮರೆತು 'ಗುರುದೇವ'ನ ದರ್ಶನ ಪಡೆದುಕೊಂಡಿದ್ದನು. 'ಕತ್ತಲೆಯ ವಿಗ್ರಹವಾಗಿ ಗುಹಾಪ್ರವೇಶ ಮಾಡಿದವನು ಬೆಳಕಿನ ವಿಗ್ರಹವಾಗಿ ಹೊರಬಂದನು' ಎಂಬಂತೆ ತ.ರಾ.ಸು. ಅದರ ಚಿತ್ರಣಕೊಡುತ್ತಾರೆ. "ಆಚಾರಕ್ಕಿಂತ ವಿಚಾರ ಹಿರಿದು : ಕರ್ಮಕ್ಕಿಂತ ಸತ್ಯ ಹಿರಿದು, ಜಾತಿಗಿಂತ ದೇವ ಹಿರಿಯ, ವರ್ಗಕ್ಕಿಂತ

ಮೈತ್ರಿ ಮೇಲು : ದೇವ-ಮಾನವ ಬೇರೆ ಬೇರೆಯೆಂಬ ದ್ವಂದ್ವ ಭಾವಕ್ಕಿಂತ ಅವೆರಡೂ ಒಂದೇ ಶಕ್ತಿಯೆಂಬ ಅದ್ವೈತ ಮೇಲು, ಈ ಸತ್ಯವನ್ನು ಜನತೆಗೆ ಸಾರಬೇಕು, ಸಾರಿ, ಅವರನ್ನು ಇಹದಲ್ಲಿ ಸಜ್ಜನರನ್ನಾಗಿ, ಪರದಲ್ಲಿ ಶಿವಕೃಪೆಗೆ ಅರ್ಹರನ್ನಾಗಿ ಮಾಡಬೇಕು. ಅದೇ ನನ್ನ ಬಾಳಪಥ, ಮುಕ್ತಿಪಥ, ಶಿವಪಥ."[೮] ಎಂದು ನಿರ್ಧರಿಸಿ, ಅಲ್ಲಮನು ತನ್ನ ಸಿದ್ಧ ಜ್ಞಾನವನ್ನು ಊರೆಲ್ಲ ಸಂಚರಿಸಿ, ಹಂಚಲು ಸಿದ್ಧನಾಗುತ್ತಾನೆ. ಮುಕ್ತಾಯಕ್ಕನ ಮನಪರಿವರ್ತನೆ ಮಾಡುವುದು, ಸಿದ್ಧರಾಮಯ್ಯನ ಮೇಲೆ ಪ್ರಭಾವ ಬೀರುವುದು - ಇಂಥ ಘಟನೆಗಳು ಆತನ ಸಿದ್ಧಿಯ ಫಲಗಳಾಗಿವೆ.

"ಅಲ್ಲಮಪ್ರಭು ಅನುಭವಮಂಟಪದಲ್ಲಿ ಬಹು ಪ್ರಬಲನಾಗಿದ್ದವನು. ಅವನನ್ನು ಎಲ್ಲರೂ ಭಕ್ತಿಯಿಂದ ನೋಡುತ್ತಿದ್ದರು. ಅವನು ಸ್ಥಳದಿಂದ ಸ್ಥಳಕ್ಕೆ ಸಂಚರಿಸಿ, ಅನೇಕ ಸಾಧಕರನ್ನು ಸಂದರ್ಶಿಸಿ, ಅವರ ಸಮಸ್ಯೆಗಳನ್ನು ಪರಿಹರಿಸುತ್ತಿದ್ದ ಸಾಧಕರಿಗೆ ದಿವ್ಯ ಜ್ಯೋತಿಯಂತೆ ಇದ್ದನು. ಅನುಭಾವಿಯಾಗಿದ್ದ ಅವರನು ಉನ್ನತವಾದ ಆಧ್ಯಾತ್ಮಿಕ ಶಿಖರಗಳನ್ನು ಏರಿದ್ದ"[೧] ಎಂಬ ಮಾತು ಅಲ್ಲಮಪ್ರಭುವಿನ ವ್ಯಕ್ತಿತ್ವದ ಮಹತ್ವವನ್ನು ಸೂಚಿಸುತ್ತದೆ.

* **ಇಮ್ಮಡಿ ಮದಕರಿ ನಾಯಕ:**

ಚಿತ್ರದುರ್ಗದ ಸರಣಿ ಕಾದಂಬರಿಗಳಲ್ಲಿ ಮೊದಲಾದ 'ಕಂಬನಿಯ ಕುಯಿಲು' ಕಾದಂಬರಿಯಲ್ಲಿ ಕಾಣಸಿಗುವ ಮೊದಲ ಪಾತ್ರ ಇಮ್ಮಡಿ ಮದಕರಿನಾಯಕ. ಚಿತ್ರದುರ್ಗವನ್ನಾಳಿದ ಪ್ರಬಲ ಅರಸುಗಳಲ್ಲಿ ಈತನು ಒಬ್ಬನಾಗಿದ್ದಾನೆ. ಮತ್ತೀ ವಂಶದ ಕೊನೆಯ ದೊರೆ. ಈ ಅರಸನು ಮೂವತ್ತು ಮಂದಿ ನಾಗತಿಯರನ್ನು ಹೊಂದಿರುತ್ತಾನೆ. ಆದರೂ ಮಕ್ಕಳಿಲ್ಲದೆ ಸಾವನ್ನಪ್ಪುತ್ತಾನೆ. 'ನಿನಗಿರುವಷ್ಟು ರಾಜ್ಯದ ಚಿಂತೆ ನನಗಿಲ್ಲವೇ ಗೌರಾ, ನನಗೂ ಇದೆ. ಆದರೇನು, ಮಾಡಲು ಮಕ್ಕಳಿಲ್ಲದ ಮನಸ್ಸಿನ ಈ ರಾಜ್ಯ ಬರಿ ಮಸಣದಂತೆ ತೋರುತ್ತದೆ."[೨] ಎಂದು ಕೊರಗಿ, ಕೊರಗಿ ಸಾಯುತ್ತಾನೆ. ಇವನ ಸಾವಿನ ನಂತರ ದುರ್ಗದ ಪಟ್ಟಾಭಿಷೇಕಕ್ಕಾಗಿ ಚರ್ಚೆಯು ನಡೆಯುತ್ತದೆ. ಅದರ ವರ್ಣನೆಯೊಂದಿಗೆ ಕಾದಂಬರಿ ಆರಂಭವಾಗುತ್ತದೆ.

* **ಭುವನಪ್ಪ :**

ದುರ್ಗದ ಪಾಳೆಯಗಾರರ ಮನೆತನದ ಮೂಲಪುರುಷರಾದ ಮತ್ತಿತಿಮ್ಮಣ್ಣನಾಯಕರು ದುರ್ಗದ ಒಡೆಯರಾದಾಗಿನಿಂದ, ಭುವನಪ್ಪನವರ ಮನೆತನದ ಹಿರಿಯರು ಅವರ ಬಲಗೈ ಬಂಟರಾಗಿ ಕಾರ್ಯನಿರ್ವಹಿಸುತ್ತಿದ್ದರು. ಅಂದಿನಿಂದ ಇಂದಿನವರೆಗೂ ಅದೇ ನಿಷ್ಠೆಯನ್ನು ಪಾಳೆಯಗಾರರ ಮನೆತನದವರ ಬಗ್ಗೆ ಇರಿಸಿಕೊಂಡು ಬಂದಿದ್ದರು. ಈ ಸಂಪ್ರದಾಯವನ್ನು ಭುವನಪ್ಪನವರು ಮುಂದುವರೆಸಿದ್ದರು. "ಅವರ ನಿಷ್ಠೆ ಎಷ್ಟು ದೃಢವಾದುದೋ ಅವರ

ಹೃದಯ, ಕೈ, ಕಿವಿಗಳು ಅಷ್ಟೇ ಶುದ್ಧ ದೊರೆಗಳಲ್ಲಿ, ಅರಮನೆಯಲ್ಲಿ ಎಷ್ಟೋ ಸಲಿಗೆಯಿದ್ದರೂ, ಅದನ್ನವರು ದುರುಪಯೋಗಪಡಿಸಿಕೊಂಡರೆಂದಾಗಲಿ, ಸ್ವಾರ್ಥಕ್ಕೆ ಬಳಸಿಕೊಂಡರೆಂದಾಗಲಿ ಎಂದೂ ಈ ಕಳಂಕ ಸೋಂಕಿರಲಿಲ್ಲ. ಎಂತಲೇ ಎಲ್ಲರಿಗೂ ಅವರ ಮಾತೆಂದರೆ ವೇದವಾಕ್ಯ : ಅವರನ್ನು ಕಂಡರೆ ತಮ್ಮ ಮನೆಯ ಹಿರಿಯರನ್ನು ಕಂಡಷ್ಟು ಗೌರವ."[೩] ಈ ಕಾರಣಕ್ಕಾಗಿಯೇ ಗೌರವ್ವ ನಾಗತಿ ರಾಜ್ಯದ ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಮುಂದೇನು? ಮಾಡಬೇಕೆಂಬದನ್ನು ಭುವನಪ್ಪನವರೊಂದಿಗೆ ಚರ್ಚಿಸುತ್ತಾಳೆ. ಈ ಸಂದರ್ಭದಲ್ಲಿ ಭುವನಪ್ಪನವರು ತಮ್ಮದೇ ಆದ ಸಲಹೆ-ಸೂಚನೆಗಳನ್ನು ನೀಡುತ್ತಾರೆ. 'ಓಬಣ್ಣ ನಾಯಕರನ್ನು ದತ್ತು ಸ್ವೀಕರಿಸಿ, ಪಟ್ಟಕಟ್ಟಿದರೆ ಯಾವುದೇ ಸಮಸ್ಯೆ ಉದ್ಭವಿಸಲಾರದು' ಎಂದು ಹಿರಿಯ ನಾಗತಿಗೆ ಸಲಹೆ ನೀಡುತ್ತಾನೆ. ಆ ಒಂದು ತೀರ್ಮಾನದಂತೆ, ಭುವನಪ್ಪನವರು ಲಿಂಗಣ್ಣ ನಾಯಕರೊಂದಿಗೆ ಚರ್ಚಿಸಿಕೊಂಡು ಓಬಣ್ಣ ನಾಯಕರರಿಗೆ ಪಟ್ಟ ಕಟ್ಟಲು ಮುಂದಾಗುತ್ತಾನೆ. ಈ ಸಮಯದಲ್ಲಿ ರಾಜ್ಯದ ಹಿತದೃಷ್ಟಿಯಿಂದ ತನ್ನ ಪ್ರಧಾನಿ ಪಟ್ಟವನ್ನು ಲಿಂಗಣ್ಣ ನಾಯಕರಿಗೆ ಬಿಟ್ಟುಕೊಡಲು ತೀರ್ಮಾಣಿಸುತ್ತಾನೆ. ಭುವನಪ್ಪನವರ ರಾಜ್ಯ ನಿಷ್ಠೆ ಇಲ್ಲಿ ವ್ಯಕ್ತವಾಗಿದೆ.

*** ಕಸ್ತೂರಿ ನಾಯಕ :**

ಈತನು ಅಂಗರಕ್ಷಕ ಪಡೆಯ ಭಟ. ಇವನ ಬಗೆಗೆ ಹಿರಿಯ ನಾಗತಿ ಸಂಶಯ ವ್ಯಕ್ತಪಡಿಸಿದಾಗ, ಕಸ್ತೂರಿರಂಗಪ್ಪ ನಾಯಕ ಹೇಳುವ ಮಾತನ್ನು ನೋಡಿ, "ಪಾದ ಸೇವಕರಲ್ಲಿ ತಾಯಿಯವರಿಗೆ ಇಂದು ನಂಬಿಕೆ ಬರುವಂತಿಲ್ಲ. ಅದಕ್ಕೆ ಮತ್ತೆ ಮತ್ತೆ ಪರೀಕ್ಷೆ ಮಾಡುತ್ತಿದ್ದೀರಿ. ಆಯಿತು ತಮ್ಮ ಚಿತ್ತ. ಕೈಯಲ್ಲಿ ಹಾಲು ಕೊಟ್ಟಿದ್ದೀರ, ಇದು ಬರೀ ಹಾಲಲ್ಲ. ನನ್ನ ತಾಯಿಯ ಮೊಲೆ ಹಾಲು ಎಂದು ತಿಳಿದು, ಅಮೃತದ ಸಾಕ್ಷಿಯಾಗಿ ಹೇಳುತ್ತೇನೆ. ನನ್ನ ಜೀವವಿರುವವರೆಗೆ, ಅವರ ಜೀವ ನನ್ನ ಜೀವವೆಂದು ತಿಳಿದು ಸೇವೆ ಮಾಡುತ್ತೇನೆ. ಅದಕ್ಕೆ ತಪ್ಪಿದ ದಿನ ತಾಯಿಯವರ ಪಾದಕ್ಕೆ ನನ್ನ ತಲೆ ತಂದು ಒಪ್ಪಿಸುತ್ತೇನೆ. ಇದಕ್ಕೆ ಸೂರ್ಯಚಂದ್ರರೇ ಸಾಕ್ಷಿ"[೪] ಎಂದು ಹೇಳಿ, ತನ್ನ ನಿಷ್ಠೆಯನ್ನು ಮೆರೆಯುತ್ತಾನೆ.

"ಈ ರಂಗಪ್ಪನಾಯಕನು ಚಿತ್ರದುರ್ಗದ ನೆರೆಯ ಸಂಸ್ಥಾನಗಳೆನಿಸಿದ ತರೀಕೆರೆ ಮತ್ತು ಹರಪನಹಳ್ಳಿಯವರ ವಿರುದ್ಧ ಕಾಳಗಗಳನ್ನು ನಡೆಸಿ ಅವುಗಳಲ್ಲಿ ಜಯಶೀಲನಾದ. ಕ್ರಿ.ಶ. ೧೬೦೪ರಲ್ಲಿ ಕಂದವಾಡಿಗುಡ್ಡ ಮತ್ತು ಪರಿಸರದಲ್ಲಿ ತರೀಕೆರೆಯವರನ್ನು ಎದುರಿಸಿ ಸೋಲಿಸಿದನಲ್ಲದೆ, ಪೂವಲ ಹನುಮಪ್ಪನಾಯಕನನ್ನು ಕೈಸೆರೆ ಹಿಡಿದು, 'ಗಾದ್ರಿ ಮತಿ ಹೆಬ್ಬುಲಿ' ಎಂಬ ಬಿರುದಿನಿಂದ ಹೊಗಳಿಸಿಕೊಂಡ"[೫] ಎಂಬ ಚಾರಿತ್ರಿಕ ವಿಚಾರವು ಗಮನಾರ್ಹವಾಗಿದೆ.

* ಮುದ್ದಣ್ಣ :

ಚಿತ್ರದುರ್ಗದ ಸರಣಿ ಕಾದಂಬರಿಗಳಲ್ಲಿ (ಕಂಬನಿಯ ಕುಯಿಲು, ರಾಜ್ಯದಾಹ, ರಕ್ತರಾತ್ರಿ, ತಿರುಗುಬಾಣ) ಮುದ್ದಣ್ಣನ ಪಾತ್ರವು ವರ್ಣರಂಜಿತ ಹಾಗೂ ರಕ್ತ ರಂಜಿತವಾಗಿ ಚಿತ್ರಿಸಲ್ಪಟ್ಟಿರುವುದನ್ನು ಕಾಣುತ್ತೇವೆ. ಇದಕ್ಕೆ ಕಾರಣ ಮುದ್ದಣ್ಣನಲ್ಲಿರುವ ಅಧಿಕಾರ ದಾಹವೇ ಆಗಿದೆ. ಅದಕ್ಕಾಗಿ ಅವನಲ್ಲಿ ಕ್ರೌರ್ಯ ಮಡುಗಟ್ಟಿರುವುದನ್ನು ಕಾಣುತ್ತೇವೆ. "ಎಲ್ಲರ ತಲೆಗಳು ಉರುಳಿದರೂ ಚಿಂತೆಯಿಲ್ಲ, ಲಿಂಗಣ್ಣ ನಾಯಕನನ್ನು ಇಲ್ಲವೇ ಅವನ ಸಹೋದರ ಚಿಕ್ಕಣ್ಣನಾಯಕನನ್ನು ಪಟ್ಟಕ್ಕೆ ತರಲೇಬೇಕು ಎಂಬ ಛಲ ಅವನದು. ಇಲ್ಲಿ ಲಿಂಗಣ್ಣ ನಾಯಕನನ್ನು ಪಟ್ಟಕ್ಕೆ ತರುವದು ನ್ಯಾಯ ಸಮ್ಮತವೆಂಬ ವಿಚಾರಕ್ಕಿಂತ ಸೇನೆಯ ಸರ್ವಾಧಿಕಾರತ್ವವನ್ನು ಸ್ಥಾಪಿಸಿ ತನ್ನ ರಾಕ್ಷಸೀ ಮಹತ್ವಾಕಾಂಕ್ಷೆಯನ್ನು ಈಡೇರಿಸಿಕೊಳ್ಳುವುದು ಮುಖ್ಯ ಉದ್ದೇಶವಾಗಿತ್ತು."[೬] ಶಂ.ಗು.ಬಿರಾದಾರ ಅವರ ಮಾತು ಸೂಕ್ತವಾದುದು. ಇದಕ್ಕಾಗಿಯೇ ಮುದ್ದಣ್ಣನು ತನ್ನ ದುರಹಂಕಾರದ ಕ್ರೂರ ವ್ಯಕ್ತಿತ್ವವನ್ನು ಮೆರೆಯುತ್ತಾನೆ. ತನ್ನ ಅಭಿಪ್ರಾಯಕ್ಕೆ ಒಪ್ಪದಿದ್ದಾಗ, ಮತ್ತೊಬ್ಬ ದಳವಾಯಿ ದೇಸಣ್ಣನನ್ನು ಬರ್ಬರವಾಗಿ ಹತ್ಯೆ ಮಾಡುತ್ತಾನೆ. ಅಷ್ಟೇಕೆ ಪಟ್ಟಾಭಿಷಿಕ್ತ ದೊರೆ ಓಬಣ್ಣನಾಯಕನನ್ನು ಹಿಂಸಿಸಿ ಬರ್ಬರವಾಗಿ ಕೊಲೆಗೈಯುತ್ತಾನೆ. ತನ್ನ ಕೈಗೊಂಬೆಯಾಗಿ ವರ್ತಿಸುವ ನಾಯಕನನ್ನು ಪಟ್ಟಕ್ಕೆ ತಂದು ಸರ್ವಾಧಿಕಾರಿಯಾಗಿ ಮೆರೆಯಲು ಸಂಚು ರೂಪಿಸುತ್ತಾನೆ. ಆತನ ಕರಾಳ ವ್ಯಕ್ತಿತ್ವ ಚಿತ್ರಣವನ್ನು ತ.ರಾ.ಸು. ಅವರು ಅತ್ಯಂತ ರಕ್ತ ರಂಜಿತವಾಗಿಯೇ ಚಿತ್ರಿಸಿದ್ದಾರೆ. ರಾಜ್ಯದಾಹಕ್ಕಾಗಿಯೇ ನಡೆಸುವ ದುಷ್ಕೃತ್ಯವು, ಆ ಕೃತ್ಯ ಎಸಗಿದ ವ್ಯಕ್ತಿಗೆ ಮುಂದೆ ಹೇಗೆ ಮುಳುವಾಗುತ್ತಿದೆಂಬುದರ ಚಿತ್ರಣವನ್ನು ದಳವಾಯಿ ಮುದ್ದಣ್ಣನ ಪಾತ್ರದೊಂದಿಗೇ 'ತಿರುಗು ಬಾಣ ಕಾದಂಬರಿಯಲ್ಲಿ ಕಟ್ಟಿಕೊಟ್ಟಿದ್ದಾರೆ ಕಾದಂಬರಿಕಾರರು. ಒಬ್ಬ ಸಾಮಾನ್ಯ ಹೆಣ್ಣು ಮಗಳು ಗಿರಿಜೆ'ಯಿಂದ ಮುದ್ದಣ್ಣ ಹತ್ಯೆಯಾಗುತ್ತಾನೆ.

* ಚಿಕ್ಕಣ್ಣನಾಯಕ :

'ರಾಜ್ಯದಾಹ' ಕಾದಂಬರಿಯಲ್ಲಿ ಬರುವ ಚಿಕ್ಕಣ್ಣನಾಯಕನು ದಳವಾಯಿ ಮುದ್ದಣ್ಣನ ಅಣತಿಯಂತೆ ಪಟ್ಟಕ್ಕೆ ಬಂದವನು. ಇವನ ಹೆಸರಿನಲ್ಲಿ ಮುದ್ದಣ್ಣನು ಸರ್ವಾಧಿಕಾರಿಯಾಗಿ ಮೆರೆಯುತ್ತಾನೆ. ಚಿಕ್ಕಣ್ಣನಾಯಕನು ಹೆಣ್ಣು–ಹೆಂಡದ ದಾಸನಾಗಿ, ತಾನು ಅರಸನೆಂಬುದನ್ನೇ ಮರೆತು ಜೀವನದಲ್ಲಿ ಮೈಮರೆಯುತ್ತಾನೆ. ಈ ಒಂದು ಸತ್ಯದ ಅರಿವು ಅವನಿಗಾದಾಗ ಬದುಕು ಮುಗಿದ ಕಥೆಯಾಗಿರುತ್ತದೆ. ಈತನ ಚಿತ್ರಣದ ಮೂಲಕ ತ.ರಾ.ಸು. ಅವರು ಹೆಣ್ಣು–ಹೆಂಡಕ್ಕೆ ದಾಸನಾದ ವ್ಯಕ್ತಿಯ ಬದುಕಿನ ದುರಂತವನ್ನು ಸೂಚಿಸುತ್ತಾರೆ. ಮುದ್ದಣ್ಣನ ಸರ್ವಾಧಿಕಾರ ಈ ಕಾದಂಬರಿಯಲ್ಲಿ ಎಗ್ಗಿಲ್ಲದೇ ಮುಂದುವರೆದಿರುತ್ತದೆ. ಲಿಂಗಣ್ಣ ನಾಯಕ, ಚಿಕ್ಕಣ್ಣನ ಪಾತ್ರಗಳು ತಮ್ಮ ಇತಿಮಿತಿಗಳೊಂದಿಗೆ ಕಾಣಿಸಿಕೊಳ್ಳುತ್ತವೆ.

"ಚಿತ್ರದುರ್ಗದ ಸಂಸ್ಥಾನದ ಆರನೆಯ ದೊರೆಯೇ ಚಿಕ್ಕಣ್ಣನಾಯಕ. ಶಾಸನಗಳು ಹಾಗೂ ದಾಖಲೆಗಳಲ್ಲಿ ಈತನನ್ನು ಗುರುತಿಸುವುದು ಕಸ್ತೂರಿ ಚಿಕ್ಕಣ್ಣ ನಾಯಕನೆಂದು. ಈತ ಸಿಂಹಾಸನವನ್ನು ಪರಿಗ್ರಹಿಸಿದುದು ಚಿತ್ರದುರ್ಗದಲ್ಲಿ ತೀವ್ರ ರಾಜಕೀಯ ಕ್ಷೋಬೆ ಉಂಟಾಗಿದ್ದ ಪರಿಸ್ಥಿತಿಯಲ್ಲಿ"[೭] ಎಂಬ ವಿಚಾರ ಇತಿಹಾಸದಲ್ಲಿ ಕಂಡುಬರುತ್ತದೆ.

*** ಲಿಂಗಣ್ಣ ನಾಯಕ :**

ಒಬಣ್ಣ ನಾಯಕನ ಕೊಲೆಯ ನಂತರ, ಲಿಂಗಣ್ಣ ನಾಯಕನ ತಮ್ಮ ಪಟ್ಟಕ್ಕೆ ಬರುತ್ತಾನೆ. ಅಪುತ್ರಕನಾಗಿ ಇವನು ಸತ್ತಿದ್ದರಿಂದ, ಈ ಸಂದರ್ಭದಲ್ಲಿ ಲಿಂಗಣ್ಣ ನಾಯಕನನ್ನು ಪಟ್ಟಕ್ಕೆ ತರುವ ಪ್ರಯತ್ನವನ್ನು ಭರಮಣ್ಣ ಮತ್ತು ಪರಶುರಾಮಪ್ಪ ಮಾಡುತ್ತಾರೆ. ಇಂತಹ ಒಂದು ಚಿತ್ರಣ 'ರಕ್ತರಾತ್ರಿ' ಕಾದಂಬರಿಯಲ್ಲಿ ಕಂಡುಬರುತ್ತದೆ. "ಕಂಬನಿಯ ಕುಯಿಲಿನಲ್ಲಿ ಲಿಂಗಣ್ಣ ನಾಯಕನ ಕೆಚ್ಚು, ಸ್ಥೈರ್ಯ, ಧೈರ್ಯ, ತ್ಯಾಗಗಳು ಎದ್ದು ಕಂಡರೆ, ರಕ್ತರಾತ್ರಿಯಲ್ಲಿ ನಿರಾಶೆ, ಅಸಹಾಯಕತೆಗಳು ಗೋಚರಿಸುತ್ತವೆ. ಹೆತ್ತ ತಾಯಿಗಿಂತಲೂ ಮಿಗಿಲಾದ ಓಬವ್ವ ನಾಗತಿಯ ಅಪಮೃತ್ಯು ಓಬಣ್ಣನ ಕೊಲೆಯಿಂದಾಗಿ ಅವನಿಗೆ ಬದುಕಿನ ಬಗೆಗೆ ಜಿಗುಪ್ಸೆಯುಂಟಾಗುತ್ತದೆ. ಪರಶುರಾಮಪ್ಪ, ಭರಮಣ್ಣ, ಗಿರಿಜೆ ಮೊದಲಾದ ಹಿತೈಷಿಗಳ ಪ್ರೇರಣೆಯಿಂದ ಪಟ್ಟಾಧಿಕಾರ ವಹಿಸಿಕೊಂಡರೂ ಅದರಲ್ಲಿ ಆಸಕ್ತಿ ತೋರುವುದಿಲ್ಲ. ಧೂರ್ತನಾದ ಮುದ್ದಣ್ಣ ಹೆಣೆದ ಜಾಲದಲ್ಲಿ ಸಿಕ್ಕು ಚಡಪಡಿಸಬೇಕಾಗುತ್ತದೆ. ಅದನ್ನು ಹರಿದೊಗೆಯಬೇಕೆನ್ನುವಾಗಲೇ ತಲೆ ಉರುಳುತ್ತದೆ."[೮] ಎಂಬ ಶೋಧನೆಯು ಗಮನಾರ್ಹವಾಗಿದೆ. ಮುದ್ದಣ್ಣನು ಈ ಸಂದರ್ಭದಲ್ಲಿ ಶರಣಾಗತಿಯ ನೆಪದಲ್ಲಿ ಬಂದು ಲಿಂಗಣ್ಣ ನಾಯಕನನ್ನು ಬರ್ಬರವಾಗಿ ಹತ್ಯೆಗೈಯುವ ಪ್ರಸಂಗ ಮನಮಿಡಿಯುವಂತಹದ್ದಾಗಿದೆ.

*** ಪರಶುರಾಮಪ್ಪ :**

ಪರಶುರಾಮಪ್ಪ ರಾಜನಿಷ್ಠ ವ್ಯಕ್ತಿಗಳಲ್ಲಿ ಒಬ್ಬ. ಭುವನಪ್ಪನವರ ಮಗ. ಲಿಂಗಣ್ಣ ನಾಯಕನನ್ನು ಪಟ್ಟಕ್ಕೆ ತರುವಲ್ಲಿ ಇವನ ಪಾತ್ರವು ಪ್ರಮುಖವಾದುದು. ಇದು ಮಲ್ಲವ್ವ ನಾಗತಿಗೆ ಬೇಡದ ವಿಚಾರ. ಆದಾಗ್ಯೂ ಹೇಗಾದರೂ ಮಾಡಿ ಅವರ ಮನವೊಲಿಸಿ, ಲಿಂಗಣ್ಣ ನಾಯಕನನ್ನು ಪಟ್ಟಕ್ಕೆ ತರುವ ವಿಚಾರ ಪರಶುರಾಮಪ್ಪನವರದು. ಅದಕ್ಕಾಗಿ ಕಲ್ಲುಮಠದ ಗುರುಗಳನ್ನು ಕಂಡು ಮಲ್ಲವ್ವ ನಾಗತಿಯ ಮನವೊಲಿಸುವಂತೆ ಕೇಳಿಕೊಳ್ಳುತ್ತಾನೆ. ಆ ವಿಚಾರವಾಗಿ ಉಗ್ರಚನ್ನವೀರಸ್ವಾಮಿಗಳೊಂದಿಗೆ ಚರ್ಚಿಸುತ್ತಾನೆ ಇದಕ್ಕೆ ಸ್ವಾಮಿಗಳು ಒಪ್ಪುತ್ತಾರೆ.

*** ಭರಮಪ್ಪ ನಾಯಕ:**

'ತಿರುಗು ಬಾಣ'ದಲ್ಲಿ ಮುದ್ದಣ್ಣ ಸರ್ವಾಧಿಕಾರದ ಕಿಚ್ಚು ಆರಿದ ಮೇಲೆ ಚಿತ್ರದುರ್ಗದಲ್ಲಿ ಹೊಸರಕ್ತ, ಹೊಸ ಚೈತನ್ಯ ತುಂಬಿದ ಆಡಳಿತವನ್ನು 'ಹೊಸಹಗಲು' ಕಾದಂಬರಿಯಲ್ಲಿ ಕಾಣುತ್ತೇವೆ.

ಭರಮಪ್ಪನಾಯಕ ಮೊದಲು ಕುರಿಕಾಯುವ ಕೆಲಸವನ್ನು ನಿರತನಾಗಿರುತ್ತಾನೆ. ಅವನಿಗೆ ರಾಜ್ಯದ ಮೇಲೆ ವಿಶೇಷ ಆಸಕ್ತಿ, ಪ್ರೀತಿಯಿತ್ತು. ಆ ಕಾರಣಕ್ಕಾಗಿ ದುರ್ಗದ ಸಿಂಹಾಸನ ಪಡೆಯಬೇಕೆಂಬ ಮಹದಾಸೆ ಅವನಲ್ಲಿ ಬಲವಾಗಿತ್ತು. ದಿನವೂ ಅದೇ ಚಿಂತೆ, ಅದೇ ಕನಸು, ಅದೇ ಮಹತ್ವಾಕಾಂಕ್ಷೆ. ಇಂತಹ ಅವನ ಕನಸು ನನಸಾಗುತ್ತದೆ. ಒಂದು ದಿನ ಮುರುಘರಾಜೇಂದ್ರ ಸ್ವಾಮಿಗಳ ದರ್ಶನವಾಗಿ, ನೀನೇ ದುರ್ಗದ ನಾಯಕನಾಗುವ ಯೋಗ ಕೂಡಿ ಬಂದಿದೆ ಎಂದು ಹೇಳಿದಾಗ, ಭರಮಣ್ಣನಾಯಕನ ಸಂತೋಷಕ್ಕೆ ಪಾರವೇ ಇರಲಿಲ್ಲ. "ಶಾಲಿವಾಹನ ಶಕೆ ೧೬೧೧ನೆಯ ಸಂವತ್ಸರದ ಅಶ್ವಯುಜ ಶುದ್ಧ ದಶಮಿಯ ದಿನ. ಆ ದಿನ ಚಿತ್ರದುರ್ಗದ ಇತಿಹಾಸದಲ್ಲೇ ಚಿರಸ್ಮರಣೀಯವಾದ ಸುವರ್ಣ ದಿನವಾಯಿತು. ಆ ದಿನ ದಳವಾಯಿ ಮುದ್ದಣ್ಣನ ಮರಣಾನಂತರದ ಬಳಿಕ ಮಬ್ಬು ಕವಿದ ಅಸ್ಪಷ್ಟತೆಯ ವಾತಾವರಣ ತೊಲಗಿ, ಚಿತ್ರದುರ್ಗದ ಸಿಂಹಾಸನದ ಮೇಲೆ ಬಿಳಿಜೋಡಿನ ಭರಮಣ್ಣನಾಯಕನ ಅಧಿಕಾರ ಸ್ಥಾಪನೆಯಾಯಿತು. ಚಿತ್ರದುರ್ಗದ ಜೀವನದಲ್ಲಿ ಹೊಸಯುಗ ಆರಂಭವಾಯಿತು."[೯] ಇದಾದ ನಂತರ ಭರಮಣ್ಣ ನಾಯಕನ ಬಿಚ್ಚುಗತ್ತಿ ಒರೆಯನ್ನು ಸೇರಲಿಲ್ಲ. ಇವನ ಕಾಲದ ಅಭಿವೃದ್ಧಿಯ ದೆಸೆಯಿಂದಾಗಿ ಚಿತ್ರದುರ್ಗ ಇತಿಹಾಸದಲ್ಲಿ ಸುವರ್ಣ ಯುಗವಾಯಿತು.

ಪರಶುರಾಮಪ್ಪ, ಭರಮಣ್ಣ ರಂಗಪ್ಪನಾಯಕ, ಚಿಕ್ಕಣ್ಣ, ಜೋಗನಾಯಕ, ಹನುಮಪ್ಪನಾಯಕ, ದೇಸನಾಯಕ ಹಾಗೂ ಮುರುಘರಾಜೇಂದ್ರ ಸ್ವಾಮಿಗಳ ಪಾತ್ರಗಳು ಸಾಂದರ್ಭಿಕವಾಗಿ 'ಹೊಸಹಗಲು' ಮತ್ತು 'ವಿಜಯೋತ್ಸವ' ಕಾದಂಬರಿಗಳಲ್ಲಿ ಗಮನ ಸೆಳೆಯುತ್ತವೆ.

*** ಜಾನ್ ಡ್ಯುವೋರೊ :**

'ವಿಜಯೋತ್ಸವ' ಕಾದಂಬರಿಯಲ್ಲಿ ಬರುವ ಜಾನ್ ಡ್ಯುವೋರೊ ಎಂಬ ವ್ಯಕ್ತಿ ಫ್ರಾನ್ಸ ದೇಶದವನು. ಮರಾಠರನ್ನು ಮುರಿದ ಮೊಗಲ ಸೇನೆಯಲ್ಲಿ ಉದ್ಯೋಗಿಯಾಗಿದ್ದನು. ನಂತರದ ದಿನಗಳಲ್ಲಿ ಮರಾಠಿ ದೊರೆ ಸಂತೋಜಿ ಕೈಗೆ ಸೆರೆಸಿಕ್ಕು ನುಣುಚಿಕೊಂಡಿದ್ದನು. ಮುಂದೆ ರಾಜರ ಸಮ್ಮತಿಯ ಮೇರೆಗೆ ದುರ್ಗದ ಕೋಟೆಯ ರೂಪುರೇಷೆಗಳನ್ನು ತಯಾರಿಸುತ್ತ ಅವರ ಪ್ರೀತಿಗೆ ಪಾತ್ರದಾರನಾಗಿರುತ್ತಾನೆ. ಗಾಯಕಿ, ಸುಂದರಿ ಮೆಹರಾಬಾನುವಿನ ಪ್ರೇಮದ ಸೆಳೆತಕ್ಕೆ ಒಳಗಾಗುತ್ತಾನೆ. ಅವಳನ್ನೇ ಮದುವೆಯಾಗಬೇಕೆಂದು ತೀರ್ಮಾನಿಸುತ್ತಾನೆ. ಆದರೆ ಮರಾಠರ ಸಂತೋಜಿ ಮೇಲಿನ ಪ್ರತೀಕಾರಕ್ಕಾಗಿ ದೊಡ್ಡೇರಿ ಕಾಳಗದಲ್ಲಿ ಭಾಗವಹಿಸುತ್ತಾನೆ. ಅಲ್ಲಿ ಸಂತೋಜಿಯ ಕೊಲೆ ಮಾಡುತ್ತಾನೆ.

* **ಜುಲ್‌ಫಿಕಾರ್ ಖಾನ್ :**

ಇವನು ಸೀರ್ಯದ ವಕೀಲರ ಮುಖ್ಯಸ್ಥನಾಗಿ ದುರ್ಗಕ್ಕೆ ಬಂದವನು. ಸೀರ್ಯದ ದೊರೆಯ ಮಾತಿನಂತೆ ಮೆಹರಾಬಾನುನನ್ನು ಕರೆದುಕೊಂಡು ದುರ್ಗಕ್ಕೆ ಬಂದು, ಅವಳಿಗೆ ಗುಢಾಚಾರ ಕಾರ್ಯಕ್ಕೆ ಒಪ್ಪಿಸುತ್ತಾನೆ. ಅಷ್ಟೇ ಅಲ್ಲ ಮೆಹರ್‌ಬಾನುವಿನ ಸೌಂದರ್ಯಕ್ಕೆ ಮಾರುಹೋಗುತ್ತಾನೆ. ಅವಳ ಸೌಂದರ್ಯವನ್ನು ನೆನೆದು ಹುಚ್ಚನಂತಾಗುತ್ತಾನೆ. 'ಮಧುರವಾದ ದ್ರಾಕ್ಷಾರಸವೂ ಅವನ ನಾಲಗೆಗೆ ಆ ದಿನ ಕಹಿಯಾಗಿತ್ತು' ಎಂಬಂತೆ ಕಾದಂಬರಿಕಾರರು ಅವನ ವಿರಹದಬೇಗೆಯನ್ನು ಚಿತ್ರಿಸಿದ್ದಾರೆ. ಸಂತೋಜಿ ಘೋರ್ಪಡೆಯ ರಾಜ್ಯ ಲೂಟಿಯ ಚಾಕಚಕ್ಯತೆಯು ಈ ಕಾದಂಬರಿಯಲ್ಲಿ ಚಿತ್ರಿತಗೊಂಡಿದೆ. ಕೊನೆಗೆ ೬ ವರ್ಷದ ಬಾಲಕ ಭರಮಣ್ಣ ನಾಯಕನ ಪ್ರಸ್ತಾಪವೂ ಕಾಣಸಿಗುತ್ತದೆ.

* **ಕಸ್ತೂರಿರಂಗಪ್ಪ ನಾಯಕ :**

ಈತನು 'ಕಸ್ತೂರಿ ಕಂಕಣ' ಕಾದಂಬರಿಯ ಕಥಾನಾಯಕ. ದುರ್ಗದ ದೊರೆ. ಸೀರ್ಯದ ರಂಗಪ್ಪ ನಾಯಕ ವಿವಾಹ ಸಂಬಂಧಕ್ಕಾಗಿ ದುರ್ಗಕ್ಕೆ ಪತ್ರ ಬರೆಯುತ್ತಾನೆ. ಈ ಕುರಿತು ಸಭೆಯಲ್ಲಿ ಚರ್ಚಿಸುವ ಕಸ್ತೂರಿ ರಂಗಪ್ಪನಾಯಕನು ಕೊನೆಗೆ ಒಂದು ತೀರ್ಮಾನಕ್ಕೆ ಬಂದು ತನ್ನ ಮಗಳ ಜಾತಕವನ್ನು ಸೀರ್ಯ ದೊರೆಗೆ ಕಳಿಸಿಕೊಡುತ್ತಾನೆ. ಸೀರ್ಯಾದವರು ಸುಳ್ಳು ಜಾತಕ ಬರೆಸುವುದರ ಮೂಲಕ, ಕಸ್ತೂರಿರಂಗಪ್ಪನ ಮಗಳನ್ನು ರಂಗಪ್ಪನಾಯಕನ ಮಗ ಕೃಷ್ಣನೊಂದಿಗೆ ವಿವಾಹಮಾಡಲಾಗುತ್ತದೆ. ಉದಾತ್ತ, ಉದಾರ, ಪ್ರಾಮಾಣಿಕ ವ್ಯಕ್ತಿಯ ಚಿತ್ರಣದಂತೆ ಕಸ್ತೂರಿ ರಂಗಪ್ಪನ ಮಾತ್ರ ಚಿತ್ರಿಸಲ್ಪಟ್ಟಿದೆ.

ಆದರೆ ಸೀರ್ಯದ ದೊರೆ ರಂಗಪ್ಪ ನಾಯಕನ ಪಾತ್ರ ಧೂರ್ತನಂತೆ ಚಿತ್ರಿಸಲ್ಪಟ್ಟಿದೆ. ವಿವಾಹ ಸಂಬಂಧ ಬೆಳೆಸಿ, ದುರ್ಗದ ಕೋಟೆಗೆ ಲಗ್ಗೆ ಹಾಕಬೇಕೆಂಬ ಅವನ ಸಂಚು ಕೊನೆಗೆ ಬಯಲಾಗುತ್ತದೆ. ದುರ್ಗದ ಸೇನೆಯ ಎದುರು ಸೋಲನ್ನು ಅನುಭವಿಸಬೇಕಾಗುತ್ತದೆ. ಉಳಿದಂತೆ ವಿರುಪಾಕ್ಷಪ್ಪ, ಬಿಳಿಜೋಡು ಬಾಲಯ್ಯ, ಚೆನ್ನೂರ ಸಿದ್ಧಯ್ಯ, ದಳವಾಯಿ ದೇಸಣ್ಣ, ದಳವಾಯಿ ಸೂರ ನಾಯಕ, ಪ್ರಧಾನಿ ಶಾಮಯ್ಯ, ರಾಮಾಶಾಸ್ತ್ರಿ, ನಾರಾಯಣ ಜೋಯಿಸ ಹಾಗೂ ವಕೀಲ ವೆಂಕಪ್ಪಯ್ಯರ ಪಾತ್ರಗಳು ಕಾದಂಬರಿಯ ಜೀವಂತಿಕೆಗೆ ಪೂರಕವಾಗಿ ಬರುತ್ತವೆ.

* **ಮದಕರಿ ನಾಯಕ:**

ತ.ರಾ.ಸು. ಅವರ ಪ್ರಾತಿನಿಧಿಕ ಕಾದಂಬರಿಯಾದ 'ದುರ್ಗಾಸ್ತಮಾನ'ವು ಅವರ ಕೊನೆಯ ಕಾದಂಬರಿಯೂ ಆಗಿದೆ. ಇದರ ಕಥಾ ನಾಯಕ ಮದಕರಿನಾಯಕ. "ಚಿತ್ರದುರ್ಗದ ಜನತೆಯ ಹೃದಯದಲ್ಲಿ ನಿತ್ಯ ನಿವಾಸಿಯಾಗಿರುವ ಈ 'ಮದಕರಿನಾಯಕ'. ಚಿತ್ರದುರ್ಗವನ್ನು

ಆಳಿದ ನಾಯಕ ವಂಶದ ಕೊನೆಯ ದೊರೆ – 'ಚಿಕ್ಕಮದಕರಿನಾಯಕ'. ಈ ನಾಯಕ ವಂಶದಲ್ಲಿ ಹಲವಾರು ಮದಕರಿನಾಯಕರು ಆಳಿ, ಅಳಿದಿದ್ದರೂ ಚಿತ್ರದುರ್ಗದ ಜನತೆ 'ಮದಕರಿನಾಯಕ' ಎಂದ ಕೂಡಲೇ ನೆನಪಿಸಿಕೊಳ್ಳುವುದು ಈ ಕೊನೆಯ ದೊರೆಯನ್ನೇ ಆತನಲ್ಲದೆ ಬೇರೆ ಯಾರೂ ನೆನಪಿಗೆ ಬರುವುದಿಲ್ಲ. ಅದಕ್ಕೆ ಕಾರಣ ಆತನ ಜೀವನದ ದುರಂತ ಮತ್ತು ಆತನ ಶೌರ್ಯ, ಸಾಹಸ, ಕ್ರೌರ್ಯ, ಕಾಮ ಲೋಲುಪತೆಯ ಬಗ್ಗೆ ಜನಜನಿತವಾಗಿರುವ ಹಲವಾರು ದಂತಕತೆಗಳು, ನಾಡಹಾಡುಗಳು."[೧೦೦] ಎಂದು ಹೇಳುವ ತ.ರಾ.ಸು. ಅವರು ಈ ಹಿನ್ನೆಲೆಯಲ್ಲಿ ಮದಕರಿನಾಯಕನನ್ನು ದುರಂತನಾಯಕನಂತೆ ಚಿತ್ರಿಸಿದ್ದಾರೆ. ಇವನ ಪಾತ್ರ ಚಿತ್ರಣದಲ್ಲಿ ಕಾದಂಬರಿಕಾರರು ಮೂಲ ಇತಿಹಾಸದಿಂದ ಕೆಲ ಬದಲಾವಣೆಗಳನ್ನು ಮಾಡಿಕೊಂಡಿರುವ ಸಂಗತಿ ಗೋಚರಿಸುತ್ತದೆ. "ಕಡೆಯ ಮದಕರಿನಾಯಕನ ಆಳ್ವಿಕೆ ಆರಂಭವಾದದು ಕ್ರಿ.ಶ. ೧೭೫೪ರಲ್ಲಿ ದುರ್ಗವು ಹೈದರಾಲಿಯ ವಶವಾಗಿ ಮದಕರಿನಾಯಕ ಬಂಧಿವಾದದ್ದು ಕ್ರಿ.ಶ.೧೭೭೯ರಲ್ಲಿ. ಕೆಲವು ತಿಂಗಳುಗಳ ನಂತರ ಮದಕರಿನಾಯಕ ಬಂಧನದಲ್ಲಿದ್ದಾಗಲೇ ಸೆರೆಮನೆಯಲ್ಲಿ ಮೃತನಾದ. ಇದು ತಿಳಿದಿರುವ ಇತಿಹಾಸ. ಎಂ.ಎಸ್.ಪುಟ್ಟಣ್ಣ ಅವರ 'ಚಿತ್ರದುರ್ಗದ ಪಾಳೆಯಗಾರರು' ಕೃತಿಯ ಮೂಲಕ ವಿವರಗಳು ಲಭ್ಯ. ಹೂಲ್ಲೂರು ಶ್ರೀನಿವಾಸ ಜೋಯಿಸರು ಇದೇ ಇತಿಹಾಸವನ್ನು ಸಂಕ್ಷಿಪ್ತವಾಗಿ ಮತ್ತು ವಿವರವಾಗಿ ಓದುಗರ ಗಮನಕ್ಕೆ ತಂದಿದ್ದಾರೆ. ಅನಂತರದ ಹಲವು ವಿದ್ವಾಂಸರೂ ಎಲ್ಲ ವಿಚಾರಗಳನ್ನು ಒಪ್ಪಿಕೊಂಡಿದ್ದಾರೆ."[೧೦೧] ಎಂಬ ಎಚ್.ಎಸ್. ಗೋಪಾಲರಾವ್ ಅವರ ಮಾತು ಒಪ್ಪತಕ್ಕದ್ದಾಗಿದೆ. ಆದರೆ ತ.ರಾ.ಸು. ಅವರು ಮದಕರಿನಾಯಕನು ರಣರಂಗದಲ್ಲಿ ಹೋರಾಡುತ್ತಾ ವೀರಮರಣವನ್ನಪ್ಪಿದ ಎಂಬಂತೆ ಚಿತ್ರಿಸಿದ್ದಾರೆ. ಇದಕ್ಕೆ ಕಾರಣ, ತ.ರಾ.ಸು. ಅವರಿಗೂ ಚಿತ್ರದುರ್ಗಕ್ಕೂ ಅವಿನಾಭಾವ ಸಂಬಂಧವಿದೆ. ಅವರು ಮದಕರಿನಾಯಕನ ಮೇಲೆ ಇರಿಸಿದ ವಿಶೇಷ ಪ್ರೀತಿಯೇ ಈ ರೀತಿಯ ಬದಲಾವಣೆಗೆ ಕಾರಣವಾಗಿದೆ ಎಂದು ಅಭಿಪ್ರಾಯ ಪಡಲಾಗಿದೆ.

"ರಾಜಾ ವೀರ ಮದಕರಿನಾಯಕ ಮತ್ತು ಜನಕ್ಕೆ ಓಬವ್ವರಂಥಾ ಪ್ರಮುಖ ಹಾಗೂ ಪ್ರತಿಷ್ಠಿತ ಐತಿಹಾಸಿಕ ಸಂಕೇತಗಳು ದೇಶದ್ಯಾಂತ ತಮ್ಮ ಪ್ರಭಾವ ಬೀರಿದುದು ಗಮನಾರ್ಹ. ಚಿತ್ರದುರ್ಗ ಮಾತ್ರವಲ್ಲದೆ, ಕರ್ನಾಟಕದ ಹಲವೆಡೆಗಳಲ್ಲಿ ಮುಖ್ಯವೃತ್ತ, ಮಂದಿರ, ವಾಹನ, ಸಂಘಟನೆ, ಶಿಕ್ಷಣ ಸಂಸ್ಥೆ ಇತ್ಯಾದಿಗಳಿಗೆ ಮದಕರಿನಾಯಕನ ಹೆಸರನ್ನಿಡುವ ಮೂಲಕ ಈ ವೀರನ ನೆನಪನ್ನು ಚಿರಸ್ಥಾಯಿಗೊಳಿಸುವ ಪ್ರಯತ್ನ ನಡೆದುದು ಶ್ಲಾಘನೀಯ"[೧೦೨]

"ಇತ್ತ ಬಂಧನದಲ್ಲಿದ್ದ ಮದಕರಿ ನಾಯಕನಿಗೆ ಆಹಾರದಲ್ಲಿ ವಿಷಹಾಕಿ ಕೊಲ್ಲಲಾಯಿತು"[೧೦೩] ಎಂಬ ಅಭಿಪ್ರಾಯವು ಇದೆ. ಆದರೆ, ಮದಕರಿನಾಯಕನ ಮೇಲೆ ಚಿತ್ರದುರ್ಗದ ಜನತೆ ಇರಿಸಿಕೊಂಡ ಅಭಿಮಾನದಿಂದಾಗಿ ತ.ರಾ.ಸು. ಅವರು ಅವನೊಬ್ಬನನ್ನು

ವೀರ ವ್ಯಕ್ತಿಯಂತೆ ಕಂಡಿದ್ದಾರೆ. ಸಂದರ್ಭಕ್ಕನುಗುಣವಾಗಿ ಕೆಲ ಮಾರ್ಪಾಡುಗಳನ್ನು ಮಾಡಿಕೊಂಡು ಅವನ ಪಾತ್ರ ಚಿತ್ರಣವನ್ನು ತಮ್ಮ ಕಾದಂಬರಿಯಲ್ಲಿ ಕೊಟ್ಟಿದ್ದು ಮಾತ್ರ ಗಮನಾರ್ಹ ಸಂಗತಿಯಾಗಿದೆ.

೧೨ ವರ್ಷದ ಬಾಲಕನಿರುವಾಗಲೇ ಮದಕರಿನಾಯಕನನ್ನು ಪಟ್ಟಕ್ಕೆ ತರಲಾಗುತ್ತದೆ. ಓಬವ್ವ ನಾಗತಿ ಮತ್ತು ಕಳ ನರಸಪ್ಪಯ್ಯನವರು ರಾಜವಿದ್ಯೆಗಳನ್ನು ಕಲಿಸಿಕೊಡುತ್ತಾರೆ. 'ಪಟ್ಟದ ಮೇಲೆ ಚೋಟುದ್ದ ಹುಡುಗ, ಆಡಳಿತ ಮಾಡೊಳು' ಮುದುಕಿ ಎಂದು ರಾಯದುರ್ಗದವರು ಕೆಣಕಿ ಯುದ್ಧ ಸಾರಿದಾಗ, ಆ ಸಂದರ್ಭದಲ್ಲಿ ದುರ್ಗದ ಸೇನೆ ವೀರಾವೇಶದಿಂದ ಹೋರಾಡಿ ಗೆಲುವು ಸಾಧಿಸುತ್ತದೆ. ಆ ಯುದ್ಧದಲ್ಲಿ ಮದಕರಿನಾಯಕನ ವೀರತ್ವವನ್ನು ವರ್ಣಿಸುವಾಗ ಬರುವ ವಾಕ್ಯವನ್ನು ನೋಡಿ, "ತಂಬಿಗೆ ರಕ್ತಕ್ಕೆ ಹೇಸಿದ ಮದಕರಿನಾಯಕ – ರಕ್ತಸ್ನಾನ ಮಾಡಿ, ರಣಕೇಕೆ ಹಾಕುತ್ತಾ, ಕತ್ತರಿಸಿದ ಶತ್ರು ತಲೆಗಳನ್ನು ಜುಟ್ಟು ಹಿಡಿದು' ತೂಗಾಡಿಸುತ್ತ ಬಂದ ಮದಕರಿನಾಯಕನನ್ನು ಕಂಡು – 'ನೀನು ಗಂಡು, ನಿನ್ನನ್ನು ಮಗ ಎಂದು ಕರೆದದ್ದು ಸಾರ್ಥಕವಾಯಿತು" ಎಂದು ಓಬವ್ವ ನಾಗತಿಯ ಬಾಯಿಂದ ಹೇಳಿಸುವ ಮೂಲಕ ತ.ರಾ.ಸು. ಅವರು ಮದಕರಿನಾಯಕನ ವೀರಗುಣದ ಚಿತ್ರಣವನ್ನು ಕೊಟ್ಟಿದ್ದಾರೆ. ಕೊನೆಗೆ ಹೈದರಾಲಿಯೊಂದಿಗೆ ಹೋರಾಡಿ ವೀರ ಮದಕರಿನಾಯಕನು ರಣರಂಗದಲ್ಲಿ ವೀರಮರಣವನ್ನು ಅಪ್ಪುತ್ತಾನೆ.

*** ಕಳ್ಳಿ ನರಸಪ್ಪಯ್ಯ :**

ಕಳ್ಳಿನರಸಪ್ಪಯ್ಯ ಪಾತ್ರಕ್ಕೆ ಐತಿಹಾಸಿಕವಾಗಿ ಅಷ್ಟೊಂದು ಮಹತ್ವ ಇರದಿದ್ದರೂ ತ.ರಾ.ಸು. ಅವರು ಆ ಪಾತ್ರಕ್ಕೆ ಹೆಚ್ಚಿನ ಗಮನಕೊಟ್ಟಿದ್ದನ್ನು ಕಾಣಬಹುದು. ಇವನು ದುರ್ಗದ ಪ್ರಧಾನಿ. ತನ್ಮೂಲಕ ಮದಕರಿನಾಯಕನಿಗೆ ನೆರವಾದವನು. "ಚಾರಿತ್ರಿಕ ದಾಖಲೆಗಳಲ್ಲಿ ಪ್ರಧಾನಿಯೆಂದು ಎಲ್ಲೂ ಹೆಸರಿಸದಿರುವ, ಆದರೆ ರಾಜನ ಸಭೆಯಲ್ಲಿ ಮುಖ್ಯ ಆಹ್ವಾನಿತರಲ್ಲಿ ಒಬ್ಬನಾಗಿರುತ್ತಿದ್ದ. ಕಳ್ಳಿ ನರಸಪ್ಪ ಎಂಬುವನು ಕಾದಂಬರಿಯಲ್ಲಿ ಉದ್ದಕ್ಕೂ ಪ್ರಧಾನಿಯೆಂದು ಹೆಚ್ಚು ಕಡಿಮೆ ಚಾಣಕ್ಯನ ತತ್ಸಮಾನನಾದ ವರ್ಚಸ್ವೀ ವ್ಯಕ್ತಿಯಾಗಿ ವರ್ಣಿತನಾಗಿದ್ದಾನೆ. ದುರ್ಗದ ಪತನಕ್ಕೆ, ಕಾರಣನಾದ, ಹೈದರನ ಕಡೆ ಸೇರಿದ ಪಿತೂರಿಕಾರರಲ್ಲಿ ಅವನು ಒಬ್ಬನೆಂದು ಜನಪದ ಸಾಹಿತ್ಯ ತಿಳಿಸುವುದಾದರೂ, ದಾಖಲೆಗಳಲ್ಲಿ ಆ ವಿವರಗಳಿಲ್ಲ. ಅಲ್ಲದೆ ಹೈದರಾಲಿ ದುರ್ಗವನ್ನು ಗೆದ್ದ ಮೇಲೆ ಷೇಕ್ ಅಯಾಸ್ ಎಂಬುವವನನ್ನು ಅದರ ಆಡಳಿತ ನೋಡಿಕೊಳ್ಳಲು ನೇಮಿಸಿದಾಗ ಅವನಿಗೆ ಆಡಳಿತ ಸಹಾಯಕನಾಗಿ ಹೈದರನಿಂದ ನೇಮಿಸಲ್ಪಟ್ಟವನು ಕಳ್ಳಿ ನರಸಪ್ಪ. ಆದರೆ ಕಾದಂಬರಿಯಲ್ಲಿ ಅವನು ಸ್ವಾಮಿನಿಷ್ಠ ಸತ್ಯಸಂಧ ಪ್ರಧಾನಿಯಾಗಿ, ಕಡೆಯಲ್ಲಿ ಅವನ ಮಗ ಮಾಡಿದ ತಪ್ಪಿಗೆ

ಆತ್ಮಹತ್ಯೆ ಮಾಡಿಕೊಳ್ಳುವಂತಹ ಉದಾತ್ತನಾಗಿ ಚಿತ್ರಿತನಾಗಿದ್ದಾನೆ. ಚರಿತ್ರೆಯಲ್ಲಿ ವಾಸ್ತವವಾಗಿ ಹೈದರಾಲಿಯ ಸೇವೆಯಲ್ಲಿದ್ದ, ಬದುಕಿ ಉಳಿದ ವ್ಯಕ್ತಿ, ತ.ರಾ.ಸು. ಅವರಲ್ಲಿ ಮೃತನಾಗಿ ಹೋಗುತ್ತಾನೆ. ಚರಿತ್ರೆಯಲ್ಲಿ ಬದುಕಿ ಉಳಿದವನನ್ನು ಸಾಯಿಸುವ ರೀತಿ ಲೇಕಕರು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಬಳಸಿರುವುದು ಸಮ್ಮತವೆನಿಸುತ್ತದೆಯೇ? ಇದು ಎಷ್ಟು ಸಮರ್ಥನೀಯ ಎಂಬುದನ್ನು ವಿಚಾರ ಮಾಡಬೇಕಾಗಿದೆ."[೨೦೯] ಎಂಬ ಮಾತುಗಳು ಪರಮಾರ್ಶೆಗೆ ಯೋಗ್ಯವೆನಿಸುತ್ತವೆ. ಐತಿಹಾಸಿಕ ವಿವರಗಳನ್ನು ಮರೆಮಾಚಿ ತ.ರಾ.ಸು. ಅವರು ಕಳ್ಳಿ ನರಸಪ್ಪಯ್ಯನನ್ನು ಉದಾತ್ತೀಕರಣಗೊಳಿಸಿದ್ದಾರೆ. ಕಳ್ಳಿನರಸಪ್ಪನು ಹೈದರಾಲಿ ಪರವಾಗಿ ಗೂಢಚರ್ಯ ಕಾರ್ಯವನ್ನು ಮಾಡುತ್ತಿದ್ದಾನೆಂಬ ವಿಷಯ ಮದಕರಿನಾಯಕನಿಗೆ ತಿಳಿದಿರುತ್ತದೆ. ಅದಕ್ಕಾಗಿಯೇ ಅವನಿಂದ ಪ್ರಧಾನಿಪಟ್ಟಕ್ಕೆ ರಾಜೀನಾಮೆ ಕೊಡುವಂತೆ ಮಾಡುತ್ತಾನೆ. ಈ ಸಂದರ್ಭದಲ್ಲಿ ದುರ್ಗವನ್ನು ಬಿಟ್ಟು ಕಳ್ಳಿನರಸಪ್ಪಯ್ಯ ತೀರ್ಥಯಾತ್ರೆಗೆ ಹೋಗುತ್ತಾನೆ.

*** ಹೈದರಾಲಿ :**

ಹೈದರಾಲಿಯ ವೀರೋದಾತ್ತ ವ್ಯಕ್ತಿಯಾದರೂ ಅವನಲ್ಲಿನ ಕೃತಘ್ನಭಾವನೆಯಿಂದ ಮಹಾವಂಚಕನಂತೆ ಕಾದಂಬರಿಯಲ್ಲಿ ಚಿತ್ರಿಸಲ್ಪಟ್ಟಿದ್ದಾನೆ. ಅವನ ಸಮಯಸಾಧಕತನ ಕಾದಂಬರಿಯಲ್ಲಿ ಅನೇಕ ಸಂದರ್ಭಗಳಲ್ಲಿ ಕಂಡುಬರುತ್ತದೆ. ದುರ್ಗದ ಏಳಿಗೆಯನ್ನು ಸಹಿಸದ ಸಂಚುಕೋರನಾಗಿ ಹೈದರಾಲಿ ಕಾಣುತ್ತಾನೆ. ಹೈದರಾಲಿ ನಡೆಸುವ ಹಲವು ಯುದ್ಧಗಳಲ್ಲಿ ಮದಕರಿ ನಾಯಕ ನೆರವಾಗುತ್ತಾನೆ. ನಗರ ಸಂಸ್ಥಾನ ಹಾಗೂ ಬಂಕಾಪುರದ ಕೋಟೆಗಳಲ್ಲಿ ಗೆದ್ದುಕೊಡುತ್ತಾನೆ. ಇವೆಲ್ಲವನ್ನೂ ಮರೆತು ಹೈದರಾಲಿಯು ದುರ್ಗದ ಕೋಟೆಯನ್ನು ವಶಪಡಿಸಿಕೊಳ್ಳಲು ನಾನಾ ತಂತ್ರ ಮತ್ತು ಕುತಂತ್ರಗಳನ್ನು ನಡೆಸುವುದು ದುರ್ಗಾಸ್ತಮಾನ ಕಾದಂಬರಿಯುದ್ಧಕ್ಕೂ ಚಿತ್ರಿತವಾಗಿದೆ. 'ಮದಕರಿ ನಾಯಕನನ್ನು ಹಿಡಿಯಬೇಕು, ಜೀವಂತ ಹಿಡಿಯಬೇಕು' ಇದು ಹೈದರಾಲಿ ತನ್ನ ಸೈನಿಕರಿಗೆ ಕೂಗಿ ಕೂಗಿ ಮಾಡಿದ ಅಪ್ಪಣೆ. ಸುತ್ತಲು ನೂರಾರು ಕತ್ತಿಗಳು ಹಸಿದ ಹಾವಂತೆ ಮುನ್ನುಗ್ಗುತ್ತಿದ್ದವು. ಕೋವಿಗುಂಡುಗಳು ಹಾಕುತ್ತಿದ್ದವು. ಹೀಗೆ, ಹೈದರನು ದುರ್ಗದ ಮೇಲೆ ಯುದ್ಧ ಸಾರಿ ಕೋಟೆಯನ್ನು ವಶಪಡಿಸಿಕೊಳ್ಳುತ್ತಾನೆ.

**೨. ಮಹಿಳೆ :**

*** ಲಕ್ಷೀದೇವಿ :**

ನೃಪತುಂಗ ಕಾದಂಬರಿಯಲ್ಲಿ ಬರುವ ರಾಣಿ ಲಕ್ಷ್ಮೀದೇವಿಯ ಪಾತ್ರವು ಬಹುಆಕರ್ಷಣೀಯವಾಗಿ ಚಿತ್ರಿಸಲ್ಪಟ್ಟಿದೆ. ದೊರೆ ನೃಪತುಂಗನ ಜೊತೆ ನಡೆಸುವ ಅವಳ ಸಂಭಾಷಣೆಯನ್ನು ನೋಡಬಹುದು. "ಗಂಡು ಮಗುವಾಗಬೇಕು, ಮನೆಗೆ, ರಾಜ್ಯಕ್ಕೆ, ಮನಕ್ಕೆ

ದಿಕ್ಕು ತೋರಿಸುವ ಧೃವತಾರೆಯಂಥ ಪುತ್ರನಾಗಬೇಕು ಎಂಬ ಆಕಾಂಕ್ಷೆ ಚಕ್ರವರ್ತಿಗಳಲ್ಲಿ ಎಷ್ಟು ಪ್ರಬಲವಾಗಿತ್ತೆಂದು ಲಕ್ಷ್ಮೀ ದೇವಿ ಬಲ್ಲರು. ಇಂದು, ಆ ಬಯಕೆ ತೀರಿದ ದಿನವಾದರೂ ಕೊಂಚ ಆ ಸಮಯವನ್ನು ಮರೆತು ನಗಬಾರದೆ? ಎಣ್ಣೆ ತುಂಬಿ ಬತ್ತಿಯ ಕಾಳಿಕೆಯನ್ನು ಒರೆಸಿ ಮೇಲೆತ್ತಿದಾಗಲಾದರೂ ದೀಪ ಹೆಚ್ಚಿನ ಬೆಳಕು ಮುಕ್ಕಳಿಸಬಾರದೇ ಎನಿಸಿ ವ್ಯಥೆಯಾಯಿತು ಮಹಾರಾಜ್ಞೆಗೆ"[೧೦೫] ಎಂಬಂತೆ ತ.ರಾ.ಸು. ಅವರು ಹೆಣ್ಣಿನ ಸೃಷ್ಟಿಸಹಜ ಅಂತರ್ಯದ ಭಾವನೆಗಳನ್ನು ಹೊರಹಾಕುವ ರೀತಿಯನ್ನು ನಾವಿಲ್ಲಿ ಕಾಣುತ್ತೇವೆ. 'ಹಸಿದವನಿಗೆ ಅಮೃತಾನ್ನವಿಟ್ಟು ಅದು ರುಚಿಯಾಯಿತೇ ಎಂದು ಕೇಳಬಹುದೇ ಲಕ್ಷ್ಮೀ?' ಎಂದು ನೃಪತುಂಗ ದೊರೆಯು ಮರು ಪ್ರತಿಕ್ರಿಯೆಯನ್ನು ನೀಡುವಲ್ಲಿ ಪ್ರೀತಿ-ಪ್ರೇಮ ತುಂಬಿದ ಭಾವನೆಗಳನ್ನು ಅರಿಯಬಹುದಾಗಿದೆ. ಆಸ್ಥಾನದ ಜ್ಯೋತಿಷಿ ಗೋಲಯಭಟ್ಟರು ತಮ್ಮ ಮಗ ಮುಂದೆ ರಾಜ್ಯಕ್ಕೆ ಕಂಟಕಪ್ರಾಯನಾಗುತ್ತಾನೆಂಬ ಭವಿಷ್ಯವನ್ನು ನುಡಿದಾಗ, ರಾಣಿ ಲಕ್ಷ್ಮೀದೇವಿಯು ಮನೋವ್ಯಾಕುಲತೆಗೆ ಒಳಗಾಗುವ ಪ್ರಸಂಗ ಬರುತ್ತದೆ. ಆಗ ರಾಣಿ ಮತ್ತು ದೊರೆ ದುಃಖದ ಸ್ಥಿತಿಯಲ್ಲಿಯೇ ಲೋಕರೂಢಿಯೆಂಬಂತೆ, ತಂದೆ-ತಾಯಿ ಕರ್ತವ್ಯವೆಂಬಂತೆ ಮಗನ ಲಾಲನೆ-ಪಾಲನೆ ಮಾಡುತ್ತಾರೆ. ಈ ಮಧ್ಯೆ ರಾಣಿಯ ಬಸಿರಬಯಕೆಯಂತೆ ಬನವಾಸಿಯ ಯಾತ್ರೆಯು ನಡೆಯುತ್ತದೆ. "ಈ ರಾಜ್ಯವನ್ನು ಕಾಪಾಡಲೆಂದು ಮಗನನ್ನು ಬಯಸಿದ ಹರಕೆ ಹೊತ್ತು ವ್ರತ ಮಾಡಿದೆ? ರಾಜ್ಯಕ್ಕೆ ಕಂಟಕನಾಗಲೆಂದಲ್ಲ. ಇದೇನೇ ನಾನು ಪಡೆದ ಸೌಭಾಗ್ಯ? ವಿಧಿಗಿಷ್ಟು ಸಿಟ್ಟೇ ನನ್ನ ಮೇಲೆ? ಇಂಥ ಮಗನನ್ನು ಪಡೆದು, ಪ್ರಜೆಗಳಿಗೆ ಹೇಗೆ ಮೊಗ ತೋರಿಸಲಿ...?"[೧೦೬] ಎಂದು ಭಾವಿಸುವ ಲಕ್ಷ್ಮೀದೇವಿಯ ಭಾವನೆಗಳಲ್ಲಿ ರಾಜ್ಯ ಮತ್ತು ಪ್ರಜೆಗಳ ಮೇಲಿನ ಕಕ್ಕುಲತೆ ವ್ಯಕ್ತವಾಗಿದೆ.

ಚೇದಿಯ ರಾಜಕುಮಾರಿ, ಶಂಬಾದೇವಿ ಪಾತ್ರಗಳು ಸಂದರ್ಭಿಕವಾಗಿ ಗಮನಸೆಳೆಯುತ್ತವೆ.

*** ಏಚಲಾದೇವಿ :**

'ಸಿಡಿಲಮೊಗ್ಗು'ನಲ್ಲಿ ಬರುವ ಏಚಲಾದೇವಿ ಎರೆಯಂಗದೇವನ ಹೆಂಡತಿ. ವಿಷ್ಣುವರ್ಧನನ ತಾಯಿ. ಇವಳು ಎರೆಯಂಗದೇವನ ನಾಲ್ಕನೆಯ ಮಡದಿ. ತನ್ನ ಅತ್ತೆಯ ಪ್ರತಿರೂಪ. ಅವಳ ಮಾತಿನಂತೆ, ಪೂಜಾಕಾರ್ಯದಲ್ಲಿ ಭಾಗಿಯಾಗಿ ಮೂರು ಮಕ್ಕಳನ್ನು ಪಡೆದ ತಾಯಿ.

ಇವಳ ಮೊದಲ ಮಗ ಬಲ್ಲಾಳ. ಇವನನ್ನು ಗರ್ಭಿಣಿಯಾದಾಗ ಎರೆಯಂಗದೇವನು ಏಚಲಾದೇವಿಗೆ ಹೆದರಿಸುತ್ತಾನೆ. ಆ ಕಾರಣಕ್ಕಾಗಿಯೇ ಮುಂದೆ ಹುಟ್ಟಿದ ಆ ಮಗುಬಲ್ಲಾಳ ಅನಾರೋಗ್ಯ ಪೀಡಿತನಾಗಿ ಹುಟ್ಟಿದನೆಂಬ ಭಾವನೆ ಅವಳದಾಗಿದೆ. ಬಳ್ಳಿಗಾಮೆಗೆ ಹೋದಾಗ, ಶಾಂತಲೆಯ ರೂಪಕ್ಕೆ ಮಾರು ಹೋಗುತ್ತಾಳೆ. ಒಂದು ಸಂದರ್ಭದಲ್ಲಿ ಹೆಗ್ಗಡೆಯ

ಮಗಳಾದ ಶಾಂತಲೆಯು, ಇವಳ ಪರಿವಾರವನ್ನು ಊಟಕ್ಕೆ ಕರೆಯಲು ಹೋದಾಗ ಬಾಗಿಲಬಳಿ ನಿಂತಿದ್ದ ಶಾಂತಲೆಯನ್ನು ಕಂಡು ವಿಷ್ಣುವರ್ಧನನು ಗದರುತ್ತಾನೆ. ಆಗ ಏಚಲಾದೇವಿ ಹೊರಬಂದು ಶಾಂತಲೆಯ ಕೈಹಿಡಿದು ಮಗನಿಗೆ ಗದರುತ್ತಾಳೆ. ಕಾದಂಬರಿಗೆ ಜೀವ ತುಂಬಿದ ಪಾತ್ರಗಳಲ್ಲಿ ಏಚಲಾದೇವಿಯು ಒಂದೆನಿಸಿದೆ.

*** ಮಾಚಿಕಬ್ಬೆ :**

ಶಾಂತಲೆಯ ತಾಯಿ ಮಾಚಿಕಬ್ಬೆ. ಹೊಯ್ಸಳರ ಹೆಣ್ಣುಮಕ್ಕಳನ್ನು ಎದುರುಗೊಂಡು ಅವರ ಆದರಾತಿಥ್ಯವನ್ನು ನೋಡಿಕೊಳ್ಳುತ್ತಾಳೆ ಶಾಂತಚಿತ್ತಳು. ಏಚಲಾದೇವಿಯನ್ನು ಕಂಡು ಹೇಳುವ ಈ ಮಾತನ್ನು ನೋಡಿ, "ಈಗ ತಾನೇ ಮಜ್ಜನ ಮುಗಿದ ಹಾಗಿದೆ. ಆ ವೇಳೆಯಲ್ಲಿ ಬಂದು ತೊಂದರೆ ಕೊಟ್ಟ ಹಾಗಾಯಿತೇನೋ, ಮನ್ನಿಸಬೇಕು ತಾವು ಬಂದದ್ದು ತಿಳಿಯಿತು. ನೋಡಿ, ಇಲ್ಲಿ ಎಲ್ಲ ಅನುಕೂಲವಾಗಿದೆಯೂ ಇಲ್ಲವೋ ವಿಚಾರಿಸಿಕೊಂಡು ಹೋಗೋಣವೆಂದು ಬಂದೆ. ನನ್ನ ಆತುರದಿಂದ ನಿಮಗೆ ತೊಂದರೆಯಾಯಿತು. ಹೀಗೆಂದು ತಿಳಿದಿದ್ದರೆ ಇನ್ನೂ ಒಂದು ಗಳಿಗೆ ಬಿಟ್ಟುಕೊಂಡು ಬರುತ್ತಿದ್ದೆ."[೧೦೭] ಎಂದು ನುಡಿಯುವ ರೀತಿಯಲ್ಲಿ ಅವಳ ಗುಣ ಸ್ವಭಾವವನ್ನು ಅರಿಯಬಹುದು. ಏಚಲಾದೇವಿಯ ಪರಿವಾರಕ್ಕೆ ಎದುರಾಗುವ ತೊಂದರೆಗಳಿಗೆ ತಾನೇ ಕಾರಣಕರ್ತಳೆಂಬಂತೆ ಭಾವಿಸುತ್ತಾಳೆ. ಅಂಥ ಮುಗ್ಧ ಸ್ವಭಾವದ ಹೆಣ್ಣಂತೆ ಮಾಚಿಕಬ್ಬೆಯ ಪಾತ್ರ ಚಿತ್ರಣವನ್ನು ತ.ರಾ.ಸು. ಕೊಟ್ಟಿದ್ದಾರೆ.

*** ಶಾಂತಲೆ :**

ಹೆಗ್ಗಡೆ ಮಾರಸಿಂಗಯ್ಯ ಹಾಗೂ ಮಾಚಿಕಬ್ಬೆಯ ಮಗಳು ಶಾಂತಲೆ. ಕೆಚ್ಚೆದೆಯ ಸ್ತ್ರೀರೂಪ. ಏಕಲಾದೇವಿಯರ ಪರಿವಾರ ಬಳ್ಳಿಗಾಮೆಗೆ ಹೋದಾಗ ಶಾಂತಲೆಯ ಪರಿಚಯವಾಗುತ್ತದೆ. ಶಾಂತಲೆ ಮತ್ತು ವಿಷ್ಣುವರ್ಧನನ ನಡುವೆ ಪ್ರೇಮಾಂಕುರವಾಗುವ ಪ್ರಸಂಗವು ಪರಿಸ್ಥಿತಿಗನುಗುಣವಾಗಿಲ್ಲವೆಂಬ ಟೀಕೆಗಳು ಈ ಕಾದಂಬರಿಯನ್ನು ಕುರಿತು ಬಂದಿವೆ. "ಕಾದಂಬರಿಯ ಕೊನೆಯ ಭಾಗದಲ್ಲಿ ವಿಕ್ರಮಾದಿತ್ಯನಿಂದ ತಮಗಾದ ಅವಮಾನದಿಂದ ನೊಂದು ಸೊಸೆವೂರಿಗೆ ಮರಳುವ ತಳಮಳದ ಸ್ಥಿತಿಯಲ್ಲಿದ್ದಾಗ ವಿಷ್ಣುವರ್ಧನ ಹಾಗೂ ಶಾಂತಲೆಯರ ನಡುವೆ ಪ್ರೇಮಾಂಕುರವಾಗುವ ಪ್ರಸಂಗವನ್ನು ತಂದಿರುವುದು ಅಸಹಜವಾದ ರೀತಿಯಲ್ಲಿದೆ. ಅಪಮಾನ, ಸೇಡು, ಪ್ರತೀಕಾರದಂತಹ ಭಾವನೆಗಳಿಂದ ಕುದಿಯುತ್ತಿದ್ದ ವಿಷ್ಣುವರ್ಧನನು ಶಾಂತಲೆಯ ಪರಿಚಯವಾದ ಘಳಿಗೆಯಲ್ಲಯೇ ಅವೆಲ್ಲವನ್ನೂ ಮರೆತು ಅವಳ ಬಗ್ಗೆ ಕನಸು ಕಾಣಲಾರಂಭಿಸುತ್ತಾನೆ. ಈ ಪ್ರಸಂಗವು ಲೇಖಕರ ಮಾನಸಿಕ ಗೊಂದಲವನ್ನು ಎತ್ತಿ ತೋರಿಸುತ್ತದೆ."[೧೦೮] ಎಂಬ ಮಾತುಗಳು ಹೆಚ್ಚಿನ ಚರ್ಚೆಯನ್ನು ಬಯಸುತ್ತವೆ. ಶಾಂತಲೆಯ ಅನುಪಮ ಚಿತ್ರಣವು ಈಗಾಗಲೇ ನಾಲ್ಕಾರು ಕಾದಂಬರಿಗಳ ವಸ್ತುವಾಗಿದೆ. "ಇತಿಹಾಸದಲ್ಲಿ ಅಪೂರ್ವವ್ಯಕ್ತಿಯೆನಿಸಿದ

ಶಾಂತಲಾದೇವಿ ತನ್ನ ಪತಿಯನ್ನು ಒಲಿಸಿಕೊಂಡು ಬೇಲೂರಿನಲ್ಲಿ ಚೆನ್ನಕೇಶವ ದೇವಾಲಯದ ಆವರಣದಲ್ಲಿ ಅಪೂರ್ವವಾದ ನೃತ್ಯ ವಿದ್ಯಾಲಯವನ್ನೇ ನಿರ್ಮಿಸಲು ಬಹುಮಟ್ಟಿಗೆ ಕಾರಣಳಾದಳು. ಹೊಯ್ಸಳೇಶ್ವರನ ಪಟ್ಟದ ರಾಣಿಯಾಗಿದ್ದರೂ. ಅವಳ ಪಾಲಿಗೆ ಸುಖಬಾರದಿದ್ದುದು ದೈವದ ದುರ್ವಿಪಾಕವೇ ಸರಿ. ಆಕೆಯದು ಒಂದು ದುರಂತ ಜೀವನ. 'ಸವತಿ ಗಂಧವಾರಣೆ'ಯೆಂಬ ಬಿರುದು ಆಕೆಗೆ ಸಂದಿದ್ದರೂ, ಸವತಿಯರ ಕಾಟದಿಂದ ಬವಣೆಪಟ್ಟವಳು. ಪ್ರಜೆಗಳೆಲ್ಲರೂ ಆಕೆಯನ್ನು ತಾಯಿಯಂತೆ ಗೌರವಿಸುತ್ತಿದ್ದರೂ ಮಕ್ಕಳಿಲ್ಲದ ಕೊರಗಿನಿಂದ ಆಕೆ ಕಡೆಗೆ ಶಿವಗಂಗೆಯಲ್ಲಿ ಹತಾಶಳಾಗಿ ಸಾಯಬೇಕಾಯಿತು. ಇದು ಸಹಜ ಸಾವೋ ಅಥವಾ ಆತ್ಮಹತ್ಯೆವೋ ವಿದ್ವಾಂಸರು ನಿರ್ಣಯಿಸಲಾಗಿಲ್ಲ. ಆದರೆ ಶಾಸನವೊಂದರಲ್ಲಿ ಹೀಗೆ ಬರೆದಿರುವುದು ಸ್ವಲ್ಪ ಮಟ್ಟಿನ ಬೆಳಕು ಹಾಯಿಸುತ್ತದೆ."[೧೯] ಎಂಬ ಕೊರಟ ಶ್ರೀನಿವಾಸರಾವ್‌ರು ಶಾಂತಲೆಯ ದುರಂತ ಬದುಕನ್ನು ಕುರಿತು ಶೋಧಿಸಿದ್ದಾರೆ. ಇದೇ ಕಥೆಯನ್ನು ಆಧರಿಸಿ ಹಲವು ಕಾದಂಬರಿಕಾರರು ಒಂದೊಂದು ರೀತಿಯಲ್ಲಿ ಕಾದಂಬರಿ ರಚನೆ ಮಾಡಿದ್ದಾರೆಂದು ಅವರು ಅಭಿಪ್ರಾಯ ಪಡುತ್ತಾರೆ. ಅವರ ದೃಷ್ಟಿಯಲ್ಲಿ ಕೆ.ವಿ. ಅಯ್ಯರ್ ಅವರು ಬರೆದಿರುವ 'ಶ್ರೀ ವಿಷ್ಣುಕಾಂತೆ ಶಾಂತಲೆ' ಎಂಬುದೇ ಇತಿಹಾಸಕ್ಕೆ ಹತ್ತಿರವಾದ ಕಾದಂಬರಿ ಎಂದಿದ್ದಾರೆ.

ಈ ಹಿನ್ನೆಲೆಯ ಶಾಂತಲೆಯ ಪಾತ್ರ ಚಿತ್ರಣವೂ ಒಬ್ಬೊಬ್ಬರ ದೃಷ್ಟಿಕೋನದ ಹಿನ್ನೆಲೆಯಲ್ಲಿ ಒಂದೊಂದು ರೀತಿ ಚಿತ್ರಿಸಲ್ಪಟ್ಟಿದೆ. ಇದಕ್ಕೆ ತ.ರಾ.ಸು. ಅವರು ಹೊರತಲ್ಲ. ತ.ರಾ.ಸು. ಅವರು ಈ ವಸ್ತುವನ್ನು 'ಕೀರ್ತಿನಾರಾಯಣ' ಕಾದಂಬರಿಯಲ್ಲೂ ಮುಂದುವರೆಸುತ್ತಾರೆ. ಆದರೆ ಅಲ್ಲಿ ಶಾಂತಲೆ ಪಟ್ಟದ ರಾಣಿಯಾಗಿ ಕಾಣಿಸುತ್ತಾಳೆ ಹೊರತಾಗಿ, ವಿಷ್ಣುವರ್ಧನನೊಂದಿಗೆ ನಡೆದ ವಿವಾಹದ ಪ್ರಸ್ತಾವವೇ ಬರುವುದಿಲ್ಲ. ತಮ್ಮ ಕಲ್ಪನೆಗನುಗುಣವಾಗಿ ಶಾಂತಲೆಯ ಪಾತ್ರ ಚಿತ್ರಣವನ್ನು ತ.ರಾ.ಸು. ಕೊಟ್ಟದ್ದನ್ನು ಗಮನಿಸಬಹುದಾಗಿದೆ. ಅವರ ದೃಷ್ಟಿಯಲ್ಲಿ ಶಾಂತಲೆ ಕೆಚ್ಚೆದೆಯ ಸ್ತ್ರೀ. ಧೀರೋದಾತ್ತ ಮಹಿಳೆ. ಸ್ತ್ರೀಪರವಾದ ಮನೋಧರ್ಮದವಳಾಗಿದ್ದಾಳೆ. ಇದಕ್ಕೆ 'ಕೀರ್ತಿನಾರಾಯಣ' ಕಾದಂಬರಿಯಲ್ಲಿ ಸಾಕಷ್ಟು ನಿದರ್ಶನಗಳು ಕಾಣಸಿಗುತ್ತವೆ. ಅಷ್ಟೇ ಅಲ್ಲ ಅವಳು ಮಾರ್ಗದರ್ಶಕಳಾಗಿಯೂ ಕಂಡುಬರುತ್ತಾಳೆ. ಎಲ್ಲರನ್ನು ಸಮಾಧಾನ ಪಡಿಸುವ ಉದಾತ್ತ ಗುಣದ ಪ್ರತೀಕಳೆನಿಸಿದ್ದಾಳೆ.

* **ಗೌರವ್ವ ನಾಗತಿ :**

ಇವಳು ಇಮ್ಮಡಿ ಮದಕರಿ ನಾಯಕನ ಕಿರಿಯ ನಾಗತಿ. ಮದಕರಿನಾಯಕ ತೀರಿಕೊಂಡಾಗ, ಆ ದಿನ ಅವನ ಅಂತ್ಯಸಂಸ್ಕಾರ ಮಾಡುವ ಮುನ್ನ ರಾಜ್ಯಕ್ಕೆ ಉತ್ತರಾಧಿಕಾರಿ

ಕಂಡುಬರುತ್ತಾಳೆ. ರಾಜ್ಯದ ಮೂಲೆಮೂಲೆಯಲ್ಲಿಯೂ ಸಂಚರಿಸಿ, ಜನರನ್ನು ಹುರುದುಂಬಿಸಿ ಸಂಘಟನೆ ಮಾಡುತ್ತಾಳೆ. ಇವಳ ಕಾರಣದಿಂದಾಗಿ ಹಳ್ಳಿಯ ಗರಡಿಯ ಮನೆಗಳು ಯುವಶಕ್ತಿ ಕೇಂದ್ರಸ್ಥಾನಗಳಾಗಿ ಮಾರ್ಪಡುತ್ತವೆ. ದುರ್ಗದ ಸೈನಿಕರು ಮುದ್ದಣ್ಣನ ವಿರುದ್ಧ ತಿರುಗಿ ಬೀಳುತ್ತಾರೆ. ಮುದ್ದಣ್ಣ ತಾನೇ ಹೆಣೆದ ಬಲೆಯಲ್ಲಿ ಸಿಲುಕಿಕೊಳ್ಳುತ್ತಾನೆ.

ಮುದ್ದಣ್ಣನನ್ನು ಕೊಲ್ಲುವಾಗಿನ ಈ ಪ್ರಸಂಗವನ್ನು ನೋಡಿ, "ನೆನಪಿದೆಯೇ ಮುದ್ದಣ್ಣ– ಚಿಕ್ಕಣ್ಣ ನಾಯಕನನ್ನು ನಾಟ್ಯವಾಡಿಸಿದುದು, ಅದೇ ನಾಟ್ಯ, ಇನ್ನೂ ಭಯಂಕರ ನಾಟ್ಯ ಕಾದಿದೆ, ನಿನಗೆ – ಭರಮಣ್ಣನವರನ್ನು ಸೆರೆ ಹಿಸಿಸಲು, ಗುಪ್ತ ಮಾರ್ಗದಲ್ಲಿ ತಮನನ್ನು ನಿಲ್ಲಿಸಿದೆಯಲ್ಲವೇ? ಹೂ ಈಗ ಕೊಚ್ಚಕೋ ನಿನ್ನ ಪೌರುಷವನ್ನು .... ಎಂದು ಗಿರಿಜಾ ಅವನನ್ನು ಅಣಕಿಸಿ ಗಹಗಹಿಸಿ ನಗಲಾರಂಭಿಸಿದಳು. ಆ ನಗೆಯ ವಿಕಟಾಟ್ಟಹಾಸ ಗರಗಸದಂತೆ ಮುದ್ದಣ್ಣನ ಎದೆಯನ್ನು ಕೊಯ್ದತು, ಅದನ್ನು ಸಹಿಸಲಾರದೆ – "ನರಕದ ನಾಯಿ .... ಮುಚ್ಚು ಬಾಯಿ" – ಎಂದು ಅಬ್ಬರಿಸಿ ಸಿಟ್ಟಿನಲ್ಲಿ "ಕತ್ತಿ ಬೀಸುವ ಕೈ ಹೋದರೂ ಅಬ್ಬರಿಸುವ ನಾಲಿಗೆ ಉಳಿದೆದೆಯಲ್ಲವೇ ನಿನಗೆ. ಚಿನ್ನಯ್ಯ ... ಆ ಕುನ್ನಿಯನ್ನು ಹಿಡಿದಿಕೋ" ಅವನನ್ನು ನನಗೆ ಒಪ್ಪಿಸು." ಎಂದು ಭರಮಣ್ಣ. "ಆಗುವುದಿಲ್ಲ ಭರಮಣ್ಣ – ನಾಗತಿಯರ ಸಾವಿಗೆ ಕಾರಣನಾದ ಇವನು ನನ್ನ ಭೇಟೆ ಪಶು. ದೂರ ಸರಿದು ನಿಲ್ಲಿ' – ಎಂದು, ಭರಮಣ್ಣನನ್ನು ಗದರಿ, ಗಿರಿಜೆ, ಚಿನ್ನಯ್ಯ ಹಿಡಿದ ಮುದ್ದಣ್ಣನ ಹತ್ತಿರ ಸರಿದು, ಅವನ ಕಣ್ಣುಗಳಲ್ಲಿಯೇ ತನ್ನ ಕಣ್ಣುಗಳನ್ನು ಊರಿ – "ಎಲ್ಲಿ ಮತ್ತೊಮ್ಮೆ ಬೊಗಳು" – ಎಂದವಳೇ ಮುದ್ದಣ್ಣ ಬಾಯಿ ಮೇಲೆ ಹೊಡೆದಳು. ಆ ಹೊಡೆತಕ್ಕೆ ಮುದ್ದಣ್ಣ ತುಟಿ ಬಿರಿದು ರಕ್ತ ಸೂಸಿತು. ಆಗ ರಕ್ತವನ್ನು ಒರೆಸಲು, ಮುದ್ದಣ್ಣ ನಾಲಗೆಯನ್ನು ಚಾಚಿದ. ಅವನ ನಾಲಗೆ ಹೊರಗೆ ಚಾಚುತ್ತಿದ್ದ ಹಾಗೇ ಮಿಂಚಿನಂತೆ ಅದನ್ನು ಹಿಡಿದೆಳೆದು ಕತ್ತರಿಸಿ, ರಕ್ತ ಸೋರುವ ನಾಲಗೆಯ ತುಂಡನ್ನು ಅವನ ಕಣ್ಣಮುಂದೆಯೇ ಆಡಿಸುತ್ತಾ – "ಹೂ ಈಗ ಹೇಳು, ಮಾತಾಡು ಎಂದಳು ಗಿರಿಜಾ"[೧೧೦] ಹೀಗೆ, ಗಿರಿಜೆ ಮುದ್ದಣ್ಣನಿಗೆ ಚಿತ್ರಹಿಂಸೆ ನೀಡಿ, ಕೊಲ್ಲುತ್ತಾಳೆ. ತನ್ನ ಸೇಡನ್ನು ತೀರಿಸಿಕೊಳ್ಳುತ್ತಾಳೆ. ದುರ್ಗದಲ್ಲಿ ಹೊಸಹಗಲು ಮೂಡಲು ಕಾರಣಳಾಗುತ್ತಾಳೆಂಬಂತೆ ಅವಳ ಪಾತ್ರ ಚಿತ್ರಣವನ್ನು ತ.ರಾ.ಸು. ಕೊಟ್ಟಿದ್ದಾರೆ. ಇದು ಸಾಮಾನ್ಯ ಹೆಣ್ಣೊಬ್ಬಳ ಧೀರೋದಾತ್ರ ಪಾತ್ರವಾಗಿದೆ.

*** ಸಿದ್ಧವ್ವ ನಾಗತಿ :**

'ವಿಜಯೋತ್ಸವ' ಕಾದಂಬರಿಯಲ್ಲಿ ಬರುವ ಪ್ರಮುಖ ಸ್ತ್ರೀ ಪಾತ್ರ. ಇವಳು ಮದಕರಿ ತಾಯಿ. ಭರಮಣ್ಣ ನಾಯಕನ ಹೆಂಡತಿ. ಸ್ತ್ರೀ ಧರ್ಮಕ್ಕನುಗುಣವಾಗಿ ಬದುಕಿದವಳು.

ರಾಜನಿಗೆ ತಕ್ಕ ರಾಣಿಯಾಗಿ ಮಗನಿಗೆ ತಕ್ಕ ತಾಯಿಯಾಗಿ ಚಿತ್ರಿಸಲ್ಪಟ್ಟಿದ್ದಾಳೆ. ಮೆಹರ್‌ಬಾನುವಿನ ಸಂಗೀತಕ್ಕೆ ಮಾರು ಹೋಗುತ್ತಾಳೆ. ಆದಕ್ಕಾಗಿ ಅವಳನ್ನು ಕಂಡು ಸಮಾಲೋಚಿಸುತ್ತಾಳೆ. ಮೆಹರ್‌ಬಾನುವಿನ ಸಂಗೀತಕಲೆಯೊಂದಿಗೆ ಅವಳ ಸೌಂದರ್ಯವು ಅವಳನ್ನು ಆಕರ್ಷಿಸುತ್ತದೆ.

*** ಮೆಹರ್ ಬಾನು :**

ಅತ್ಯಂತ ರೂಪವತಿಯಾದ ಇವಳು ಸೀರ್ಯಾದ ರಾಜನ ಅಪ್ಪಣೆಯ ಜುಲ್‌ಫಿರ್‌ಖಾನೊಂದಿಗೆ ದುರ್ಗಕ್ಕೆ ಬಂದಿರುತ್ತಾಳೆ. ಇವಳು ಉತ್ತಮ ಗಾಯಕಿಯು ಕೂಡ ದುರ್ಗದಲ್ಲಿ ಗೂಢಚರ್ಯ ಕಾರ್ಯ ನಿರ್ವಹಿಸಲು ಸೀರ್ಯದ ದೊರೆ ಇವಳನ್ನು ಕಳಿಸಿರುತ್ತಾನೆ. ಆದರೆ ಅವಳು ಆ ಕೆಲಸ ಮಾಡುವುದಿಲ್ಲ ದೊರೆ ಭರಮಣ್ಣನ ವಿಶ್ವಾಸಕ್ಕೆ ಪಾತ್ರದಾರಳಾಗುತ್ತಾಳೆ. ಮುಂದೆ, ಜಾನ್‌ಡ್ಯೂವೋರನ ಪರಿಚಯವಾಗಿ, ಪ್ರೇಮಾಂಕುರಕ್ಕೆ ಕಾರಣವಾಗುತ್ತದೆ.

*** ಹನುಮವ್ವ ನಾಗತಿ :**

ಕಸ್ತೂರಿ ಕಂಕಣದಲ್ಲಿ ಬರುವ ಪಾತ್ರ. ಇವಳು ಹಿರಿಯೂರಿನ ಕೆಂಚಣ್ಣ ನಾಯಕನ ಮಡದಿ. ದುರ್ಗದೊಂದಿಗೆ ಉತ್ತಮ ಬಾಂಧವ್ಯ ಹೊಂದಿದವಳು. ಕಸ್ತೂರಿರಂಗಪ್ಪನನ್ನು ಅಣ್ಣನಂತೆ ಕಂಡವಳು. ಸೀರ್ಯದ ಸೇನೆ ಹಿರಿಯೂರ ಮೇಲೆ ಅನಿರೀಕ್ಷಿತ ದಾಳಿ ನಡೆಸಿದಾಗ, ಕಸ್ತೂರಿರಂಗಪ್ಪ ಇವರ ನೆರವಿಗೆ ಬರುತ್ತಾನೆ. ಈ ಸಂತೋಷಕ್ಕಾಗಿ ಹನುಮವ್ವ ನಾಗತಿಯು ಕುಂಕುಮವಿಟ್ಟು ಅವನನ್ನು ಸ್ವಾಗತಿಸಲು ಮುಂದಾಗುತ್ತಾಳೆ. ಆಗ ಕಸ್ತೂರಿರಂಗಪ್ಪನಾಯಕರು, “ಕುಂಕುಮವಿಡುತ್ತೀಯಾ? ಇತ್ತ ಬಾ” ಎಂದು ಹೇಳಿ, ತಮ್ಮ ಬೆನ್ನಿಗೆ ಬಿಗಿದುಕೊಂಡಿದ್ದ ಗಂಟನ್ನು ಬಿಚ್ಚಿ, ಅದರೊಳಗಿನ ರೇಶಿಮೆಖಣದ ಗಂಟನ್ನು ಹೊರತೆಗೆದು – “ಎಲ್ಲಿ ಒಂದು ಹರವಾಣ ತರಿಸು” – ಎಂದರು... “ಈಗೇನು ಮೂಡಲಿ” – ಎಂದು ಕೇಳಿದಳು ಹನುಮವ್ವ ನಾಗತಿ. ಆಕೆ ತಮ್ಮ ಮುಂದೆ ಒಡ್ಡಿದ ಹರಿವಾಣದಲ್ಲಿ ಕಸ್ತೂರಿರಂಗಪ್ಪನಾಯಕರು, ತಮ್ಮ ಕೈಯಲ್ಲಿದ್ದ ರೇಶಿಮೆಯ ಖಣದಲ್ಲಿದ್ದ ಓಲೆ, ಕಂಕಣ, ಅರಿಶಿನ ಕುಂಕುಮದ ಭರಣಿಗಳನ್ನಿಟ್ಟು, ಕುಂಕುಮಭರಣಿಯನ್ನು ತೆಗೆದು, ಹನುಮವ್ವ ನಾಗತಿಯ ಹಣೆಗೆ ತಾವೇ ಕುಂಕುಮವಿಟ್ಟು – “ಹೋಗು ತಂಗಿ ಇವನೆಲ್ಲ ಧರಿಸಿ ಬಂದು ಆರತಿ ಎತ್ತು ನಮ್ಮ ಮಾತು ತೀರಿತೇ?” ಎಂದು ಹೇಳಿದರು”.[೧೧೧] ಇದನ್ನೆಲ್ಲಾ ಗಮನಿಸುತ್ತಿದ್ದ ಕೆಂಚಣ್ಣ ನಾಯಕ ಹರಿವಾಣದಲ್ಲಿದ್ದ ಕಂಕಣವನ್ನು ಹೆಂಡತಿಯ ಕೈಗೆ ಕಟ್ಟಿ ‘ಹನುಮಾ ಈ ಕಂಕಣ .. ಬರೀ .. ಕಂಕಣವಲ್ಲ, ‘ಕಸ್ತೂರಿ ಕಂಕಣ’ ಎಂದು ಹೇಳುತ್ತಾನೆ. ಅದುವೇ ‘ಕಸ್ತೂರಿ ಕಂಕಣ’ವಾಗುತ್ತದೆಂಬಂತೆ ತ.ರಾ.ಸು. ಅವರು ಚಿತ್ರಿಸಿದ್ದಾರೆ.

* ಓಬವ್ವ ನಾಗತಿ :

'ದುರ್ಗಾಸ್ತಮಾನ' ಕಾದಂಬರಿಯಲ್ಲಿ ಬರುವ ಪ್ರಮುಖ ಸ್ತ್ರೀ ಪಾತ್ರ ಓಬವ್ವ ನಾಗತಿ. ಓಬವ್ವ ನಾಗತಿಯನ್ನು ದುರ್ಗದ ಬಗೆಗೆ ಅಭಿಮಾನವುಳ್ಳ ಮುತ್ಸದ್ದಿತನದ ಆದರ್ಶ ಸ್ತ್ರೀಯಂತೆ ತ.ರಾ.ಸು. ಅವರು ಚಿತ್ರಿಸಿದ್ದಾರೆ. ರಾಜ್ಯದ ಸಂದಿಗ್ಧ ಪರಿಸ್ಥಿತಿಯಲ್ಲೂ ರಾಜಕಾರಣದ ಸೂತ್ರವನ್ನು ಕೈಯಲ್ಲಿ ಹಿಡಿದು ಆಡಳಿತ ನಡೆಸುವ ಚತುರತೆಯನ್ನು ಇವಳಲ್ಲಿ ಕಾಣುತ್ತೇವೆ. ಆ ಮೂಲಕ ತನ್ನ ಸ್ವಂತಿಕೆಯನ್ನು ಮೆರೆಯುತ್ತಾಳೆ. 'ಹೆಣ್ಣಾಗಿ ಹುಟ್ಟೋದು ಕಷ್ಟಪಡಲಿಕ್ಕೇ, ಕಣ್ಣೀರಿಡಲಿಕ್ಕೆ, ವಿಧಿ ಹೆಣ್ಣಿನ ಹಣೇಲಿ ಅದೊಂದನ್ನೇ ಬರದಿರೋದು'. ಎಂದು ಹೇಳುವ ಓಬವ್ವ ನಾಗತಿಯ ಮಾತಿನಲ್ಲಿ ಸ್ತ್ರೀ ಧರ್ಮವನ್ನು ಕಾಣಬಹುದಾಗಿದೆ. ಇದು ಎಲ್ಲ ಸ್ತ್ರೀಯರಿಗೂ ಅನ್ವಯಿಸುವ ಮಾತಿನಂತೆ ತೋರುತ್ತದೆ.

ವಯಸ್ಸಾಗಿದ್ದರೂ ರಾಜ್ಯದ ಮೇಲೆ ತಾನಿಟ್ಟ ಅಭಿಮಾನದಿಂದ ಹೋರಾಡುವ ದಿಟ್ಟತನವನ್ನು ಮೆರೆಯುವ ಇವಳು, ಮದಕರಿ ನಾಯಕನನ್ನು ಪಟ್ಟಕ್ಕೆ ತರುವಲ್ಲಿ ಪ್ರಮುಖ ಪಾತ್ರವಹಿಸುತ್ತಾಳೆ. ಇದೇ ಸಂದರ್ಭದಲ್ಲಿ ರಾಯದುರ್ಗದವರು, 'ಪಟ್ಟದಲ್ಲಿ ಚೋಟುದ್ದ ಹುಡುಗ, ಆಡಳಿತ ಮಾಡೋಳು ಮುದುಕಿ' ಎಂದು ಹೀಯಾಳಿಸಿ ಯುದ್ಧವನ್ನು ಸಾರಿದಾಗ, ಓಬವ್ವ ನಾಗತಿ ಯುದ್ಧಕ್ಕೆ ಸಿದ್ಧಳಾಗುವ ಪ್ರಸಂಗದಲ್ಲಿ ಹೇಳುವ ಈ ಮಾತುಗಳನ್ನು ನೋಡಿ, "ಆಳುತ್ತಿರುವವರು ಹೆಂಗಸರು, ಪಟ್ಟದ ದೊರೆ ಹುಡುಗ" ಎಂದರಲ್ಲವೇ ಆ ಹೇಡಿ ತರುಗಳ್ಳರು. ನಿಜ ಇಂಥ ಹೊತ್ತಿನಲ್ಲಿ ಶತ್ರುಗಳ ಕೋಳಿಯ ಪುಕ್ಕಕ್ಕೆ ಗರುಡರೆಕ್ಕೆಯ ಬಲ ಬರುತ್ತದೆ. ಎಂಜಲು ನೆಕ್ಕುವ ನಾಯಿಗೆ ದೇವರೆಡೆಯಲ್ಲಿ ನಾಲಗೆ ಚಾಚಬೇಕು ಅನಿಸುತ್ತದೆ. ಇದು ನಿಮಗಲ್ಲ, ನಮಗೆ ಸವಾಲು. ಈ ಬಾರಿಯ ರಣವೀಳ್ಯವನ್ನು ನಾವು ಯಾರಿಗೂ ಕೊಡುವುದಿಲ್ಲ. ನಾವೇ ತೆಗೆದುಕೊಂಡಿದ್ದೇವೆ. ನಮ್ಮ ಹಸು ಕದ್ದವರನ್ನು ಹಿಡಿದೆಳೆದು ತಂದು, ನಮ್ಮ ಅರಮನೆಯ ಗೋದಲಿಯಲ್ಲಿ ಕಟ್ಟದಿದ್ದರೆ ನಾವು ಗಂಡುಗಲಿ ಮದಕರಿ ನಾಯಕರ ಮಡದಿಯಲ್ಲ. ಹಸುಗಳನ್ನು ಕಟ್ಟುವುದೂ ಒಂದೇ, ಹೆಣ್ಣುಮಕ್ಕಳ ಸೆರಗಿಗೆ ಕೈ ಹಾಕುವುದೂ ಒಂದೇ."[೧೧೨] ಎಂದು ರಾಜಾರೋಪವಾಗಿ ನುಡಿದು ಓಬವ್ವ ನಾಗತಿ ಯುದ್ಧಕ್ಕೆ ಸಿದ್ಧಳಾಗುತ್ತಾಳೆ. ಇಂತಹ ಚಿತ್ರಣದೊಂದಿಗೆ ಮಹಿಳೆಯರ ದಿಟ್ಟತನದ ಮೇಲೆ ತ.ರಾ.ಸು. ಬೆಳಕು ಚೆಲ್ಲುತ್ತಾರೆ. ಓಬವ್ವ ನಾಗತಿಯ ಪಾತ್ರ ಈ ಕಾದಂಬರಿಯಲ್ಲಿ ವೀರೋದಾತ್ತ ಪಾತ್ರವಾಗಿ ಚಿತ್ರಿಸಲ್ಪಟ್ಟಿದೆ.

* ಒನಕೆ ಓಬವ್ವ :

ಈ ಕಾದಂಬರಿಯಲ್ಲಿ ಬರುವ ಮತ್ತೊಂದು ಪ್ರಮುಖ ಪಾತ್ರ ಒನಕೆ ಓಬವ್ವ. ಇದು ಇತಿಹಾಸದಲ್ಲಿ ಕಂಡುಬರುವ ಪಾತ್ರವಲ್ಲ. ಇದೊಂದು ದಂತಕಥೆ. ದಂತಕತೆಯನ್ನು ಆಧರಿಸಿ ತ.ರಾ.ಸು. ಅವರು ಈ ಪಾತ್ರ ಸೃಷ್ಟಿಮಾಡಿದ್ದಾರೆ. ಎಂ.ಎಸ್. ಪುಟ್ಟಣ್ಣನವರ

ಕೃತಿಯಲ್ಲೂ ಇದು ದಂತಕತೆಯಂತೆಯೇ ಚಿತ್ರಿತವಾಗಿದೆ. ದುರ್ಗದ ಬಗೆಗೆ ಅಗಾಧವಾದ ನಿಷ್ಠೆಯನ್ನು ಹೊಂದಿದ ಇವಳು ಹೈದರನ ಸೇನೆಯ ದುರ್ಗಕ್ಕೆ ಮುತ್ತಿಗೆ ಹಾಕಿದಾಗ ಏಕಾಂಗಿಯಾಗಿ, ಕೆಚ್ಚೆದೆಯಿಂದ ಹೋರಾಟ ನಡೆಸುತ್ತಾಳೆ. ಕಳ್ಳಕಿಂಡಿಯ ಮೂಲಕ ದುರ್ಗದ ಕೋಟೆಯನ್ನು ಪ್ರವೇಶಿಸುವ ಸೈನಿಕರನ್ನು ಸಂಹರಿಸಿ ವೀರಮರಣವನ್ನಪ್ಪುತ್ತಾಳೆ. "ಸಾಧ್ವಿಮಣಿ, ಓನಕೆ ಓಬವ್ವ ಮಾತೆಯ ಸ್ವಾಮಿನಿಷ್ಠೆ, ಸ್ವಾಭಿಮಾನ, ಕಾಯಕನಿಷ್ಠೆ, ಅಪೂರ್ವವೂ, ಅವಿಸ್ಮರಣೀಯವೂ ಆಗಿದೆ"[೧೧೩] ಎಂದು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ.

ಇವಲ್ಲದೆ ಮದಕರಿನಾಯಕನ ತಾಯಿ ನಿಂಗವ್ವನ ಪಾತ್ರವು "ಮಹಾಮಾತೆ"ಯಂತೆ ಚಿತ್ರಿಸಲ್ಪಟ್ಟಿದೆ. ಅದು ತಾಳ್ಮೆ, ಸಹನೆ, ಮಾತ್ರ ವಾತ್ಸಲ್ಯದ ಪ್ರತೀಕದಂತೆ ಕಂಡಿದೆ. ಆದರ್ಶ ಸತಿಯರಂತೆ ಗಂಡನನ್ನು ಯುದ್ಧಕ್ಕೆ ಕಳಿಸಿ ಹೊಂಡಕ್ಕೆ ಹಾರುವ ಪದ್ಮವ್ವ, ಓಬವ್ವ ನಾಗತಿಯ ದಾಸಿಯಾದ ಹೊನ್ನವ್ವೆ ನಿಷ್ಠಾವಂತ ಸೇವಕಿಯಂತೆ ಚಿತ್ರಿಸಲ್ಪಟ್ಟಿದ್ದಾಳೆ. ಹೀಗೆ, 'ದುರ್ಗಾಸ್ತಮಾನ'ದಲ್ಲಿ ಬರುವ ಎಲ್ಲ ಸ್ತ್ರೀಪಾತ್ರಗಳು ತಮ್ಮ ತಮ್ಮ ಇತಿಮಿತಿಗಳೊಳಗೆ ಆದರ್ಶವನ್ನು ಮೆರೆಯುವ ಪಾತ್ರಗಳಾಗಿವೆ.

ಹೀಗೆ ತ.ರಾ.ಸು. ಅವರ ಚಾರಿತ್ರಿಕ ಕಾದಂಬರಿಗಳ ರಚನಾಕ್ರಮವು ವಿಶೇಷವಾಗಿರುವುದನ್ನು ಗುರುತಿಸಬಹುದಾಗಿದೆ. ಅವರ ಅನೇಕ ಕಾದಂಬರಿಗಳಲ್ಲಿ ಕಾಲ್ಪನಿಕ ವಿಚಾರಗಳು ಕಂಡು ಬಂದರೂ ಮೂಲ ಇತಿಹಾಸಕ್ಕೆ ಯಾವುದೇ ರೀತಿಯ ದಕ್ಕೆ ಬಾರದಂತೆ ಅವರು ಕಾದಂಬರಿಗಳನ್ನು ರಚಿಸಿದ್ದಾರೆ. ವಿವಿಧ ಸಂದರ್ಭ, ಸನ್ನಿವೇಶಕ್ಕನುಗುಣವಾಗಿ ಅಲ್ಲಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡು, ಗತಕಾಲದ ಬದುಕನ್ನು ಯಥಾವತ್ತಾಗಿ ಕಂಡರಿಸುವ ಪ್ರಯತ್ನ ಅವರ ಐತಿಹಾಸಿಕ ಕಾದಂಬರಿಗಳಲ್ಲಿ ಎದ್ದು ಕಾಣುವ ಸಂಗತಿಯಾಗಿದೆ. ಹಿಂದಿನ ಸಮಾಜವನ್ನು ಆ ಮೂಲಕ ಇಂದಿನ ಸಮಾಜದಲ್ಲಿರಿಸಿಕೊಂಡು ಚಿಂತಿಸುವ ಅವರ ಐತಿಹಾಸಿಕ ಕಾದಂಬರಿಗಳ ವಸ್ತು ವಿನ್ಯಾಸವು ಸರ್ವಕಾಲಿಕ ಸತ್ಯದ ಅರ್ಥವನ್ನು ಪಡೆದುಕೊಂಡಿದೆ.

**ಕೊನೆ ಟಿಪ್ಪಣಿಗಳು**

೧. ಕೆ.ಮೋಹನಕೃಷ್ಣ ರೈ, (ಸಂ), ಚರಿತ್ರೆ ಅಧ್ಯಯನ, ಜುಲೈ–ಡಿಸೆಂಬರ್–೨೦೦೭ ಸಂಪುಟ ೩, ಸಂಚಿಕೆ ೧, ಕ.ವಿ.ವಿ. ಹಂಪಿ, ಪುಟ ೭೪

೨. ಕೆ.ಮೋಹನಕೃಷ್ಣ ರೈ, (ಸಂ), ಚರಿತ್ರೆ ಅಧ್ಯಯನ, ಜುಲೈ–ಡಿಸೆಂಬರ್–೨೦೦೭ ಸಂಪುಟ ೩, ಸಂಚಿಕೆ ೧, ಕ.ವಿ.ವಿ. ಹಂಪಿ, ಪುಟ ೭೪

೩. ತ.ರಾ.ಸು. ನೃಪತುಂಗ: ೨೦೦೮: ಮುನ್ನುಡಿ, ಪುಟ, ೧೧

೪. ತ.ರಾ.ಸು. ನೃಪತುಂಗ: ೨೦೦೮ : ಪುಟ, ೨೩

೫. ತ.ರಾ.ಸು. ಸಿಡಿಲಮೊಗ್ಗು: ೨೦೧೪: ಪುಟ: ೫೬

೬. ತ.ರಾ.ಸು. ಸಿಡಿಲಮೊಗ್ಗು: ೨೦೧೪ : ಪುಟ: ೭೧

೭. ಎಂ.ಎನ್.ಮಹೇಶ: ತ.ರಾ.ಸು. ಸಾಹಿತ್ಯ–ಒಂದು ಅಧ್ಯಯನ, ೨೦೦೯, ಪುಟ: ೯೨

೮. ತ.ರಾ.ಸು.: ಕೀರ್ತಿನಾರಾಯಣ : ೨೦೦೨ : ಪುಟ: ೨

೯. ತ.ರಾ.ಸು.: ಕೀರ್ತಿನಾರಾಯಣ : ೨೦೦೨ : ಪುಟ: ೧೬೯

೧೦. ಎಂ.ಎನ್.ಮಹೇಶ: ತ.ರಾ.ಸು. ಸಾಹಿತ್ಯ – ಒಂದು ಅಧ್ಯಯನ, ೨೦೦೯, ಪುಟ: ೧೦೦

೧೧. ಗೌರಿಸುಂದರ್ (ಸಂ) : ತ.ರಾ.ಸು. ಕಾದಂಬರಿಗಳ ಕುರಿತು : ೨೦೧೫, ಪುಟ: ೧೯೩

೧೨. ತ.ರಾ.ಸು.: ಶಿಲ್ಪಶ್ರೀ : ೧೯೬೦ : ಪುಟ: ೩೦

೧೩. ತ.ರಾ.ಸು.: ಅಗ್ನಿರಥ–ಮುಕ್ತಿಪಥ: ೧೯೬೬ : ಮುನ್ನುಡಿ

೧೪. ತ.ರಾ.ಸು.: ಅಗ್ನಿರಥ–ಮುಕ್ತಿಪಥ: ೧೯೬೬ : ಪುಟ : ೨೯

೧೫. ತ.ರಾ.ಸು.: ಕಂಬನಿಯ ಕುಯಿಲು: ೨೦೧೩ : ಪುಟ : ೧

೧೬. ತ.ರಾ.ಸು.: ಕಂಬನಿಯ ಕುಯಿಲು: ೨೦೧೩: ಮುನ್ನುಡಿ

೧೭. ಗೌರಿಸುಂದರ್ (ಸಂ) : ತ.ರಾ.ಸು. ಕಾದಂಬರಿಗಳ ಕುರಿತು, ೨೦೧೫, ಪುಟ: ೧೬೮

೧೮. ತ.ರಾ.ಸು.: ರಾಜ್ಯದಾಹ: ೨೦೦೧ : ಪುಟ: ೮೨

೧೯. ತ.ರಾ.ಸು.: ರಕ್ತರಾತ್ರಿ: ೨೦೦೧ : ಪುಟ: ೧೪

೨೦. ಗೌರಿಸುಂದರ್ (ಸಂ): ತ.ರಾ.ಸು.: ಕಾದಂಬರಿಗಳ ಕುರಿತು,೨೦೧೫, ಪುಟ:೭೧

೨೧. ತ.ರಾ.ಸು.: ತಿರುಗುಬಾಣ ; ೨೦೦೮, ಪುಟ : ೧೦೪

೨೨. ತ.ರಾ.ಸು.: ಹೊಸಹಗಲು ; ೨೦೦೭, ಮುನ್ನುಡಿ

೨೩. ತ.ರಾ.ಸು.: ಹೊಸಹಗಲು ; ೨೦೦೭, ಪುಟ : ೬೩

೨೪. ತ.ರಾ.ಸು.: ಹೊಸಹಗಲು ; ೨೦೦೭, ಪುಟ : ೬೮

೨೫. ತ.ರಾ.ಸು.: ವಿಜಯೋತ್ಸವ ; ೧೯೯೭, ಪುಟ : ೪-೫

೨೬. ತ.ರಾ.ಸು.: ವಿಜಯೋತ್ಸವ ; ೧೯೯೭, ಪುಟ : ೨೦

೨೭. ತ.ರಾ.ಸು.: ಕಸ್ತೂರಿ ಕಂಕಣ ; ೨೦೧೨, ಪುಟ : ೧೧

೨೮. ತ.ರಾ.ಸು.: ಕಸ್ತೂರಿ ಕಂಕಣ ; ೨೦೧೨, ಪುಟ : ೨೩೪

೨೯. ತ.ರಾ.ಸು.: ದುರ್ಗಾಸ್ತಮಾನ ; ೨೦೧೦, ಮುನ್ನುಡಿ

೩೦. ತ.ರಾ.ಸು.: ದುರ್ಗಾಸ್ತಮಾನ ; ೨೦೧೦, ಪುಟ : ೮೧

೩೧. ಶಾ.ಮಂ.ಕೃಷ್ಣರಾಯ(ಸಂ): ತ.ರಾ.ಸು.: ಬದುಕು-ಬರೆಹ, ೨೦೦೮, ಪುಟ: ೮೧೯

೩೨. ಕೆ.ಸದಾಶಿವ : ಸಮಗ್ರ ಭಾರತದ ಇತಿಹಾಸ : ೨೦೦೮, ಪುಟ: ೩೫೯

೩೩. ತ.ರಾ.ಸು.: ನೃಪತುಂಗ, ೨೦೦೮, ಪುಟ: ೨೬

೩೪. ತ.ರಾ.ಸು.: ನೃಪತುಂಗ, ೨೦೦೮, ಪುಟ: ೩೮

೩೫. ತ.ರಾ.ಸು.: ನೃಪತುಂಗ, ೨೦೦೮, ಪುಟ: ೧೩೬

೩೬. ತ.ರಾ.ಸು.: ನೃಪತುಂಗ, ೨೦೦೮, ಪುಟ: ೧೩೭

೩೭. ತ.ರಾ.ಸು.: ಸಿಡಿಲಮೊಗ್ಗು; ೨೦೧೪, ಪುಟ: ೧೪

೩೮. ತ.ರಾ.ಸು.: ಕೀರ್ತಿನಾರಾಯಣ : ೨೦೦೨, ಪುಟ: ೫

೩೯. ತ.ರಾ.ಸು.: ಸಿಡಿಲಮೊಗ್ಗು; ೨೦೧೪, ಪುಟ: ೧೩೩

೪೦. ತ.ರಾ.ಸು.: ಕೀರ್ತಿನಾರಾಯಣ : ೨೦೦೨, ಪುಟ: ೧೪೦-೧೪೧

೪೧. ತ.ರಾ.ಸು.: ಶಿಲ್ಪಶ್ರೀ: ೧೯೬೦, ಪುಟ: ೭

೪೨. ತ.ರಾ.ಸು.: ಶಿಲ್ಪಶ್ರೀ: ೧೯೬೦, ಪುಟ: ೧೧೬

೪೩. ತ.ರಾ.ಸು.: ಕಂಬನಿಯ ಕುಯಿಲು : ೨೦೧೩, ಪುಟ: ೪೦

೪೪. ತ.ರಾ.ಸು.: ಕಂಬನಿಯ ಕುಯಿಲು : ೨೦೧೩, ಪುಟ: ೯೦

೪೫. ತ.ರಾ.ಸು. : ತಿರುಗುಬಾಣ : ೨೦೦೮, ಪುಟ : ೫೮

೪೬. ತ.ರಾ.ಸು. : ತಿರುಗುಬಾಣ : ೨೦೦೮, ಪುಟ : ೧೪೧

೪೭. ತ.ರಾ.ಸು. : ಹೊಸಹಗಲು : ೨೦೦೭, ಪುಟ : ೧೨೦

೪೮. ತ.ರಾ.ಸು. ವಿಜಯೋತ್ಸವ : ೧೯೯೭, ಪುಟ: ೨೪೦

೪೯. ತ.ರಾ.ಸು. ವಿಜಯೋತ್ಸವ : ೧೯೯೭, ಪುಟ: ೨೫೫

೫೦. ತ.ರಾ.ಸು. ಕಸ್ತೂರಿ ಕಂಕಣ : ೨೦೧೨, ಪುಟ: ೨೬೭

೫೧. ತ.ರಾ.ಸು. ಕಸ್ತೂರಿ ಕಂಕಣ : ೨೦೧೨, ಪುಟ: ೨೬೯

೫೨. ತ.ರಾ.ಸು. ಕಸ್ತೂರಿ ಕಂಕಣ : ೨೦೧೨, ಪುಟ: ೨೬೯

೫೩. ತ.ರಾ.ಸು. ದುರ್ಗಾಸ್ತಮಾನ : ೨೦೧೦, ಪುಟ: ೧೦೭

೫೪. ತ.ರಾ.ಸು. ದುರ್ಗಾಸ್ತಮಾನ : ೨೦೧೦, ಪುಟ: ೧೧೬-೧೧೭

೫೫. ತ.ರಾ.ಸು. ದುರ್ಗಾಸ್ತಮಾನ : ೨೦೧೦, ಪುಟ: ೬೫೩

೫೬. ತ.ರಾ.ಸು. ದುರ್ಗಾಸ್ತಮಾನ : ೨೦೧೦, ಪುಟ: ೬೫೭

೫೭. ಕಳಕಣ್ಣವರ ಶಿವಾನಂದ, ಕನ್ನಡದಲ್ಲಿ ಮುಸ್ಲಿಂ ಲೇಖಕರ ಕಥಾಸಾಹಿತ್ಯ: ಒಂದು ಅಧ್ಯಯನ ೨೦೦೩ (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ) ಪುಟ : ೧೧

೫೮. – ಅದೇ – ಪುಟ : ೧೧

೫೯. ಎಸ್.ಎಸ್. ಮಹಂತೇಶ, ಚಿತ್ರದುರ್ಗದ ಕೋಟೆ ಪರಿಸರದ ದೇವಾಲಯಗಳು. ಒಂದು ಸಾಂಸ್ಕೃತಿಕ ಅಧ್ಯಯನ, ೨೦೦೮, ಪುಟ ೧೦೨

೬೦. ತ.ರಾಸು: ನೃಪತುಂಗ: ೨೦೦೮, ಪುಟ:೬೬

೬೧. ತ.ರಾಸು: ಸಿಡಿಲಮೊಗ್ಗು: ೨೦೧೪, ಪುಟ: ೧೮

೬೨. ತ.ರಾಸು ಕೀರ್ತಿನಾರಾಯಣ: ೨೦೦೨: ಪುಟ : ೧೯

೬೩. ತ.ರಾಸು ಕೀರ್ತಿನಾರಾಯಣ: ೨೦೦೨: ಪುಟ : ೭೭-೭೮

೬೪. ತ.ರಾಸು. ಶಿಲ್ಪಶ್ರೀ:೧೯೬೦, ಪುಟ: ೪೧

೬೫. ತ.ರಾಸು ಕಂಬನಿಯ ಕುಯಿಲು ೨೦೧೩, ಪುಟ: ೩೪

೬೬. ತ.ರಾಸು : ಕಂಬನಿಯ ಕುಯಿಲು : ೨೦೧೩, ಪುಟ: ೭೧.

೬೭. ತ.ರಾಸು : ರಕ್ತರಾತ್ರಿ: ೨೦೦೧, ಪುಟ: ೭೫.

೬೮. ತ.ರಾಸು ರಕ್ತರಾತ್ರಿ: ೨೦೦೧, ಪುಟ: ೭೫.

೬೯. ತ.ರಾಸು ರಕ್ತರಾತ್ರಿ: ೨೦೦೧, ಪುಟ: ೧೩೧.

೭೦. ತ.ರಾಸು ತಿರುಗುಬಾಣ ೨೦೦೮ ಪುಟ: ೧೪-೧೫

೭೧. ತ.ರಾ.ಸು. : ಹೊಸ ಹಗಲು : ೨೦೦೭, ಪುಟ : ೯೬

೭೨. ತ.ರಾಸು : ಕಸ್ತೂರಿ ಕಂಕಣ : ೨೦೧೨, ಪುಟ: ೪೨

೭೩. ತ.ರಾಸು ಕಸ್ತೂರಿ ಕಂಕಣ ೨೦೧೨, ಪುಟ: ೫೪

೭೪. ತ.ರಾಸು. ದುರ್ಗಾಸ್ತಮಾನ: ೨೦೧೦, ಪುಟ: ೭೦

೭೫. ತ.ರಾಸು. ದುರ್ಗಾಸ್ತಮಾನ: ೨೦೧೦, ಪುಟ: ೮೪

೭೬. ತ.ರಾಸು. ದುರ್ಗಾಸ್ತಮಾನ: ೨೦೧೦, ಪುಟ: ೪೩೮

೭೭. ಶಾ.ಮಂ. ಕೃಷ್ಣರಾಯ (ಸಂ) : ತ.ರಾ.ಸು. ಬದುಕು-ಬರಹ : ಪುಟ : ೬೪೫

೭೮. ತ.ರಾ.ಸು. ನೃಪತುಂಗ, ೨೦೦೮, ಮುನ್ನುಡಿ

೭೯. ತ.ರಾ.ಸು. ನೃಪತುಂಗ, ೨೦೦೮, ಪುಟ : ೬೬

೮೦. ತ.ರಾ.ಸು. ನೃಪತುಂಗ, ೨೦೦೮, ಪುಟ : ೨೩

೮೧. ತ.ರಾ.ಸು. ನೃಪತುಂಗ, ೨೦೦೮, ಪುಟ : ೧೬೩

೮೨. ತ.ರಾ.ಸು. ಸಿಡಿಲ ಮೊಗ್ಗು : ೨೦೧೪, ಮುನ್ನುಡಿ

೮೩. ತ.ರಾ.ಸು. ಸಿಡಿಲ ಮೊಗ್ಗು : ೨೦೧೪, ಪುಟ, ೩೧

೮೪. ತ.ರಾ.ಸು. ಸಿಡಿಲ ಮೊಗ್ಗು : ೨೦೧೪, ಪುಟ, ೫೧

೮೫. ತ.ರಾ.ಸು. ಕೀರ್ತಿನಾರಾಯಣ, : ೨೦೦೨, ಪುಟ ; ೧೨

೮೬. ತ.ರಾ.ಸು. ಕೀರ್ತಿನಾರಾಯಣ, : ೨೦೦೨, ಪುಟ ; ೧೬೯

೮೭. ತ.ರಾ.ಸು. : ಶಿಲ್ಪಶ್ರೀ, ೧೯೬೦, ಪುಟ : ೩೩

೮೮. ತ.ರಾ.ಸು. ಅಗ್ನಿರಥ – ಮುಕ್ತಿಪಥ : ೧೯೬೬, ಪುಟ: ೧೬

೮೯. ತ.ರಾ.ಸು. ಅಗ್ನಿರಥ – ಮುಕ್ತಿಪಥ : ೧೯೬೬, ಪುಟ: ೫೬

೯೦. ತ.ರಾ.ಸು. ಅಗ್ನಿರಥ – ಮುಕ್ತಿಪಥ : ೧೯೬೬, ಪುಟ: ೬೦

೯೧. ಎಂ. ಚಿದಾನಂದ ಮೂರ್ತಿ, (ಅನುವಾದಕ) ಕರ್ನಾಟಕ ಪರಂಪರೆ, ೧೯೯೨, ಸಂ. ೧, ಪುಟ: ೪೪೪

೯೨. ತ.ರಾ.ಸು. : ಕಂಬನಿಯ ಕುಯಿಲು, ೨೦೧೩, ಪುಟ: ೨೨

೯೩. ತ.ರಾ.ಸು. : ಕಂಬನಿಯ ಕುಯಿಲು, ೨೦೧೩, ಪುಟ: ೨೨

೯೪. ತ.ರಾ.ಸು. : ಕಂಬನಿಯ ಕುಯಿಲು, ೨೦೧೩, ಪುಟ: ೧೪೪

೯೫. ತೆಲಗಾವಿ ಲಕ್ಷ್ಮಣ, ಚಿತ್ರದುರ್ಗ ನಾಯಕ ಅರಸರು ರಾಜಕೀಯ ಚಿತ್ರ, ೨೦೦೯, ಪುಟ: ೩

೯೬. ಶಾ.ಮಂ.ಕೃಷ್ಣರಾಯ (ಸಂ.): ತ.ರಾ.ಸು. ಬದುಕು-ಬರೆಹ : ೨೦೦೯ ; ಪುಟ: ೩೨೩

೯೭. ತೆಲಗಾವಿ ಲಕ್ಷ್ಮಣ (ಸಂ), ಚರಿತ್ರೆ ಅಧ್ಯಯನ ಸಂಪುಟ ೪, ಸಂಚಿಕೆ ೪, ೨೦೦೮.

೯೮. ಶಾ.ಮಂ.ಕೃಷ್ಣರಾಯ (ಸಂ.): ತ.ರಾ.ಸು. ಬದುಕು-ಬರೆಹ : ೨೦೦೯ ; ಪುಟ: ೩೨೫

೯೯. ತ.ರಾ.ಸು. : ಹೊಸಹಗಲು : ೨೦೦೭, ಪುಟ : ೬೩

೧೦೦. ತ.ರಾ.ಸು. : ದುರ್ಗಾಸ್ತಮಾನ : ೨೦೧೦, ಮುನ್ನುಡಿ.

೧೦೧. ತ.ರಾ.ಸು. : ದುರ್ಗಾಸ್ತಮಾನ : ೨೦೧೦, ಪುಟ : ೧೧೭

೧೦೨. ತೆಲಗಾವಿ ಲಕ್ಷ್ಮಣ, ಚಿತ್ರದುರ್ಗದ ಜಿಲ್ಲಾ ಇತಿಹಾಸ ಅಧ್ಯಯನ ವ್ಯಾಪಕತೆ ಮತ್ತು ಸಾಧ್ಯತೆ, ೨೦೦೪, ಪುಟ ೩೯

೧೦೩. ಎನ್.ಎಸ್.ಮಹಂತೇಶ, ಚಿತ್ರದುರ್ಗದ ಕೋಟೆ ಪರಿಸರದ ದೇವಾಲಯಗಳು-ಒಂದು ಸಾಂಸ್ಕೃತಿಕ ಅಧ್ಯಯನ, ೨೦೦೮, ಪುಟ ೩೭

೧೦೪. ಬಿ.ರಾಜಶೇಖರಪ್ಪ : ಇತಿಹಾಸ ಕಥನ, ೨೦೦೧, ಪುಟ : ೯

೧೦೫. ತ.ರಾ.ಸು.: ನೃಪತುಂಗ : ೨೦೦೮, ಪುಟ : ೨೯

೧೦೬. ತ.ರಾ.ಸು.: ನೃಪತುಂಗ : ೨೦೦೮, ಪುಟ : ೨೯

೧೦೭. ತ.ರಾ.ಸು.: ಸಿಡಿಲಮೊಗ್ಗು : ೨೦೧೪, ಪುಟ : ೪೦

೧೦೮. ಎಂ.ಮಹೇಶ : ತ.ರಾ.ಸು.ಸಾಹಿತ್ಯ : ಒಂದು ಅಧ್ಯಯನ : ೨೦೦೯, ಪುಟ : ೯೬

೧೦೯. ಹಾ.ಮಾ. ನಾಯಕ(ಸಂ): ಚಿನ್ನದಗರಿ, ೧೯೭೪, ಪುಟ : ೧೩೬-೧೩೭

೧೧೦. ತ.ರಾ.ಸು. : ತಿರುಗುಬಾಣ: ೨೦೦೮, ಪುಟ : ೧೮೬

೧. ೧೧೧. ತ.ರಾ.ಸು. : ಕಸ್ತೂರಿ ಕಂಕಣ : ೨೦೧೨, ಪುಟ : ೨೭೨

೧೧೨. ತ.ರಾ.ಸು. : ದುರ್ಗಾಸ್ತಮಾನ : ೨೦೧೦, ಪುಟ : ೧೦೬-೧೦೭

೧೧೩. ನೆಲ್ಲಿಕಟ್ಟೆ ಎಸ್. ಸಿದ್ದೇಶ್ (ಸಂ), ಭಾರತೀಯ ಧೀರ ಮಹಿಳೆ ಚಿತ್ರದುರ್ಗದ ಜನಕ್ಕೆ ಓಬವ್ವ, ಸಂಪಾದಕರನುಡಿ. ೨೦೦೭.



# ಅಧ್ಯಾಯ : ಆರು

# ತ.ರಾ.ಸು. ಚಾರಿತ್ರಿಕ ಕಾದಂಬರಿಗಳು:

# ಭಾಷೆ ಮತ್ತು ಶೈಲಿ

## ಅಧ್ಯಾಯ : ಆರು

## ತ.ರಾ.ಸು. ಚಾರಿತ್ರಿಕ ಕಾದಂಬರಿಗಳು: ಭಾಷೆ ಮತ್ತು ಶೈಲಿ

ಮಾನವನ ಸಂವಹನ ಕ್ರಿಯೆಯಲ್ಲಿ ಭಾಷೆಗೆ ಅಗ್ರಸ್ಥಾನವಿದೆ. ಯಾವುದೇ ಒಬ್ಬ ಲೇಖಕನ ಕೃತಿಯ ಯಶಸ್ಸು ಅವನು ಬಳಸಿದ ಭಾಷೆ ಮತ್ತು ಶೈಲಿಗಳ ಮೇಲೆ ಅವಲಂಬಿತವಾಗಿರುತ್ತದೆ. ಪ್ರತಿಯೊಬ್ಬ ಲೇಖಕನಿಗೂ ತನ್ನದೇ ಆದ ಭಾಷೆ ಮತ್ತು ಶೈಲಿಗಳಿರುತ್ತವೆಂಬುದು ಅಷ್ಟೇ ಸತ್ಯವಾದ ಮಾತಾಗಿದೆ. ಲೇಖಕನ ಅಮೂರ್ತವಾದ ಭಾವ ಮತ್ತು ಅನುಭಾವಗಳಿಗೆ ಮೂರ್ತ ರೂಪ ಕೊಡುವಲ್ಲಿ ಈ ಭಾಷೆ ಮತ್ತು ಶೈಲಿಗಳು ಪ್ರಮುಖ ಪಾತ್ರ ವಹಿಸುತ್ತವೆ. ಪ್ರಗತಿಶೀಲ ಪಂಥದ ಲೇಖಕರಲ್ಲಿ ಅ.ನ.ಕೃ. ಅವರ ಪ್ರಭಾವ ಕಂಡುಬಂದರೂ ಆಯಾ ಲೇಖಕರ ನಿರೂಪಣಾ ಧಾಟಿ ವಿಭಿನ್ನವೂ, ವಿಶಿಷ್ಟವೂ ಆಗಿ ಅವರವರ ಭಾಷೆ-ಶೈಲಿಗಳು ಭಿನ್ನ ಭಿನ್ನವಾಗಿ ಕಂಡವು. ಹಾಗೆಯೇ ತ.ರಾ.ಸು. ಅವರು ತಮ್ಮದೇ ಆದ ಭಾಷೆ ಮತ್ತು ಶೈಲಿಗಳೆರಡರಿಂದಲೂ ಕನ್ನಡ ಸಾಹಿತ್ಯ ಲೋಕದಲ್ಲಿ ಗಮನ ಸೆಳೆದರು. ಮತ್ತು ಶೈಲಿಯಲ್ಲಿನ ಕುಶಲತೆಗಳಿಂದಾಗಿ ಅವರು ಕನ್ನಡನಾಡಿನ ಜನಮಾನಸದಲ್ಲಿ ಚಿರಸ್ಥಾಯಿಯಾಗಿ ಉಳಿದಿದ್ದಾರೆ. "ತ.ರಾ.ಸು. ಬಳಸಿದ ರಚನಾತಂತ್ರ, ಸಂವಿಧಾನಾದಿಗಳು ಉಲ್ಲೇಖನೀಯವಾದಂತೆ ಅವರ ಭಾಷೆಯೂ ಮೇಲ್ಮಟ್ಟದ್ದಾಗಿದೆ. ಅವರ ಸೃಷ್ಟಿಯ ಭಾಷಾತರುಣಿ ಮನಮೋಹಕಳಾಗಿ ಬೆಳೆದಿದ್ದಾಳೆ. ತನ್ನ ಹಾವ, ಭಾವ ವಿಲಾಸಗಳಿಂದ ಶೋಭಿಸಿದ್ದಾಳೆ. ಬೆಡಗುವಡೆದ ನೋಟಗಳಿಂದ ಆಕರ್ಷಿಸುತ್ತಿದ್ದಾಳೆ. ಇದಕ್ಕೆ ಅವರ ಭಾಷೆಯಲ್ಲಿ ಹೆಜ್ಜೆಹೆಜ್ಜೆಗೂ ಮಿನುಗುತಾರೆಯಂತೆ ಕಂಗೊಳಿಸುವ ವೈಚಿತ್ರ್ಯ ಪೂರ್ಣವಾದ ಸರಸೋಕ್ತಿಗಳೇ ಕಾರಣ"[೧] ಎಂದು ಹೇಳುವ ಎಸ್.ಲಕ್ಷ್ಮೀನಾರಾಯಣಭಟ್ಟರ ಮಾತು ಈ ಸಂದರ್ಭದಲ್ಲಿ ಗಮನಾರ್ಹವಾಗಿದೆ.

ಮನುಷ್ಯನಿಗೆ ಪ್ರಕಾಶತೆಯ ಕಳಸವನ್ನು ಇಟ್ಟು ತನ್ನ ಸುತ್ತಡೆಗೂ ಬೆಳಗುವಂತೆ ಮಾಡಿದ ಮಾಧ್ಯಮವೆಂದರೆ ಭಾಷೆ. ಭಾಷೆ ಎಂಬುದು ಸಂಸ್ಕೃತಿ ಪದದ 'ಭಾಸ' ಎಂಬ ಧಾತುವಿನಿಂದ ಬಂದಿದೆ. 'ಭಾಸ' ಎಂದರೆ ಹೊಳೆಯುವುದು. ಪ್ರಕಾಶಿಸುವುದು ಎಂದು ಇವರ ಅರ್ಥ. ಅಂದರೆ ನಮ್ಮ ಭಾವನೆಗಳನ್ನು ಅನಿಸಿಕೆಗಳನ್ನು ಮತ್ತು ಆಲೋಚಿಸಿದ ವಿಷಯಗಳನ್ನು ಇನ್ನೊಬ್ಬರಿಗೆ ತಾಮಸವಾಗದೆ ತಿಳಿಯಾಗಿ ಹೇಳುವುದು ಭಾಷೆ.

ಪ್ಲೇಟೋ ತತ್ವಜ್ಞಾನಿ ಮೊಟ್ಟ ಮೊದಲು ಭಾಷೆಯನ್ನು ಕುರಿತು ಚರ್ಚಿಸಿದ. ಈತ 'ಧ್ವನಿ ಸಂಕೇತಗಳಿಂದ ಮನುಷ್ಯನ ವಿಚಾರಗಳನ್ನು ಅಭಿವ್ಯಕ್ತಿಗೊಳಿಸುವ ಸಾಧನ' ಎಂದು

ಅಭಿಪ್ರಾಯ ಪಟ್ಟಿದ್ದಾನೆ. ಮಾನವನ ಆಂತರಿಕ ಭಾವನೆಯು, ಬಯಕೆಯ ಉತ್ಕಟತೆಗಳು ಬಾಳಿನ ಕಡೆ ಅಥವಾ ಬೇರೊಬ್ಬರಿಗೆ ವ್ಯಕ್ತ ಪಡಿಸಲು ತಾವು ಎಚ್ಚರಿಸುವ ಸಂಕೇತಗಳ ಮಾಧ್ಯಮದಿಂದ ಮತ್ತು ಯಾದೃಚ್ಛಿಕ ಧ್ವನಿಮಾಗಳಿಂದ ಹೊರಬಂದ ವಿಶಿಷ್ಟ ಸಾಧನೆಯ ವಾಹಕವೇ ಭಾಷೆ ಎಂದು ಹೇಳಬಹುದು.

ತ.ರಾ.ಸು. ಅವರು ತಮ್ಮ ಐತಿಹಾಸಿಕ ಕಾದಂಬರಿಗಳಲ್ಲಿ ಬಳಸುವ ಭಾಷೆಯು ಗಂಭೀರ ಸ್ವರೂಪದ್ದಾಗಿದೆ. ಅಷ್ಟಲ್ಲದೇ ಅದು ಅಲಂಕಾರಿಕ ಭಾಷೆಯಾಗಿ ತೋರುತ್ತದೆ. ಆಯಾ ಘಟನೆ, ಪಾತ್ರ, ಸನ್ನಿವೇಶಗಳಿಗೆ ತಕ್ಕುದಾದ ಭಾವ ಸ್ಪಂದನವನ್ನು ಅವರು ಕೊಡುತ್ತಾ ಹೋಗುತ್ತಾರೆ. ಜೊತೆಗೆ ಸ್ವಭಾವ ಸಹಜ ಗುಣಧರ್ಮದೊಂದಿಗೆ ಪಾತ್ರಗಳನ್ನು ಚಿತ್ರಿಸುವ ಪರಿಯನ್ನು ಅವರಲ್ಲಿ ಕಾಣುತ್ತೇವೆ. ಅವರ ಕೃತಿಗಳಲ್ಲಿ ಭಾಷಾಪ್ರೌಢಿಮೆಯ ಜೊತೆಜೊತೆಗೆ ಕಾವ್ಯಾತ್ಮಕ ಗುಣವು ಆಕರ್ಷಣೀಯವಾಗಿ ಕಂಡುಬರುವಂತಹದ್ದಾಗಿದೆ. ಅಲ್ಲಲ್ಲಿ ಗ್ರಾಮ್ಯ ಭಾಷೆಯ ಸೊಗಡನ್ನು ಕಾಣಬಹುದಾಗಿದೆ. ಈಗ ಅವರ ಐತಿಹಾಸಿಕ ಕಾದಂಬರಿಗಳಲ್ಲಿನ ಕೆಲ ನಿದರ್ಶನಗಳೊಂದಿಗೆ ಭಾಷೆಯ ಸೊಬಗನ್ನು ಅರಿಯಬಹುದಾಗಿದೆ.

'ಸಿಡಿಲ ಮೊಗ್ಗು' ಕಾದಂಬರಿಯಲ್ಲಿ ಎರೆಯಂಗದೇವ ಮತ್ತು ಏಚಲಾದೇವಿಯ ಕುಟುಂಬ ಸದಸ್ಯರು ಸೊಸೆವೂರಿಗೆ ಪ್ರಯಾಣ ಬೆಳೆಸಿದಾಗ, ಮಾರ್ಗ ಮಧ್ಯ ಸತ್ರವೊಂದರಲ್ಲಿ ತಂಗಿದ ಸಂದರ್ಭದಲ್ಲಿ ವ್ಯಾಧಿಯಿಂದ ಬಳಲುವ ಬಲ್ಲಾಳನಿಗೆ ತನ್ನೊಂದಿಗೆ ತಂದ ಔಷಧವನ್ನು ಕುಡಿಸಿ ಏಚಲಾದೇವಿ, ತನ್ನ ಪತಿ ಎರಯಂಗದೇವನಿಗೆ ಹೇಳುವ ಮಾತುಗಳನ್ನು ನೋಡಿ, 'ನಾವು ಹೀಗೆ ಸೊಸೆವೂರಿಗೆ ಹಿಂದಿರುಗುವುದೇ ಮೇಲೆಂದು ಕಾಣುತ್ತದೆ. ಬಲ್ಲಾಳ ಹೀಗಿರುವಾಗ, ಅವನನ್ನು ಕರೆದುಕೊಂಡು ಬಂದದ್ದು ಸರಿಯಾಗಲಿಲ್ಲ, ಇವನನ್ನು ಕರೆದುಕೊಂಡು, ಈ ಅವಸ್ಥೆಯಲ್ಲೇ ಬಳ್ಳಿಗಾಮೆಯನ್ನು ಸೇರಿದರೆ, ಅಲ್ಲಿ ನಮಗೂ ಹಿತವಾಗಿರುವುದಿಲ್ಲ: ಅಲ್ಲಿಯವರಿಗೂ ತೊಂದರೆಯಾಗುತ್ತದೆ. – ಎಂದು ಸೂಚಿಸಿದಳು.

'ನನಗೂ ಹಾಗೆಯೇ ತೋರುತ್ತದೆ. ಆದರೇನು ಮಾಡುವುದು? ಚಕ್ರವರ್ತಿಗಳ ಆಜ್ಞೆ ಎಂದು ಹೊರಟದ್ದಾಯಿತು. ಈಗ ಹಿಂದೆ ಹೋಗುವುದೂ, ಮುಂದೆ ಹೋಗಬೇಕಾದಷ್ಟೆ ದೂರ. ಇಷ್ಟು ದೂರ ಬಂದು ಹಿಂದಿರುಗಿದರೆ ಚಕ್ರವರ್ತಿಗಳ ಮನಸ್ಸಿಗೆ ನಾವೇ ನೋಡಬೇಕು ಎಂದು ಹೇಳಿಕಳಿಸಿದರೂ, ಇವರು ತಮ್ಮ ಹೆಂಡತಿ ಮಕ್ಕಳನ್ನು ಕರೆತರಲಿಲ್ಲ ಎಂದು ಬೇಸರವಾಗಬಹುದು' ಎಂದ ಎರೆಯಂಗದೇವ.

'ಅದೆಂಥ ಮಾತು ಅಪ್ಪಾಜಿ? ಈ ಚಳಗಾಳಿಯ ಪ್ರಯಾಣವನ್ನು ಸಹಿಸಲಾಗದೆ, ಅರ್ಧದಾರಿಯವರೆಗೆ ಬಂದೂ ಹೆಂಗಸರು ಹಿಂದಿರುಗಿದರೂ ಎಂದರೂ ಚಕ್ರವರ್ತಿಗಳು

ಬೇಸರ ಮಾಡಿಕೊಳ್ಳುತ್ತಾರೆಯೇ? ಈ ಸಣ್ಣಮಾತು ಅವರಿಗೆ ಅರ್ಥವಾಗುವುದಿಲ್ಲವೇ? ಅವರು ಮನುಷ್ಯರಲ್ಲವೇ? ಇನ್ನೊಬ್ಬರ ಕಷ್ಟಸುಖ ಅರ್ಥವಾಗದಷ್ಟು ಮೈ ಮನಸ್ಸು ಮರಗಟ್ಟಿ ಹೋಗಿರುತ್ತದೆಯೇ ಚಕ್ರವರ್ತಿ ಎನಿಸಿಕೊಂಡವರಿಗೆ?' – ತಂದೆಯ ಮಾತಿನ ತರ್ಕ ಅರ್ಥವಾಗದೆ, ತನ್ನ ಅಣ್ಣನ ವ್ಯಾಧಿಯಿಂದ ನೊಂದ ವಿಷ್ಣುವರ್ಧನ ಕೊಂಚ ಕಾರವಾಗಿಯೇ ಕೇಳಿದ (ಸಿಡಿಲ ಮೊಗ್ಗು, ಪುಟ: ೩೧) ಇಂತಹ ಸಂಭಾಷಣೆ ತ.ರಾ.ಸು. ಕಾದಂಬರಿಗಳ ಜೀವಂತಿಕೆಯ ದ್ಯೋತಕ.

ಅಲಂಕಾರಿಕ ಭಾಷೆಗೆ ಈ ಮಾತುಗಳನ್ನು ನೋಡಬಹುದು, 'ಹಿಮಗಾಲದ ಬೆಳ್ಮಗಿಲು ತುಂಬಿದ ಮುಗಿಲಲ್ಲಿ ಕಡಗೋಲಿನಾಕಾರದ ಚೌತಿಯ ಚಂದ್ರ ಕಿತ್ತಳೆಯ ತೊಳೆಯಂತೆ ಮಂದ ಪ್ರಕಾಶದಿಂದ ಹೊಳೆಯುತ್ತಿದ್ದ. ಹಂಸಪಕ್ಷಿಯ ಕೆದರಿದ ತುಪ್ಪಳದಂತೆ ಅಲ್ಲಲ್ಲಿ ಹರಡಿದ ಬೆಳ್ಳನೆಯ ಗರಿಮೋಡಗಳ ನಡುವೆ ತಾರೆಗಳು ಎಲ್ಲೋ ಅವಿತುಕೊಂಡು, ಮೇಘಗಳು ಕಿಕ್ಕಿರಿದ ಬಾನಿನಲ್ಲೂ ಚಂದ್ರ ಏಕಾಂಗಿಯಾಗಿ, ಆ ಒಂಟಿತನವನ್ನು ಸಹಿಸಲಾರದೆಯೋ ಎಂಬಂತೆ, ಪಡುವಣದತ್ತ ಧಾಮಿಸುತ್ತಿದ್ದ'. (ಸಿಡಿಲ ಮೊಗ್ಗು, ಪುಟ, ೧೧೦)

ರಾಜಕಾರಣದ ಹೋಯ್ದಾಟದಲ್ಲಿ ಭುವನಪ್ಪನವರು ಓಬವ್ವ ನಾಗತಿಗೆ ಹೇಳುವ ಮಾತುಗಳನ್ನು ನೋಡಿ, 'ನಿಜ ಎಪ್ಪತ್ತರ ಹತ್ತಿರ; ಬಹಳ ಹತ್ತಿರ. ನನಗೂ ಈ ರಾಜಕಾರಣ ಸಾಕಾಗಿದೆ ತಾಯಿ. ಇಷ್ಟುದಿನ ಈ ಲೋಕದ ಚಿಂತೆಯೇ ಆಯಿತು. ಆ ಲೋಕದ ಕರೆ ಬರುವ ಹೊತ್ತು ಹತ್ತಿರವಾಯಿತು. ಆ ಕೂಗು ಬರುವ ಹೊತ್ತಿಗಾದರೂ ಅಲ್ಲಿಯ ಮಾರ್ಗದ ಚಿಂತೆ ಮಾಡೋಣ ಎಂದರೆ, ನಿಷ್ಕರುಣೆಯಾದ ದುರ್ಗಮಾತೆ ಅದಕ್ಕೆ ನನ್ನನ್ನು ಬಿಡುವುದಿಲ್ಲವೆಂದು ಹಟ ಹಿಡಿದಿದ್ದಾಳೆ. ತಾನು ಕೆಡುವ ಕೋತಿ ವನವನ್ನೆಲ್ಲಾ ಕೆಡಿಸಿತು ಎಂಬಂತೆ, ಈಗ ನಾನಿದನ್ನು ನಿಮ್ಮ ಮೈಗೂ ಸುತ್ತುತ್ತಿದ್ದೇನೆ. ಊಹೂ.... ನನಗೂ , ನಿಮಗೂ ಇಬ್ಬರಿಗೂ ಬೇರೆ ದಾರಿಯೇ ಇಲ್ಲ, ಹೇಳಿ ಏನು ಮಾಡುವಿರಿ?' (ಕಂಬನಿಯ ಕುಯಿಲು, ಪುಟ, ೩೨)

ಅವಸರದಲ್ಲಿ ನಡೆಯುವ ಪಟ್ಟಾಭಿಷೇಕದ ವಾರ್ತೆಯನ್ನು ಕೇಳಿ ಪ್ರಜೆಗಳಲ್ಲಿ ಕಂಡು ಬರುವ ಅಸಮಾಧಾನದ ಈ ಪ್ರಸಂಗವನ್ನು ನೋಡಿ 'ಪಟ್ಟಾಭಿಷೇಕವೆಂದರೆ, ಇದೇನು ದಿನನಿತ್ಯ ನಡೆವ ಹಬ್ಬ ಹರಿದಿನವೇ? ವರ್ಷಕ್ಕೊಂದು ಬಾರಿ ನಡೆದ ವರ್ಧಂತು ಉತ್ಸವವೋ? ಪುಣ್ಯವಿದ್ದರೆ ಜನ್ಮದಲ್ಲಿ ಒಂದು ಬಾರಿಯೆ, ಎರಡು ಬಾರಿಯೊ ಕಾಣಬಹುದಾದ ಅಪೂರ್ವ ಉತ್ಸವ. ಅದನ್ನಿಷ್ಟು ಅವಸರವಾಗಿ ಮುಗಿಸಿದರೆ ಏನಾದ ಹಾಗಾಯಿತು. ಹಬ್ಬಕ್ಕೆ ಊಟಕ್ಕೆ ಕರೆದು ಅರೆಹೊಟ್ಟೆ ಊಟಕ್ಕಿಟ್ಟ ಹಾಗೆ ಮಾಡಿದರು. ಅರಮನೆಯವರು.' (ಕಂಬನಿಯ ಕುಯಿಲು. ೧೫೪) ಇಂತಹ ಮಾತುಗಳಲ್ಲಿ ಗ್ರಾಮ್ಯ ಭಾಷೆಯ ಸೊಗಡು ಎದ್ದುಕಾಣುತ್ತದೆ.

'ಕೀರ್ತಿನಾರಾಯಣ' ಕಾದಂಬರಿಯಲ್ಲಿ ವಿಷ್ಣುವರ್ಧನನು ತುಂಬಿದ ಓಲಗದಲ್ಲಿ ಜನತೆಗೆ ಹೇಳುವ ಮಾತುಗಳು, 'ನಮ್ಮ ಜನತೆಗೆ ನಾವು ಹೇಳುವುದೂ ಅಷ್ಟೇ–ಧರ್ಮಕ್ಕೆ ಶರಣಾಗಿ ನಡೆದುಕೊಳ್ಳಿ : ಕೀರ್ತಿಕಾಮಿಗಳಾಗಿ ಬಾಳಿ'.

ನಮ್ಮ ಕೀರ್ತಿ, ನಮ್ಮ ನುಡಿ, ನಮ್ಮ ನಾಡಿನ ಕೀರ್ತಿಯೇ ನಮ್ಮ ದಿವ್ಯ ಧ್ವಜವಾಗಲಿ. ಕನ್ನಡಿಗರ ಕೀರ್ತಿ ಕತ್ತುರಿಯ ಪರಿಮಳದಂತೆ ದಿಗಂತ ವಿಖ್ಯಾತವಾಗಿ ಚಿರಾಯುವಾಗಲಿ. ಕನ್ನಡ ತಾಯ್ ಬಾಳ್ಗೆ : ಸಿರಿಗನ್ನಡಂಗೆಲ್ಗೆ' (ಕೀರ್ತಿನಾರಾಯಣ, ಪುಟ: ೧೭೦) ಎಂಬಂತಹ ನುಡಿಗಳಲ್ಲಿ ತ.ರಾ.ಸು. ಅವರು ಕನ್ನಡ ನಾಡು–ನುಡಿಯ ಅಭಿಮಾನದ ಹಿನ್ನೆಲೆಯಲ್ಲಿ ಉದುರಿಸಿದ ನುಡಿಮುತ್ತುಗಳಂತೆ ಕಾಣುತ್ತವೆ.

ಲಿಂಗಣ್ಣ ನಾಯಕನಿಗೆ ಹಿಂಸೆ ನೀಡಿ, ಕೊಲ್ಲುವ ಸಂದರ್ಭದಲ್ಲಿ ದಳವಾಯಿ ಮುದ್ದಣ್ಣನ ಬಾಯಿಂದ ಹೊರಬರುವ ಈ ಮಾತುಗಳನ್ನು ನೋಡಿ, "ಕತ್ತಿ ಬೇಕೆ ನಿನಗೆ? ಅದು ಸಿದ್ಧವಾಗಿದೆ ನಾಯಕ. ರಾಯಣ್ಣ ಇದು ನಮ್ಮನ್ನು ಸೆಟೆದು ನೋಡಿದ ಕಣ್ಣು. ಇದು ನಮ್ಮನ್ನು ಬೈದ ಬಾಯಿ ಇದು ನಮಗೆ ಅಡ್ಡವಾದ ತಲೆ" – ಎಂದವನೇ ಬಳಿಯಿದ್ದ ಕತ್ತಿಯಿಂದ ನಾಯಕನ ಕತ್ತಿಗೆ ಹೊಡೆದ. ಲಿಂಗಣ್ಣ ನಾಯಕನ ತಲೆ ಹಾರಿ, ಮಂಚದ ಮೇಲೆ ಉರುಳಿ ರಕ್ತ ಕಾರುತ್ತಾ ಅತ್ತಿಂದಿತ್ತ ಪುಟಿಯಿತು. ಪುಟಿಯುತ್ತಿದ್ದ ತಲೆಯನ್ನು ಕಾಲಿನಿಂದ, ಚಂಡಿನಂತೆ ಒದೆದು ಪುಟಹಾರಿದ ಅದನ್ನು ನೋಡುತ್ತಾ ಹೇಳಿದ – 'ರಾಯಣ್ಣಾ – ನನ್ನ ಹಗೆ ತೀರಿತು. ಇಂದಿನಿಂದ ದುರ್ಗ ನನ್ನದು". (ರಕ್ತರಾತ್ರಿ, ಪುಟ: ೨೩೮) ಎಂಬಂತಹ ಮಾತುಗಳಲ್ಲಿ ಕ್ರೂರ ಗುಣವನ್ನು ಕಾಣುತ್ತೇವೆ. ಇಂತಹ ಸನ್ನಿವೇಶಗಳಲ್ಲಿ ತ.ರಾ.ಸು. ಅವರು ಆಯಾ ಪಾತ್ರಗಳ ಸ್ವಭಾವಕ್ಕನುಗುಣವಾದ ಭಾಷೆ ಬಳಸಿದ್ದನ್ನು ಕಾಣಬಹುದಾಗಿದೆ.

ಓಬವ್ವ ನಾಗತಿಯ ದು:ಖವನ್ನು ಕಂಡು ಹೊನ್ನವ್ವೆ ಮರಗುವ ಈ ಚಿತ್ರಣವನ್ನು ನೋಡಿ. 'ಅಳುವಿಲ್ಲ, ಕಣ್ಣೀರಿಲ್ಲ, ನಿಟ್ಟುಸಿರಿಲ್ಲ – ಎಂಥದು:ಖ ಇದು! ಹೆಮ್ಮರವನ್ನು ಒಳಗೇ ಕೊರೆದು ಗೆದ್ದಲು ಗೂಡಾಗಿ ಮಾಡುವಂಥ ದು:ಖ, ದು:ಖವನ್ನೇ ಕರಗಿಸಿ ಎರಕವೊ ನಿರ್ಮಿಸಿದ ಹೆಣ್ಣುಗೊಂಬೆ ನಾಗತಿಯ ಎಂಥ ವಿಚಿತ್ರ ದು:ಖ ಇದು – ಆಕೆ ಬಾಯಿಬಿಟ್ಟು ಹೇಳದ – ತಾನು ಕಣ್ಣಿನಿಂದ ನೋಡಲೂ ಆಗದ – ಅಷ್ಟು ದೂರಕ್ಕೂ ಕುಲುಮೆಯ ಉರಿಯಂತೆ ಕುದಿಕಾವು ಮುಟ್ಟಿಸುವ ದು:ಖ. 'ಇಷ್ಟು ದು:ಖವನ್ನು ನನ್ನವ್ವ ಹೇಗೆ ತಡೆದುಕೊಂಡಿದ್ದಾಳೆ?' ದಿನವೂ ಹೂಪೂಜೆ ಮಾಡಿಸಿಕೊಳ್ಳು ಉಚ್ಚಂಗಮ್ಮ 'ಇನ್ನೆಂಥ ಕಲ್ಲು ಮನಸ್ಸೇ ನಿನ್ನದು. ಈ ತಾಯಿಗಿಷ್ಟು, ದು:ಖವನ್ನೇಕೆ ಕೊಟ್ಟೇ?' (ದುರ್ಗಾಸ್ತಮಾನ, ಪುಟ. ೨೭) ಎಂಬಂತಹ ಮಾತಿನ ಮೂಲಕ ತ.ರಾ.ಸು., ಅವರು ಭಾಷೆಯ ಮೂಲಕ ಪಾತ್ರಗಳ ಅಂತರ್ಯದ ಭಾವನೆಗಳನ್ನು ಸೆರೆಹಿಡಿಯುವ ಪರಿಯು ಆಗಾಧವಾಗಿ ಕಾಣಿಸುತ್ತದೆ.

ಮೇಲೆ ಉಲ್ಲೇಖಿಸಿದಂತೆ, ಇಂತಹ ಎಷ್ಟೋ ಪ್ರಸಂಗಗಳು ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳಲ್ಲಿ ಹಾಸುಹೊಕ್ಕಾಗಿ ಬರುತ್ತವೆ. ಇಲ್ಲಿ ಅವುಗಳನ್ನು ಸಾಧಾರವಾದ ಸ್ವರೂಪದಲ್ಲಿ ಕೆಲವೊಂದನ್ನು ಮಾತ್ರ ನಿರೂಪಿಸಲಾಗಿದೆ. ತ.ರಾ.ಸು. ಅವರ ಭಾಷೆ ಚಾರಿತ್ರಿಕ ವಿಚಾರ ಮತ್ತು ಪಾತ್ರಗಳಿಗೆ ಹೇಳಿ ಮಾಡಿಸಿದ ಭಾಷೆಯಂತೆ ಕಾಣುತ್ತದೆ. ಹತ್ತು ಹಲವು ರೂಪಕಗಳಿಂದ ಅವರ ಭಾಷೆ ಉಜ್ವಲವಾಗಿ ಬಳಕೆಯಾಗಿರುವುದನ್ನು ನೋಡುತ್ತೇವೆ. ಉಕ್ತಿ ಚಾತುರ್ಯತೆ ಅವರಲ್ಲಿ ಎದ್ದು ಕಾಣುತ್ತದೆ. ಅದು ಆಗಾಗ ಪುನರುಕ್ತವಾಗುವುದು ಉಂಟು. ಇದು ಕೆಲವೊಮ್ಮೆ ನಿರಸದಂತೆ ತೋರುತ್ತದೆ.

ತ.ರಾ.ಸು. ಕಾದಂಬರಿಗಳ ಸಂಭಾಷಣೆಯಲ್ಲಿ ಗಾದೆ ಮಾತುಗಳು, ನಾಣ್ಣುಡಿಗಳು ಮತ್ತು ನುಡಿಗಟ್ಟುಗಳು ಹೇರಳವಾಗಿ ಬಳಕೆಯಾಗಿರುವುದನ್ನು ಕಾಣುತ್ತೇವೆ. ಇವು ಅವರ ಕಾದಂಬರಿಗಳ ಕುತೂಹಲವನ್ನು ಹೆಚ್ಚಿಸುವಲ್ಲಿ ಪ್ರಮುಖ ಪಾತ್ರವಹಿಸಿವೆಯೆಂಬುದನ್ನು ಮರೆಯುವಂತಿಲ್ಲ. ಇದರಿಂದ ಅವರ ಗದ್ಯದ ಸೊಗಸು ಹೆಚ್ಚಿದೆ. ನಿದರ್ಶನ ರೂಪದಲ್ಲಿ ಕೆಲವನ್ನು ಗಮನಿಸಬಹುದು.

**ಗಾದೆ ಮಾತುಗಳು:**

- ರಾಮನಿಗೆ ರಾಜ್ಯವಾದರೂ, ಬಡವನಿಗೆ ರಾಗಿ ಬೀಸೋದು ತಪ್ಪಲ್ಲ.
- ಆಡಿದರೆ ಅರಗಿಳಿ, ಕಡಿದರೆ ಕಾಳಿಂಗಸರ್ಪ.
- ನಾಯಿ ಬೊಗಳಿದರೆ ಆಕಾಶ ಉದುರುತ್ತದೆಯೇ?
- ಹನುಮಂತರಾಯ ಹಗ್ಗ ತಿಂದರೆ ಪೂಜಾರಯ್ಯನಿಗೆ ಶ್ಯಾವಿಗೆ ಸಿಗುತ್ತದೆಯೇ?
- ಮುಳ್ಳಿನ ಮೇಲೆ ಬಟ್ಟೆ ಹಾಕಿದಂತೆ.
- ಕುಣಿಯುವ ಕಾಲಿಗೆ ಗೆಜ್ಜೆಕಟ್ಟಿದಂತಾಯಿತು.
- ಆಕಳಿಸಿದವನಿಗೆ ಹಾಸಿಗೆ ಹಾಸಿದಂತಾಯಿತು.

**ನುಡಿಗಟ್ಟುಗಳು ಮತ್ತು ನಾಣ್ಣುಡಿಗಳು :**

- ಕತ್ತಿಯಲ್ಲೆ ಬಿತ್ತಿದುದು ಕತ್ತಿಯಲ್ಲೇ ಕೊಯಿಲಾಗುತ್ತದೆ.
- ರಕ್ತದಲ್ಲಿ ಕಟ್ಟಿದ ಕೋಟೆ ರಕ್ತದಲ್ಲಿ ಮುಳುಗುತ್ತದೆ.
- ಕಲ್ಲು ಮಾತಾಡಬೇಕೆಂದರೆ ಕೊಡಲಿಯ ಪೆಟ್ಟು ಬೀಳಬೇಕು.
- ಕಲ್ಲಿಗೆ ಕಲ್ಲಿನ ತೂಕವಿದ್ದರೆ ಹೂವಿಗೆ ಹೂವಿನ ತೂಕ ಇದ್ದೇ ಇರುತ್ತದೆ.

- ಇದು ಕಾದ ಹಾಲು, ಆರಿದರೆ ತಾನೇ ಹಿತವಾಗುತ್ತದೆ.
- ಹಸಿಹಸಿಯಾಗಿ ಬಿದ್ದರೂ ನೀರು ಕಡೆಗೊಂದು ದಿನ ಕೊಡಗಲ್ಲನ್ನೇ ಕದಲಿಸುವಂತೆ.
- ಬೆಂಕಿಯ ಮೇಲೆ ಬಿದ್ದ ಕೈಕಾಲು ಕಟ್ಟಿದ ಪಶು ಅಸಹಾಯ ಸ್ಥಿತಿಯಲ್ಲಿ ನರಳುವಂತೆ.
- ದಂಡಿಗೆ ಸೋಲಲಿಲ್ಲ, ದಾಳಿಗೆ ಸೋಲಲಿಲ್ಲ – ಹುಡುಗೀ ಕಣ್ಣಿಗೆ ಸೋತು ಬಿಟ್ಟ ಗಂಡು ಭಂಟ.
- ಸುತ್ತಲೂ ಎಣ್ಣೆಯಲ್ಲಿ ತೊಯ್ದ ಬಟ್ಟೆ ಇರುವಾಗ, ಕಿಡಿಬೆಂಕಿಗೂ ಹೆದರಬೇಕಲ್ಲವೇ?
- ಮಲಗಿದ ಹಾವನ್ನು ಕೆರಳಿಸಿದಂತಾಯಿತು.
- ದೊರೆಯಿಲ್ಲದ ರಾಜ್ಯವೆಂದರೆ ಗಂಡನಿಲ್ಲದ ಹೆಣ್ಣಿನ ಹಾಗೆ.
- ಸೋಲು ಫಲದ ವೃಕ್ಷವನ್ನು ಬೆಳೆಸುವ ಜಗವಾಗಬೇಕು.
- ಸಂಗೀತವೆಂದರೇನು? ಚೀಲಕ್ಕಿಷ್ಟು ಎಂದು ತೂಗುವ ಹುಣಸೆ ಹಣ್ಣಲ್ಲ.

ಒಟ್ಟಾರೆ, ಸಂಭಾಷಣೆ ತ.ರಾ.ಸು. ಕಾದಂಬರಿಗಳ ಜೀವಾಳವಾಗಿದೆ. ಅದು ಅವರ ಕಥೆಯನ್ನು ಸರಾಗವಾಗಿ ಕೊಂಡೊಯ್ಯುವ ಸಾಮರ್ಥ್ಯವನ್ನು ಪಡೆದಿದೆಂದು ಹೇಳಬಹುದು. ಅವರು ಬಳಸುವ ಭಾಷೆ ಪ್ರೌಢವೂ ಆವೇಶಭರಿತವೂ ಆಗಿರುವುದು ಕೂಡ ಅಷ್ಟೇ ಗಮನಾರ್ಹವಾಗಿದೆ.

**ಶೈಲಿ:** ಭಾಷೆ ಮತ್ತು ಶೈಲಿಗೆ ಪೂರಕವಾದ ಸಂಬಂಧವಿದೆ. ಲೇಖಕನ ಬರವಣಿಗೆಯ ರೀತಿಯೇ ಶೈಲಿ ಎನಿಸಿಕೊಳ್ಳುತ್ತದೆ. ಅಂದರೆ ಒಬ್ಬ ಲೇಖಕ ತನ್ನ ಸಾಹಿತ್ಯ ಕೃತಿಯನ್ನು ಭಾಷಾಮಾಧ್ಯಮದ ಮೂಲಕ ಯಾವ ವಿಧದಲ್ಲಿ ಅಭಿವ್ಯಕ್ತಗೊಳಿಸಿದ್ದಾನೆ ಅಥವಾ ಪ್ರಕಟಗೊಳಿಸಿದ್ದಾನೆಂಬ ವಿಚಾರವು ಅವನ ಶೈಲಿಯ ಮೇಲೆ ಅವಲಂಬಿತವಾಗಿರುತ್ತದೆ. ಇದು ಲೇಖಕನ ಜೊತೆಜೊತೆಯಲ್ಲಿಯೇ ಬೆಳೆಯುತ್ತ ಹೋಗುವ ಗುಣವನ್ನು ಹೊಂದಿದೆ. ಆದ್ದರಿಂದಲೇ ಶೈಲಿ ಎಂಬುದು ವ್ಯಕ್ತಿ ನಿಷ್ಠತೆಯನ್ನು ಸೂಚಿಸುವಂತಹದ್ದಾಗಿದೆ. 'ಆಲೋಚನೆಯ ಉಡಿಗೆಯೇ ಶೈಲಿ' ಎಂಬ ಮಾತಿದೆ. ಜೊತೆಗೆ 'ಆಲೋಚನೆಗೆ ಸಾಕಷ್ಟು ಸಮರ್ಪಕ ಭಾಷೆಯನ್ನು ತೊಡಿಸುವ ಸಮಾರಂಭವೇ ಶೈಲಿ' ಎಂದು ಹೇಳಲಾಗುತ್ತದೆ.

ತಮ್ಮದೇ ಆದ ಭಾಷೆ ಮತ್ತು ಶೈಲಿಯನ್ನು ರೂಢಿಸಿಕೊಂಡವರಲ್ಲಿ ತ.ರಾ.ಸು. ಅವರು ಕೂಡ ಒಬ್ಬರೆನಿಸಿದ್ದಾರೆ. ಅವರ ಶೈಲಿ ವೈವಿಧ್ಯಮಯವಾಗಿದೆ. ರೋಚಕತೆ ಮತ್ತು ಭಾವುಕತೆಯನ್ನು ಹೊಂದಿದ ಶೈಲಿಯಾಗಿದೆ. ಅವರು ಭಾಷೆಯ ಕಟ್ಟಡದಲ್ಲಿ ಭವ್ಯವಾದ ಶಿಲ್ಪವನ್ನು ಕೆತ್ತಬಲ್ಲವರಾಗಿದ್ದಾರೆ. "ಅ.ನ.ಕೃ. ಅವರದು ಸರಳವಾದ ಶೈಲಿ. ಅವರ

ಎಲ್ಲ ಕಾದಂಬರಿಗಳಲ್ಲಿ ಬಳಸುವ ಭಾಷೆ ಒಂದೇ ರೀತಿಯವು. ಕಾದಂಬರಿಯನ್ನು ಓದಿ ಇದು ಇಂಥವರೇ ಬರೆದದ್ದೆಂದು ಗುರುತಿಸಬಹುದು. ತ.ರಾ.ಸು. ಅವರದು ಇದಕ್ಕಿಂತ ತುಸು ಭಿನ್ನ, ಇವರದು ಸಾಲಂಕೃತ ಶೈಲಿ. ಒಂದು ವಸ್ತುವನ್ನು ರೂಪಿಸುವಾಗ ವಿವರಗಳೊಂದಿಗೆ ವರ್ಣಿಸಬೇಕೆಂಬುದು ಇವರ ಅಭಿಲಾಷೆ. ಅಪಾರವಾದ ಪದ ಸಂಪತ್ತು ಇವರದು. ಕಲ್ಪನೆಯ ಚಟುವಟಿಕೆ ಬಲು ಹೆಚ್ಚು. ವಾಕ್ಯಸರಣಿಯ ಓಟ ಅತಿ ವೇಗ. ಇವರಿಗೆ ವಸ್ತುವಿಗಿಂತ ಶೈಲಿ ಎಂದಿಗೂ ಕೀಳಲ್ಲ. ಎರಡಕ್ಕೂ ಚಿತ್ತವನ್ನು ಸರಿಸಮನಾಗಿಯೇ ಕೊಡುತ್ತಾರೆ."[೨] ಎಂದು ಸುಂದರರಾಜ್ ಅವರು ಸರಿಯಾಗಿಯೇ ಗುರುತಿಸಿದ್ದಾರೆ. ಯಾಕೆಂದರೆ, ತ.ರಾ.ಸು. ಅವರ ಶೈಲಿ ಅಸಾಧಾರಣವಾದುದ್ದಾಗಿದೆ.

ಸಾಹಿತ್ಯದಲ್ಲಿ ಶೈಲಿ ಎಂಬುದು ಅನಾದಿಕಾಲದಿಂದಲೂ ಬಂದಿರುವಂತಹದ್ದು. ಕಾವ್ಯ ಮಿಮಾಂಸೆಯಲ್ಲಿ ಇದರ ಪಾತ್ರ ಸ್ವರೂಪವು ವಿಶಿಷ್ಟವಾಗಿ ಚರ್ಚೆಗೆ ಒಳಪಟ್ಟಿರುವುದಾಗಿದೆ. ಕಾವ್ಯಕ್ಕೆ ರೀತಿ/ಶೈಲಿಯೋ ಧ್ವನಿಯೋ ಅಲಂಕಾರವೋ ರಸ ಮುಖ್ಯವೋ ಎಂಬುದು ಚರ್ಚಾಸ್ಪದವಾಗಿದ್ದರೂ ವಿವಿಧ ರಸಜ್ಞರು ವಿವರಣೆ ಕೊಡುತ್ತಾ ಬಂದಿದ್ದಾರೆ.

ಶೈಲಿ ಎಂದರೆ 'ವಿಶಿಷ್ಟ ಪದರಚನಾರೀತಿ' ಎನ್ನುವುದಾದರೂ ಇದನ್ನು ಕಾವ್ಯ ಮೀಮಾಂಸಕಾರ ವಾಮನ ವಿಶಿಷ್ಟ ಪದ ರಚನಾ ರೀತಿರಾತ್ಮ ಕಾವ್ಯಸ್ಯ' ಎಂದು ಹೇಳಿದ. ಓದುಗರನ್ನೇ ಸುಲಭವಾಗಿ ಆಕರ್ಷಿಸಲು ವಿಶಿಷ್ಟವಾದ ಪದ ಸಮೂಹದಿಂದ ರಚನೆ ಮಾಡಿರಬೇಕು. ಶೈಲಿ ವಾಚನ ವಿನ್ಯಾಸ ಕ್ರಮವಾಗಿದ್ದು. ಮಾಧುರ್ಯ ವ್ಯಂಜಕವಾದ ವರ್ಣನೆಯಗಳಿಂದಲೂ ಸಮಾಸವಿಲ್ಲ/ ಸಣ್ಣಸಣ್ಣ ಸಮಾಸಗಳುಳ್ಳ ಪದಗಳಿಂದಲೂ ಕೂಡಿರುವ ಲಲಿತವಾದ ಪದ ರಚನೆಯನ್ನು ವೈದರ್ಭಿ ಶೈಲಿ ಎಂದು ಕರೆದಿದ್ದಾರೆ. ಒಜೋ ವ್ಯಂಜವಾದ ವರ್ಣನೆಗಳಿಂದಲೂ ದೊಡ್ಡ ದೊಡ್ಡ ಸಮಾಸಗಳಿಂದ ಕೂಡಿರುವ ಆಡರಂಬರವುಳ್ಳ ಮತ್ತು ಬಿಗಿಯಾದ ಪದ ರಚನೆ ಹೊಂದಿರುವುದು ಗೌಡ ಶೈಲಿ ಎಂದೂ ಸಣ್ಣ ಸಣ್ಣ ಸಮಾಸಗಳುಳ್ಳದಾಗಿಯೂ ಇರುವ ಪದರಚನೆ ಪಾಂಚಾಲಿ ಎಂದೂ ಕರೆದಿದ್ದಾರೆ.

ಸಾಹಿತ್ಯ ಕಲಾಕೃತಿಯಲ್ಲಿ ಶೈಲಿಯ ಮಾತು ಬಂದಾಗ ಈ ಕಾವ್ಯ ಶೈಲಿ ಚೆನ್ನಾಗಿದೆ. ಇದು ಆ ಕವಿ ಶೈಲಿಯಂತಿದೆ. ರಚನಾ ಶೈಲಿ ತುಂಬಾ ಚೆನ್ನಾಗಿದೆ. ಎಂದು ಹೇಳುತ್ತಾ ಇದು ಚಂಪುಶೈಲಿ ತ್ರಿಪದಿ, ವಚನ ದಾಟಿ ಹೀಗೆ ಮುಂತಾದವುಗಳನ್ನು ಶೈಲಿಯ ವಿಧಗಳನ್ನು ಹೇಳುತ್ತಾ ಕವಿ ಕಾವ್ಯದ ಶೈಲಿಯನ್ನು ಗುರುತಿಸುತ್ತೇವೆ.

ಒಟ್ಟಿನಲ್ಲಿ ಶೈಲಿ ಕವಿ/ಲೇಖಕನ ಶಕ್ತಿಗೆ ಅನುರೂಪವಾಗಿ ತನ್ನ ಕೃತಿಗಳಲ್ಲಿ ಮಹಾಶೈಲಿ, ಮಧ್ಯಮಶೈಲಿ, ಅಧಮ ಶೈಲಿಗಳು ಪಡಮೂಡುತ್ತವೆ ಎಂದು ಹೇಳಬಹುದು. ಮಹಾ

ಕವಿಗಳ ಶೈಲಿ ಮಹಾಶೈಲಿ, ಶೈಲಿಯು, ಶಬ್ದ, ಅರ್ಥಗಳ ಸಾಮರಸ್ಯ ಬಂಧ ಹೆಚ್ಚಿದಷ್ಟು ಮೋಹಕವಾಗುತ್ತದೆ ಮತ್ತು ಮಹತ್ವ ಪಡೆದುಕೊಳ್ಳುತ್ತದೆ.

ಈಗ ತ.ರಾ.ಸು. ಅವರ ಗದ್ಯಶೈಲಿಯ ಹಿನ್ನೆಲೆಯಲ್ಲಿ ಕೆಲ ನಿದರ್ಶನಗಳನ್ನು ನೋಡಬಹುದು, 'ಕಂಬನಿಯ ಕುಯಿಲು' ಕಾದಂಬರಿಯಲ್ಲಿ ಪಾಪಪ್ರಜ್ಞೆಯನ್ನು ಕುರಿತು ದಳವಾಯಿ ದೇಸಣ್ಣನು ಮುದ್ದಣ್ಣನಿಗೆ ಹೇಳುವ ಮಾತುಗಳನ್ನು ನೋಡಿ, "ಸತ್ಯದ ಮಾರ್ಗ ಬಹುವಿಚಿತ್ರ ಮುದ್ದಣ್ಣ. ನನಗೆ ಕಂಡುದು ನನಗೆ ಸತ್ಯ. ನಿನಗೆ ಕಂಡುದು ನಿನಗೆ ಸತ್ಯ. ಈ ಎರಡರಲ್ಲಿ ಯಾವುದು ಸರಿ. ಈ ಎರಡು ಸತ್ಯಗಳ ತಿಕ್ಕಾಟದಲ್ಲಿ ಸತ್ಯ ಉದ್ಧಾರವಾಗುವುದಿಲ್ಲ. ಅದರ ಹೆಸರಿನಲ್ಲಿ ಜನರ, ಅದರಲ್ಲೂ ಹೆಚ್ಚಾಗಿ ನಿರಪರಾಧಿಗಳ ರಕ್ತಪಾತವಾಗುತ್ತದೆ. ಅಂಥ ರಕ್ತಪಾತಕ್ಕೆ ನಾನು ಬೆದರುತ್ತೇನೆ. ನಿರಪರಾಧಿಗಳ ರಕ್ತ, ಕಣ್ಣೀರು ಏಳೇಳು ಜನ್ಮಕ್ಕೂ ಬೆನ್ನಟ್ಟಿ ಬರುವ ಭಯಂಕರ ಪಾಪ ಮುದ್ದಣ್ಣ" (ಕಂಬನಿಯ ಕುಯಿಲು ಪುಟ: ೧೨೦) ಎಂಬಂತೆ ಭಾಷಾ ಗಾಂಭೀರ್ಯತೆಯೊಂದಿಗೆ ಪಾತ್ರಗಳ ಸ್ವಭಾವ ಚಿತ್ರಣವನ್ನು ತ.ರಾ.ಸು. ಕೊಡುತ್ತಾರೆ.

ತ.ರಾ.ಸು. ಅವರ ಕಾವ್ಯಮಯ ಶೈಲಿಗೆ 'ಸಿಡಿಲು ಮೊಗ್ಗು'ವಿನಲ್ಲಿ ಬರುವ ಶಾಂತಲೆಯ ಪಾತ್ರ ಚಿತ್ರಣದ ಈ ನುಡಿಗಳು ಬಹು ಆಕರ್ಷಣೀಯವಾಗಿ ಕಾಣುತ್ತವೆ. "ಕುಶಲ ಶಿಲ್ಪಿ ರೂಪಲಕ್ಷ್ಮೀಯನ್ನು ಕುರಿತು ತಪಸ್ಸು ಮಾಡಿ, ಆ ಆರಾಧನೆಯಿಂದ ಪುಟಗೊಂಡ ತನ್ನ ಪ್ರತಿಭೆಯಲ್ಲವನ್ನೂ ಧಾರೆ ಎರೆದು ಸೃಷ್ಟಿಸಿದಷ್ಟು ರಮಣೀಯವಾಗಿತ್ತು ಶಾಂತಲೆಯ ಮುಖ. ಒಳಗೆ ಹರಿವ ರಕ್ತದ ಕಾಂತಿಯಿಂದ ಅರುಣವರ್ಣವಾಗಿ, ತೊಳೆದ ಕನ್ನಡಿಯಂತೆ ಥಳಥಳಿಸುವ ಕಪೋಲಗಳು, ಹವಳದ ಬಣ್ಣದ ತುಂಬುತುಟಿಗಳು, ಮಿಂಚಿನ ಮರಿಗಳೆರಡನ್ನು ನೀರಿನಲ್ಲಿ ಸೆರೆಯಿಟ್ಟಂತೆ ಥಳಥಳಿಸುವ ಕಣ್ಣುಗಳು, ಆ ಕಣ್ಣ, ತುಟಿಗಳ ಮಧ್ಯೆ ಸೌಂದರ್ಯ ಸೇತುವಿನಂತೆ ರಂಜಿಸುವ ಎಸಳಾದ ನಾಸಿಕ, 'ಇಗೋ ಆಕೆಯ ಸೌಂದರ್ಯವೆಲ್ಲ ಇಲ್ಲಿದೆ' ಎಂದು ಬೊಬ್ಬಿಟ್ಟು ತೋರಿಸಿದಂತೆ, ಮುಂದೆಲೆಯ ಅಳಕಾವಳಿಯಿಂದಲಂಕೃತವಾದ, ದಂತದ ಫಲಕದಂಥ ಹಣೆಯ ಮೇಲಿಟ್ಟ ಕುಂಕುಮದ ಸಣ್ಣಬೊಟ್ಟು – ಒಂದೊಂದೂ ಏಚಲಾದೇವಿಯ ಕಣ್ಣಲ್ಲಿ ಬಿಂಬಿಸಿ ಹೃದಯವನ್ನು ಗೆದ್ದು ಸೆರೆ ಹಿಡಿದವು" (ಸಿಡಿಲ ಮೊಗ್ಗು, ಪುಟ: ೪೧). ಹೀಗೆ ಕಾವ್ಯಮಯ ಭಾಷೆಯಲ್ಲಿ ಬದುಕಿನ ವಾಸ್ತವಿಕತೆಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಬಲ್ಲಂತಹ ಬರವಣಿಗೆಯ ಶೈಲಿ ತ.ರಾ.ಸು. ಅವರಿಗೆ ಒಗ್ಗಿದೆ. ಕಥಾ ಎಳೆ ಚಿಕ್ಕದಾದರೂ ಅದನ್ನು ಹಿಗ್ಗಿಸಿ. ಕುತೂಹಲದೊಂದಿಗೆ ಕೊಂಡೊಯ್ಯುವ ಪಾಂಡಿತ್ಯ ಪೂರ್ಣ ಗದ್ಯಶೈಲಿ ಅವರದಾಗಿದೆ.

**ಕೊನೆ ಟಿಪ್ಪಣಿಗಳು**

೧. ಶಾ.ಮಂ.ಕೃಷ್ಣರಾಯ (ಸಂ): ತ.ರಾ.ಸು.ಬದುಕು-ಬರಹ:೨೦೦೮, ಪುಟ:೯೦೪

೨. ಶಾ.ಮಂ.ಕೃಷ್ಣರಾಯ (ಸಂ): ತ.ರಾ.ಸು.ಬದುಕು-ಬರಹ:೨೦೦೮, ಪುಟ:೯೦೪



# ಅಧ್ಯಾಯ: ಏಳು
# ಸಮಾರೋಪ

ಆಧುನಿಕ ಕನ್ನಡ ಸಾಹಿತ್ಯಕ್ಕೆ ತ.ರಾ.ಸು. ಅವರ ಕೊಡುಗೆ ಗಮನಾರ್ಹವಾದುದು. ಬಹುಮುಖ ವ್ಯಕ್ತಿತ್ವದ ಅವರು ಆಧುನಿಕವೆನ್ನಬಹುದಾದ ಎಲ್ಲ ವಿಧದ ಸಾಹಿತ್ಯ ಪ್ರಕಾರಗಳಲ್ಲೂ ತಮ್ಮದೇ ಆದ ಹೆಜ್ಜೆಯ ಗುರುತನ್ನು ಇಟ್ಟವರಾಗಿದ್ದಾರೆ. ಆದಾಗ್ಯೂ ಕನ್ನಡದ ಪ್ರಸಿದ್ಧ ಕಾದಂಬರಿಕಾರರೆಂದೇ ಜನಮಾನಸದಲ್ಲಿ ಶಾಶ್ವತವಾದ ಸ್ಥಾನ-ಮಾನ ಪಡೆದವರು. ಇದಕ್ಕೆ ಕಾರಣ, ಕಾದಂಬರಿ ಮಾಧ್ಯಮಕ್ಕೆ ಅವರು ನೀಡಿದ ವಿಶೇಷ ಕೊಡುಗೆಯೇ ಆಗಿದೆ. "ಒಬ್ಬ ಲೇಖಕ ಸಾಮಾಜಿಕ ಕಾದಂಬರಿಗಳನ್ನು ಬರೆದು ಯಶಸ್ವಿಯಾದರೆ ಆತ ಐತಿಹಾಸಿಕ ಕಾದಂಬರಿಗಳಲ್ಲಿಯೂ ಅಷ್ಟೇ ಯಶಸ್ಸು ಸಂಪಾದಿಸುತ್ತಾನೆಂದು ಹೇಳಲು ಬರುವುದಿಲ್ಲ. ಆದರೆ ತ.ರಾ.ಸು. ಐತಿಹಾಸಿಕ, ಸಾಮಾಜಿಕ ಪುರಾಣ ವಸ್ತುಗಳನ್ನಾಧರಿಸಿ ಬರೆದ ಕಾದಂಬರಿಗಳಲ್ಲೆಲ್ಲ ಯಶಸ್ಸಿನ ಮೆಟ್ಟಿಲುಗಳನ್ನೆಲ್ಲ ಏರುತ್ತ ಹೋಗಿದ್ದಾರೆ. ಇತಿಹಾಸದ ಒಂದು ಎಳೆಯನ್ನು ಹಿಡಿದು ಅವರು ಕಲ್ಪನಾ ಸಾಮರ್ಥ್ಯದಿಂದ ಚಿತ್ರದುರ್ಗದ ಇತಿಹಾಸಕ್ಕೆ ಸಂಬಂಧಿಸಿದ ಎಂಟು ಕಾದಂಬರಿಗಳಲ್ಲಿ ನೂರಾರು ವಿಭಿನ್ನ ಪಾತ್ರಗಳನ್ನು, ಸನ್ನಿವೇಶಗಳನ್ನು ತಂದು ಇತಿಹಾಸಕ್ಕೆ ಜೀವಂತಿಕೆಯನ್ನು ಕೊಡಬಲ್ಲವರಾದರೆ ಚಂದವಳ್ಳಿಯ ತೋಟ, ನಾಗರಹಾವು, ಕೇದಿಗೆವನದಂತಹ ಕಾದಂಬರಿಗಳಲ್ಲಿ ವಿವಿಧ ತಲೆಮಾರುಗಳ ಬದುಕಿನ ಹರವು ತೆರೆದಿಡಬಲ್ಲರು. ಅಂತೆಯೇ ನಚಿಕೇತನ ಜೀವನಕ್ಕೆ ಸಂಬಂಧಿಸಿದ ಆ ಕಾಲದ ತತ್ವಜ್ಞಾನ, ಸತ್ಯಕಾಮ-ಜಾಬಾಲಿಯ ಕಾಲದ ಬದುಕಿನ ಸತ್ಯಗಳನ್ನು ಅವರು ಅಷ್ಟೇ ಸಮರ್ಥವಾಗಿ ಚಿತ್ರಿಸಬಲ್ಲರು."[೧] ಎಂಬ ಮಾತನ್ನು ಗಮನಿಸಿದಾಗ ತ.ರಾ.ಸು. ಅವರ ಸಾಹಿತ್ಯದ ವಸ್ತು-ವೈವಿಧ್ಯತೆ ಮತ್ತು ಸೃಜನಶೀಲತೆಯ ದೈತ್ಯಶಕ್ತಿ ಎಂತಹದೆಂಬುದು ಗೊತ್ತಾಗುತ್ತದೆ.

ಸಾಗರದಷ್ಟು ಹರವನ್ನು ಪಡೆದ ತ.ರಾ.ಸು. ಅವರ ಸಾಹಿತ್ಯ ಸರ್ವಕಾಲಕ್ಕೂ ಉಳಿವುವಂತಹುದ್ದಾಗಿದೆ. ಈ ಹಿನ್ನೆಲೆಯಲ್ಲಿ ಈಗಾಗಲೇ ಸಾಕಷ್ಟು ಸಂಶೋಧನ ಅಧ್ಯಯನಗಳು ನಡೆದಿವೆ. ಅಷ್ಟೇಕೆ ತ.ರಾ.ಸು. ಅವರ ಸಾಹಿತ್ಯ ಕುರಿತು ಪ್ರಸಿದ್ಧ ವಿಮರ್ಶಕರ ಅಭಿಪ್ರಾಯಗಳು ಬಂದಿವೆ. ಆದರೆ ಅವರ ಐತಿಹಾಸಿಕ ಕಾದಂಬರಿಗಳನ್ನು ಕುರಿತು ಈವರೆಗೆ ವಿಶೇಷವಾದ ಅಧ್ಯಯನಗಳು ನಡೆದಿಲ್ಲವೆಂಬ ಅಂಶವನ್ನು ಮನಗಂಡು, ಈ ಒಂದು ಕೊರತೆಯನ್ನು ನೀಗಿಸುವ ಪ್ರಯತ್ನವಾಗಿ ಈ ಸಂಶೋಧನ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಆದರಲ್ಲೂ ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳ ವಸ್ತು

ವಿನ್ಯಾಸ ಮತ್ತು ತಂತ್ರಗಾರಿಕೆಯ ಮೇಲೆ ಬೆಳಕು ಚೆಲ್ಲುವ ಉದ್ದೇಶ ಈ ಅಧ್ಯಯನದ ಹಿಂದಿರುವುದನ್ನು ಗುರುತಿಸಬಹುದಾಗಿದೆ.

ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳ ವಸ್ತು-ವಿನ್ಯಾಸವನ್ನು ಅರಿಯಲು ಈ ಸಂಪ್ರಬಂಧದಲ್ಲಿ ಒಟ್ಟು ಅಧ್ಯಾಯಗಳನ್ನು ಏಳು ಮಾಡಿಕೊಳ್ಳಲಾಗಿದೆ. ಮೊದಲಿಗೆ ಅಧ್ಯಯನದ ಸ್ವರೂಪ ಮತ್ತು ಅದರ ಇತಿಮಿತಿಗಳನ್ನು ಕಂಡುಕೊಂಡು ನಂತರ ತ.ರಾ.ಸು. ಸಾಹಿತ್ಯ ಕುರಿತು ಇದುವರೆಗಿನ ಅಧ್ಯಯನಗಳನ್ನು ಗಮನಿಸಲಾಗಿದೆ. ಜೊತೆಗೆ ಹಿನ್ನೆಲೆ ರೂಪದಲ್ಲಿ ಸಾಹಿತ್ಯ ಮತ್ತು ಇತಿಹಾಸದ ಪೂರಕ ಸಂಬಂಧದ ಕಡೆಗೆ ಲಕ್ಷ್ಯಹರಿಸಲಾಗಿದೆ. ತ.ರಾ.ಸು. ಐತಿಹಾಸಿಕ ಕಾದಂಬರಿಗಳ ವಿಷಯ ವಸ್ತುವಿನ ವಿಶ್ಲೇಷಣೆಯನ್ನು ಮಾಡಲಾಗಿದೆ. ಈ ಸಂಪ್ರಬಂಧದ ಹೃದಯಭಾಗವಾದ ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳ ವಸ್ತುವಿನ ವಿನ್ಯಾಸಗಳನ್ನು ಶೋಧಿಸುವ ಪ್ರಯತ್ನ ಮಾಡಲಾಗಿದೆ. ಇಲ್ಲಿ ಕಾದಂಬರಿಯ ರಚನಾ ಕ್ರಮ, ವಸ್ತುವಿನ ಆಯ್ಕೆ, ಪಾತ್ರಗಳ ಚಿತ್ರಣ, ಕಾಲ್ಪನಿಕ ಪಾತ್ರಗಳ ಸೃಷ್ಟಿ, ಆಯಾ ಪಾತ್ರಗಳ ಜೀವಂತಿಕೆ, ಆ ಪಾತ್ರಗಳ ಪ್ರತಿನಿಧಿಸುವ ಪ್ರಸ್ತುತ ಸಾಮಾಜಿಕ ವ್ಯವಸ್ಥೆ, ಅಂದಿನ ಆಡಳಿತದ ವ್ಯವಸ್ಥೆ, ಪ್ರಭುತ್ವ, ಯುದ್ಧ, ಸ್ತ್ರೀ-ಪುರುಷ ಪಾತ್ರಗಳ ಸಂವೇದನೆ, ತ.ರಾ.ಸು. ಅವರು ಅಲ್ಲಲ್ಲಿ ಮಾಡಿಕೊಂಡ ಸಾಂದರ್ಭಿಕ ಮಾರ್ಪಾಡು, ಕಾದಂಬರಿಗಳಲ್ಲಿ ವ್ಯಕ್ತವಾದ ಅವರ ಪ್ರತಿಭಾ ಕುಶಲತೆ ಹೀಗೆ ಹತ್ತು-ಹಲವು ಸಂಗತಿಗಳ ಮೇಲೆ ಬೆಳಕು ಬೀರುವ ಪ್ರಯತ್ನವನ್ನು ಮಾಡಲಾಗಿದೆ. ಜೊತೆಗೆ ಚಾರಿತ್ರಿಕ ಕಾದಂಬರಿಗಳ ಹಿನ್ನೆಲೆಯಲ್ಲಿ ತ.ರಾ.ಸು. ಅವರ ಭಾಷೆ ಮತ್ತು ಶೈಲಿಯ ಮಹತ್ವಕ್ಕನುಗುಣವಾದ ಚರ್ಚೆಯನ್ನು ಮಾಡಲಾಗಿದೆ.

ಐತಿಹಾಸಿಕ ಕಾದಂಬರಿಗಳ ರಚನೆಯ ಹಿಂದಿನ ಉದ್ದೇಶವನ್ನು ಕುರಿತು ತ.ರಾ.ಸು. ಅವರು ಒಂದೆಡೆ ಹೀಗೆ ಹೇಳಿದ್ದಾರೆ. "ಇತ್ತೀಚೆಗೆ ನಾನು ಐತಿಹಾಸಿಕ ಕಾದಂಬರಿಗಳನ್ನು ಬರೆಯಲಾರಂಭಿಸಿದ ಮೇಲೆ 'ಸಮಕಾಲೀನ ಜೀವನದ ಜಲ್ವಂತ ಸಮಸ್ಯೆಗಳಿಗೆ ಕುರುಡಾಗಿ ಗತಕಾಲದ ಭವ್ಯತೆಯಲ್ಲಿ ಮೈಮರೆತಿದ್ದಾರೆ.' ಎಂಬ ಟೀಕೆಯೊಂದು ನನ್ನ ಮಿತ್ರರಿಂದ ನನ್ನ ಮೇಲೆ ಬಂದಿದೆ. ನಾನು ಐತಿಹಾಸಿಕ ಕಾದಂಬರಿಗಳನ್ನು ಬರೆಯಲು ಅದು ಕಾರಣವಲ್ಲವೆಂದು ತಿಳಿಸಬಯಸುತ್ತೇನೆ. ನನ್ನ ತಿಳುವಳಿಕೆಯಲ್ಲಿ ಕನ್ನಡಿಗರಿಗೆ ತಮ್ಮ ಇತಿಹಾಸದ ಬಗ್ಗೆ ಸಾಕಷ್ಟು ಜ್ಞಾನವಿಲ್ಲವೆಂದೇ ಅನಿಸಿದೆ. ಅದಕ್ಕೆ ಕಾರಣ ಉಳಿದ ಭಾಷೆಗಳಂತೆ, ನಮ್ಮಲ್ಲಿ ಐತಿಹಾಸಿಕ ಕಾದಂಬರಿಗಳ ಸಂಪ್ರದಾಯ ಬೆಳೆದು ಬರಲಿಲ್ಲ. ಬಿ.ವೆಂಕಟಾಚಾರ್ಯರ ಐತಿಹಾಸಿಕ ಕಾದಂಬರಿಗಳೆಲ್ಲವೂ ಬಂಗಾಳ ಇತಿಹಾಸಕ್ಕೆ ಸಂಬಂಧಿಸಿದ ಕಾದಂಬರಿಗಳ ಅನುವಾದಗಳು. ದಿ. ಗಳಗನಾಥರವು ಎರಡು ಮೂರನ್ನು

ಬಿಟ್ಟರೆ – ಮರಾಠಿ ಇತಿಹಾಸಕ್ಕೆ ಸಂಬಂಧಿಸಿದವು. ಇತಿಹಾಸವನ್ನು ಇತಿಹಾಸವಾಗೇ ಓದುವ ಅಭ್ಯಾಸ ಬಹುಜನಕ್ಕೆ ಇರುವುದಿಲ್ಲ. ಆದುದರಿಂದ ಕಾದಂಬರಿ ರೂಪದಲ್ಲಿ ಕನ್ನಡಿಗರ ಭವ್ಯ ಇತಿಹಾಸದ ಪರಿಚಯ ಮಾಡಿಕೊಡಬೇಕು. ನಮ್ಮ ಪ್ರಾಚೀನ ಇತಿಹಾಸ ಅರಿವು ನಮ್ಮರಾಷ್ಟ್ರ ನಿರ್ಮಾಣ ಶಕ್ತಿಗೆ ಸ್ಫೂರ್ತಿಯಾಗಬೇಕು ಎಂಬುದೇ ನಾನು ಐತಿಹಾಸಿಕ ಕಾದಂಬರಿಗಳನ್ನು ಬರೆಯಲು ಕಾರಣ. ಆಯುಸ್ಸು, ಶಕ್ತಿ ಎರಡೂ ಇದ್ದರೆ ಇಡೀ ಕನ್ನಡ ಇತಿಹಾಸವನ್ನೇ ಕಾದಂಬರೀ ರೂಪದಲ್ಲಿ ಬರೆಯಬೇಕೆಂಬ ಬಯಕೆ ನನಗೆ ಇದೆ."[೩] ಎಂದು ಹೇಳಿ, ಐತಿಹಾಸಿಕ ಕಾದಂಬರಿಗಳ ಹಿಂದಿನ ಉದ್ದೇಶವನ್ನು ಸ್ಪಷ್ಟಪಡಿಸಿದ್ದಾರೆ. ಇದು ಸತ್ಯವಾದ ಮಾತು. ಯಾಕೆಂದರೆ, ಅವರ ಐತಿಹಾಸಿಕ ಕಾದಂಬರಿಗಳನ್ನು ಓದಿದಾಗ ಈ ಒಂದು ಸಂಗತಿ ಸರ್ವೇಸಾಮಾನ್ಯವಾಗಿ ಗೋಚರಿಸುವಂಥದ್ದಾಗಿದೆ.

ತ.ರಾ.ಸು. ಅವರು ತಮ್ಮ ಕಾದಂಬರಿಗೆ ಆಯ್ದುಕೊಳ್ಳುವ ವಸ್ತು ಸಾಮಾಜಿಕವಾಗಿರಲಿ ಅಥವಾ ಐತಿಹಾಸಿಕವಾಗಿರಲಿ ಆ ಕುರಿತು ಅವರು ಆಳವಾದ ಅಧ್ಯಯನವನ್ನು ನಡೆಸುತ್ತಾರೆ. ಹಾಗೆಯೇ ಹೆಚ್ಚಿನ ಚಿಂತನೆಯನ್ನು ಮಾಡುತ್ತಾರೆ. ಈ ಅಂಶ ಅವರ ಐತಿಹಾಸಿಕ ಕಾದಂಬರಿಗಳನ್ನು ಓದಿದಾಗ ತಿಳಿಯುತ್ತದೆ. ನಿದರ್ಶನಕ್ಕಾಗಿ, ಅವರ 'ನೃಪತುಂಗ' ಮತ್ತು 'ಶಿಲ್ಪಶ್ರೀ' ಕಾದಂಬರಿಗಳನ್ನು ನೋಡಬಹುದು. ಕನ್ನಡನಾಡಿನ ಚಾರಿತ್ರಿಕ ವಿಚಾರವಾಗಿ ರಾಷ್ಟ್ರಕೂಟ ದೊರೆ ಅಮೋಘವರ್ಷ ನೃಪತುಂಗನಿಗೆ ವಿಶೇಷ ಮಹತ್ವವಿದೆ. ಇದಕ್ಕೆ ಕಾರಣ ಅವನ ಕಾಲದಲ್ಲಿ ರಚಿಸಲ್ಪಟ್ಟ 'ಕವಿರಾಜಮಾರ್ಗ' ಎಂಬ ಉದ್ಗ್ರಂಥವೇ ಆಗಿದೆ. ಇದರಿಂದಾಗಿ ನೃಪತುಂಗ ದೊರೆಯ ಹೆಸರು ಇತಿಹಾಸದಲ್ಲಿ ಚಿರಸ್ಥಾಯಿಯಾಗಿದೆ. ಈ ಇತಿಹಾಸದ ಎಳೆಯನ್ನು ಆಧರಿಸಿ ತ.ರಾ.ಸು. ಅವರು 'ನೃಪತುಂಗ' ಎಂಬ ಕಾದಂಬರಿ ರಚಿಸಿದರು. ಆ ಮೂಲಕ ಕನ್ನಡ ನಾಡಿನ ಜನತೆಗೆ ಆ ದೊರೆಯ ಮಹತ್ವವನ್ನು ಪರಿಚಯಿಸಿದ್ದಾರೆ. ಶಾಸನದ ಆಧಾರದ ಮೇಲೆ ಈ ಕಾದಂಬರಿಯನ್ನು ಅವರು ರಚಿಸಿದ್ದಾರೆ. ಆದರೆ ನೃಪತುಂಗ ದೊರೆಯನ್ನು ಒಬ್ಬ ಆದರ್ಶ ವ್ಯಕ್ತಿ, ಆದರ್ಶ ತಂದೆ, ಆದರ್ಶ ಪತಿ, ಆದರ್ಶ ಮಾನವನನ್ನಾಗಿ ಚಿತ್ರಿಸಿದ್ದು ವಿಶೇಷವಾಗಿದೆ. ನೃಪತುಂಗನ ಪ್ರಜಾವಾತ್ಸಲ್ಯ, ನ್ಯಾಯನಿಷ್ಠೆಗಳು ಕುರಿತು ಹೇಳುವ ತ.ರಾ.ಸು. ಆತನ ರಾಜ್ಯಕ್ಕೆ ಪೀಡೆಗಳು ಎದುರಾದಾಗ ಕೊಲ್ಲಾಪೂರದ ಮಹಾಲಕ್ಷ್ಮಿಗೆ ತನ್ನ ಅಂಗುಲಿ ದಾನವನ್ನು ಮಾಡುವ ಚಿತ್ರಣದೊಂದಿಗೆ ರಾಜಧರ್ಮ, ಪ್ರಜಾಧರ್ಮ, ವಿಶ್ವಧರ್ಮಗಳ ಮಹೋನ್ನತಿಯನ್ನು ಕುರಿತು ತಿಳಿಸಿದ್ದಾರೆ. ಅಷ್ಟೇಕೆ ತನ್ನ ಮಗನೇ ರಾಜ್ಯದ್ರೋಹಿ ಎಂಬ ಸತ್ಯ ತಿಳಿದಾಗ ನೃಪತುಂಗ ದೊರೆಯು ನೀಡುವ ಶಿಕ್ಷೆಯ ತೀರ್ಪಿನ ಪ್ರಸಂಗವನ್ನು ತ.ರಾ.ಸು. ಅವರು ಅತ್ಯಂತ ಅದ್ಭುತವಾಗಿ ಚಿತ್ರಿಸಿದ್ದಾರೆ.

ಈ ಹಿನ್ನೆಲೆಯಲ್ಲಿ ತ.ರಾ.ಸು. "ಶಿಲ್ಪಶ್ರೀ' ಕಾದಂಬರಿಯು ಗಮನಾರ್ಹವಾಗಿದೆ. ಶ್ರವಣಬೆಳಗೊಳದ ಗೋಮ್ಮಟೇಶ್ವರನನ್ನು ಕುರಿತ ಈ ಕಾದಂಬರಿ ಚಾವುಂಡರಾಯನ ವ್ಯಕ್ತಿತ್ವದ ಮೇಲೆ ಬೆಳಕು ಬೀರುತ್ತದೆ. ಈ ಕಾದಂಬರಿಯ ರಚನಾ ಕಾಲಕ್ಕೆ ಲಭ್ಯವಿರುವ ಎಲ್ಲ ಚಾರಿತ್ರಿಕ ಆಕರಗಳನ್ನು ಅಭ್ಯಸಿಸಿದ ತ.ರಾ.ಸು. ಅವರು ಈ ಕಾದಂಬರಿಯನ್ನು ರಚಿಸುವುದರೊಂದಿಗೆ ಆ ಕಾಲದ ರಾಜಕೀಯ – ಹಿನ್ನೆಲೆಯನ್ನು ಓದುಗರಿಗೆ ಪರಿಚಯಿಸುತ್ತಾರೆ. ಇಲ್ಲಿ ಚಾವುಂಡರಾಯನ ಬಾಲ್ಯದಲ್ಲಿಯೇ ಪಂಪಮಹಾಕವಿಯ ದರ್ಶನವಾಗುವ ಪ್ರಸಂಗ ಚಿತ್ರಣ ಆಕರ್ಷಣೀಯವಾಗಿ ಮೂಡಿ ಬಂದಿದೆ. ಆ ಮೂಲಕ ತ.ರಾ.ಸು. ಅವರು ಪಂಪನ ವ್ಯಕ್ತಿತ್ವದ ದರ್ಶನವನ್ನು ಓದುಗರಿಗೂ ಮೂಡಿಸುತ್ತಾರೆ. ಅಲ್ಲಲ್ಲಿ ಸಣ್ಣಪುಟ್ಟ ದೋಷಗಳು ಕಾಣಸಿಕ್ಕರೂ, ಇವು ಕಾದಂಬರಿಯ ಒಟ್ಟಂದದಲ್ಲಿ ಮರೆಮಾಚುತ್ತವೆ. ಈ ಕುರಿತು ಸಿ.ಪಿ. ಕೃಷ್ಣಕುಮಾರ್ ಅವರ ಈ ಮಾತನ್ನು ನೋಡಿ "ಶಿಲ್ಪಶ್ರೀಯ ಭಾವನಿರ್ಭರವಾದ ಬರವಣಿಗೆ ಓದುಗರ ಆಸಕ್ತಿಯನ್ನು ಎಲ್ಲೂ ಮಂದಗೊಳಿಸದೆ, ಅಮೃತತತ್ವವನ್ನು ಸಾಧಿಸಬೇಕೆಂಬುದು ಕಾದಂಬರಿಯಲ್ಲಿ ಧ್ವನಿತವಾಗುವ ಸಂದೇಶ. ನಾನಾ ಬಗೆಯ ರಾಜಕೀಯದಿಂದ ಕಲುಷಿತವಾಗಿರುವ ಇಂದಿನ ಸಮಾಜಕ್ಕೆ ಅತ್ಯಂತ ಪ್ರಸ್ತುತವಾದದ್ದು. ಇತರ ಐತಿಹಾಸಿಕ ಕಾದಂಬರಿಗಳಿಗಿಂತ ಭಿನ್ನವಾದ ಕೃತಿ–ಶಿಲ್ಪಶ್ರೀ"[೩] ಎಂಬ ವಿಚಾರ ಗಮನಾರ್ಹವಾದುದು. ಯಾಕೆಂದರೆ, ತ.ರಾ.ಸು. ಅವರು ಈ ಕಾದಂಬರಿಯಲ್ಲಿ ಪಂಪ, ರನ್ನರ, ಕಾವ್ಯಭಾಗಗಳನ್ನು ಅತಿಯಾಗಿ ತುಂಬಿದ್ದಾರೆ. ಇದರಲ್ಲಿ ಕೃತಕತೆ ಕಾಣಿಸಿಕೊಂಡಿದೆ ಎಂಬಂತಹ ಟೀಕೆಗಳು ಈ ಕಾದಂಬರಿ ಹಿನ್ನೆಲೆಯಲ್ಲಿ ಬಂದಿರುವುದನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬಹುದು.

ಹೊಯ್ಸಳ ಅರಸು ಮನೆತನಕ್ಕೆ ಸಂಬಂಧಿಸಿದಂತೆ 'ಸಿಡಿಲಮೊಗ್ಗು' ಮತ್ತು 'ಕೀರ್ತಿನಾರಾಯಣ' ಎಂಬ ಎರಡು ಕಾದಂಬರಿಗಳನ್ನು ತ.ರಾ.ಸು. ಅವರು ರಚಿಸಿದ್ದಾರೆ. ಈ ಎರಡೂ ಕಾದಂಬರಿಗಳಲ್ಲಿ ಅನೇಕ ದೋಷಗಳು ಕಂಡುಬರುತ್ತವೆ. ಅತಿಯಾದ ಪ್ರಾಕೃತಿಕ ವರ್ಣನೆ, ದಂಡಯಾತ್ರೆ ಕುರಿತಾದ ಉದ್ದುದ್ದನೆಯ ವಿವರಣೆಗಳು ಈ ಕಾದಂಬರಿಗಳನ್ನು ಆವರಿಸಿಕೊಂಡಿವೆ. ಆದಾಗ್ಯೂ ವಿಷ್ಣುವರ್ಧನನ ಪಾತ್ರ ಚಿತ್ರಣವು ಅತ್ಯಂತ ಉಜ್ವಲವಾಗಿ ಮೂಡಿಬಂದಿರುವದನ್ನು ಗುರುತಿಸಬಹುದಾಗಿದೆ. ಕೀರ್ತಿನಾರಾಯಣದಲ್ಲಿ 'ಆಕಾಶದರ್ಶಿ' ಎಂಬ ಟೆಲಿಸ್ಕೋಪಿನ ಚಿತ್ರಣ ಆಧುನಿಕ ಯುದ್ಧ ಟ್ಯಾಂಕರ್‌ಗಳನ್ನು ಹೋಲುವ ರಜ್ಜುಯಂತ್ರದ ಬಳಕೆಗಳು ಇತಿಹಾಸ ಕಾಲಕ್ಕೆ ಅಪಹಾಸ್ಯದಂತೆ ಕಂಡಿವೆ.

ಅಲ್ಲಮಪ್ರಭುವಿನ ವ್ಯಕ್ತಿವಿಶೇಷತೆಯನ್ನು ತಿಳಿಸುವ ಕಾದಂಬರಿ 'ಅಗ್ನಿರಥ ಮತ್ತು ಮುಕ್ತಿಪಥ'. ಈ ಕಾದಂಬರಿ ರಚನೆಗೆ ತ.ರಾ.ಸು. ಅವರು ಹರಿಹರ ಮತ್ತು ಚಾಮರಸನ

ಕೃತಿಗಳನ್ನೇ ಆಕರಗಳನ್ನಾಗಿಸಿಕೊಂಡಿದ್ದಾರೆ. ಇದರಲ್ಲಿ ವಸ್ತುವೈವಿಧ್ಯತೆ ಇಲ್ಲದಿದ್ದರೂ 'ಅಲ್ಲಮಪ್ರಭುವಿನಂಥ, ಎಲ್ಲ ಕಾಲಕ್ಕೂ ಜ್ಞಾನದ ಗುರುವಾಗಿ ನಿಲ್ಲಬಲ್ಲಂತಹ ವ್ಯಕ್ತಿತ್ವದ ಬಗ್ಗೆ ಇತಿಹಾಸ ಬಹಳ ಗೌಣ. ಆತನ ಬಾಳು ಕಾಲದ ಸೃಷ್ಟಿಯಲ್ಲ. ಸಹಜ ಶಕ್ತಿಯಿಂದ ವಿಕಸಿಸುವ ವ್ಯಕ್ತಿತ್ವದ ಪವಾಡ. ಅದನ್ನೇ ಈ ಕಾದಂಬರೀ ರೂಪದ ವ್ಯಕ್ತಿಚಿತ್ರಣದಲ್ಲಿ ಚಿತ್ರಿಸಲು ಯತ್ನಿಸಿದ್ದೇನೆ' ಎಂದು ತ.ರಾ.ಸು. ತಮ್ಮ ಮುನ್ನುಡಿಯಲ್ಲಿ ಹೇಳಿದ ಮಾತು ಗಮನಾರ್ಹವಾಗಿದೆ. ಆದ್ದರಿಂದ ತಾವು ಅಂದುಕೊಂಡಂತಹ ಕಾರ್ಯವನ್ನು ಈ ಕಾದಂಬರಿಯಲ್ಲಿ ಸಾಧಿಸಿ ತೋರಿಸಿದ್ದಾರೆನ್ನಬಹುದು. ಈ ಕಾರಣದಿಂದ ಅಲ್ಲಮಪ್ರಭುವಿನ ವ್ಯಕ್ತಿತ್ವ ಓದುಗರಲ್ಲಿ ಅಚ್ಚಳಿಯದಂತೆ ಉಳಿವಂತಹದ್ದಾಗಿದೆ.

ಕಂಬನಿಯ ಕುಯಿಲು, ರಾಜ್ಯದಾಹ, ರಕ್ತರಾತ್ರಿ, ತಿರುಗುಬಾಣ, ಹೊಸಹಗಲು, ವಿಜಯೋತ್ಸವ, ಕಸ್ತೂರಿಕಂಕಣ ಹಾಗೂ ದುರ್ಗಾಸ್ತಮಾನ ಕಾದಂಬರಿಗಳು ಚಿತ್ರದುರ್ಗದ ಪಾಳೆಯಗಾರರ ಮನೆತನಕ್ಕೆ ಸೇರಿದ ನಾಯಕರ ವೈಶಿಷ್ಟ್ಯಪೂರ್ಣ ಬದುಕಿನ ಮೇಲೆ ಹೊಳಪು ಬೀರುವಂತಹ ರಚನೆಗಳಾಗಿದ್ದಾವೆ. ಇವು ಕ್ಷಾತ್ರ ಧರ್ಮಕ್ಕೆ ಹೆಸರಾದ ಕಾದಂಬರಿಗಳೂ ಆಗಿವೆ. ಕೊರಟ ಶ್ರೀನಿವಾಸರಾವ್ ಹೇಳುವಂತೆ, 'ಆ ಕಾಲದ ರುದ್ರರಮಣೀಯ ಇತಿಹಾಸ, ದ್ರೋಹ, ಸ್ವಾರ್ಥ ಪತನಗಳ ಕತೆ, ಸ್ವಾಮಿನಿಷ್ಠೆ, ದೈವಭಕ್ತಿ, ಪ್ರಜಾವಾತ್ಸಲ್ಯಗಳ ಭವ್ಯವಾದ ನಿರೂಪಣೆಯಿದೆ' ಎಂಬ ಮಾತು ಸೂಕ್ತವಾದುದ್ದಾಗಿದೆ. ಹಾಗೆಯೇ 'ಇವುಗಳ ಕಥಾ ರಚನೆಯಲ್ಲಿ ಮತ್ತು ಪಾತ್ರ ಸೃಷ್ಟಿಯಲ್ಲಿ ಭೂತಕಾಲವನ್ನು ವರ್ತಮಾನ ಕಾಲದಲ್ಲಿ ತಂದು ನಿಲ್ಲಿಸುವ ಕಲ್ಪನಾಶಕ್ತಿ ಅಸಾಮಾನ್ಯವಾಗಿದೆ' ಎಂಬ ರಂ.ಶ್ರೀ. ಮುಗಳಿಯವರ ಮಾತುಗಳು ಅಷ್ಟೇ ಗಮನಾರ್ಹವಾಗಿವೆ. ಯಾಕೆಂದರೆ, ಕಳೆದುಹೋದ ಐತಿಹಾಸಿಕ ಘಟನೆ ಮತ್ತು ವ್ಯಕ್ತಿಗಳಿಗೆ ಜೀವತುಂಬುವ ಕೆಲಸವನ್ನು ತ.ರಾ.ಸು. ಅವರು ಹೆಚ್ಚಾನೆಚ್ಚು ಕಾದಂಬರಿಗಳಲ್ಲಿ ಮಾಡಿದ್ದನ್ನು ಗುರುತಿಸಬಹುದಾಗಿದೆ. ಅಷ್ಟೇ ಅಲ್ಲ ಅವುಗಳನ್ನು ವಾಸ್ತವಿಕ ನೆಲಗಟ್ಟಲ್ಲಿ ಇರಿಸಿಕೊಂಡು ಚಿಂತಿಸುವ ಅವರ ಕಲ್ಪನಾ ಚಾತುರ್ಯ ಮೆಚ್ಚತಕ್ಕದ್ದಾಗಿದೆ.

ಚಿತ್ರದುರ್ಗದ ಇತಿಹಾಸಕ್ಕೆ ಸಂಬಂಧಿಸಿದ ಕೊನೆಯ ಕಾದಂಬರಿ ದುರ್ಗಾಸ್ತಮಾನ. ಇದರಲ್ಲಿ ತ.ರಾ.ಸು. ಅವರು ದುರ್ಗದ ಪಾಳೆಯಗಾರರ ಇತಿಹಾಸದ ಅಂತ್ಯವನ್ನು ಚಿತ್ರಿಸಿದ್ದು ಗಮನಾರ್ಹ ಅಂಶವಾಗಿದೆ. ಇದರ ಕಥಾನಾಯಕ ವೀರಮದಕರಿನಾಯಕ. ದುರ್ಗಾಸ್ತಮಾನ ಆದದ್ದು ಕೂಡ ಇವನ ಕಾಲದಲ್ಲಿ. ಆದ್ದರಿಂದ ಇವನು ದುರ್ಗದ ಕೊನೆಯ ನಾಯಕನು ಆಗಿದ್ದಾನೆ. "ಚಿತ್ರದುರ್ಗದ ಇತಿಹಾಸದಲ್ಲಿ ಪಾಳೆಯಗಾರರ ಆಳ್ವಿಕೆಯ ಕಾಲವು ಹಲವು ವೈಶಿಷ್ಟ್ಯಗಳನ್ನು ಹೊಂದಿದೆ. ಚಿತ್ರದುರ್ಗ ಪ್ರದೇಶದ ಗಂಡುತನವನ್ನು ಪಾಳೆಯಗಾರರ ಕಾಲದಲ್ಲೇ ಕಾಣಲು ಸಾಧ್ಯ. ಅದು ವರ್ಣರಂಜಿತವೂ ಹೌದು: ರಕ್ತರಂಜಿತವೂ ಹೌದು.

ಆದರಲ್ಲೂ ಚಿತ್ರದುರ್ಗದ ಅಭೇದ್ಯ ಕೋಟೆಯನ್ನು ತನ್ನ ತಂತ್ರಗಾರಿಕೆಯಿಂದ ಭೇದಿಸಿ, ವಶಪಡಿಸಿಕೊಂಡ ಹೈದರ್‌ನೊಡನೆ ಕೇವಲ ಕೊನೆಯ ಮದಕರಿನಾಯಕ ಪಾತ್ರವಲ್ಲದೆ, ಇಡೀ ದುರ್ಗದ ಜನತೆ ಒಂದಾಗಿ ಹೋರಾಡಿದರೂ, ಬಸವಳಿದು ಸೋತ ಕಥೆ ಇಷ್ಟು ವರ್ಷಗಳ ನಂತರವೂ ದುರ್ಗದ ಜನತೆಯ ವ್ಯಥೆಗೆ ಕಾರಣವಾಗಿದೆ"[೪] ಎಂಬ ಎಚ್.ಎಸ್.ಗೋಪಾಲರಾವ್ ಅವರ ಶೋಧನೆ ಗಮನಾರ್ಹವಾಗಿದೆ. ದುರ್ಗದ ಕೋಟೆಯನ್ನು ಉಳಿಸಿಕೊಳ್ಳಲು ವೀರಮದಕರಿನಾಯಕನು ಹೋರಾಡುವ ಪರಿ ಹಾಗೂ ಅವನಲ್ಲಿನ ರಣೋತ್ಸಾಹದ ಜೀವಂತಿಕೆಯನ್ನು ತ.ರಾ.ಸು. ಅವರು ಈ ಕಾದಂಬರಿಯಲ್ಲಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಅವರ ಭಾಷಾ ದುಡಿಮೆಯೂ ಈ ಕಾದಂಬರಿಯಲ್ಲಿ ಆಕರ್ಷಣೀಯವಾಗಿದೆ. ಅನೇಕ ರೂಪಕಗಳನ್ನು ಬಳಸಿಕೊಳ್ಳುವುದರ ಮೂಲಕ ಇಲ್ಲಿನ ಭಾಷೆಯು ಬೆಳಗುವಂತೆ ಮಾಡಿದ್ದು ಕಂಡುಬರುತ್ತದೆ.

ತ.ರಾ.ಸು. ಅವರ ಕಾದಂಬರಿಯ ರಚನಾ ವಿನ್ಯಾಸವು ವಿಶೇಷವಾದುದು. ಅವರ ಕಾದಂಬರಿಗಳಲ್ಲಿ ಕಾಲ್ಪನಿಕ ವಿಚಾರಗಳಿಗೇನೂ ಕಡಿಮೆಯಿಲ್ಲ. ಆದರೆ ಚಾರಿತ್ರಿಕ ಘಟನೆ ಮತ್ತು ವ್ಯಕ್ತಿಗಳಿಗೆ ಚ್ಯುತಿಬಾರದಂತೆ ಅವರು ಕಾದಂಬರಿಗಳನ್ನು ರಚಿಸಿದ್ದಾರೆನ್ನಬಹುದು. ಅವರೇ ಒಂದೆಡೆ ಹೇಳುವಂತೆ, 'ಶಾಸನಗಳಲ್ಲಿ ಎಳೆಎಳೆಯಾಗಿ ಕಂಡುಬರುವುದಕ್ಕೆ ಒಂದು ಸುಸ್ಪಷ್ಟ ರೂಪವನ್ನು ಕೊಡಲು ಮಾತ್ರ ನಾನು ಪ್ರಯತ್ನ ಪಟ್ಟಿದ್ದೇನೆ. ನನ್ನ ಕಲ್ಪನೆ ಉಚ್ಛ್ರಾಂಖಲ ವೃತ್ತಿಯನ್ನು ಅನುಸರಿಸಲು ಆದಷ್ಟು ಮಟ್ಟಿಗೂ ಎಡೆಕೊಟ್ಟಿಲ್ಲ.' ಎಂದು ಹೇಳಿದ್ದನ್ನು ನೋಡಬಹುದು. ಅದರಂತೆ ತ.ರಾ.ಸು. ಅವರು ನಡೆದುಕೊಳ್ಳಲು ಪ್ರಯತ್ನಿಸಿದ್ದಾರೆ. ಯಾಕೆಂದರೆ, ಅವರು ತಾವು ಬರೆಯಬೇಕೆಂದಿರುವ ಐತಿಹಾಸಿಕ ವಸ್ತುವಿನ ಸಂಬಂಧಿಸಿದ ವಿಷಯ ಸಾಮಗ್ರಿಯನ್ನು ವಿವಿಧ ಮೂಲಗಳಿಂದ ಸಂಗ್ರಹಿಸಿ, ಅಧ್ಯಯನ ಮಾಡಿ, ಬೇರೆಯವರೊಂದಿಗೆ ಚರ್ಚಿಸಿ ಅಂತಹ ವಸ್ತುವಿಗೆ ಜೀವ ತುಂಬುತ್ತಾರೆ. ಗತಕಾಲದ ಜೀವನವನ್ನು ಯಥಾರ್ಥವಾಗಿ ಕಂಡು, ರಸಭರಿತವಾಗಿ, ಕಲಾತ್ಮಕತೆಯಿಂದ ಅದನ್ನು ಒಂದು ಸುಂದರ ಕಲಾಕೃತಿಯನ್ನಾಗಿ ಮಾಡುವ ಕಲೆ ತ.ರಾ.ಸು. ಅವರಿಗೆ ಸಿದ್ಧಿಸಿದೆ. ಈ ಕಾರಣದಿಂದಲೇ ತ.ರಾ.ಸು. ಅವರು ಯುಗಧರ್ಮವನ್ನು ಪ್ರತಿಬಿಂಬಿಸಬಲ್ಲಂತಹ ಐತಿಹಾಸಿಕ ಕಾದಂಬರಿಗಳನ್ನು ಕೊಡಲು ಸಾಧ್ಯವಾಗಿದೆ. ಇದಕ್ಕೆ ಅವರ ಯಾವ ಕಾದಂಬರಿಯೂ ಹೊರತಲ್ಲ.

ವಸ್ತು ವೈವಿಧ್ಯತೆಯ ಎಚ್ಚರ ತ.ರಾ.ಸು. ಅವರಲ್ಲಿರುವುದನ್ನು ಕಾಣುತ್ತೇವೆ. ಆದ್ದರಿಂದಲೇ ಕಾದಂಬರಿ ರಚನೆಗೆ ಅವರು ಆಯ್ದುಕೊಳ್ಳುವ ವಸ್ತು ಎಲ್ಲಿಯೂ ಏಕತಾನತೆಯನ್ನು ಬಿಂಬಿಸುವುದಿಲ್ಲ. ವಸ್ತುವಿನ ಆಯ್ಕೆ, ಪಾತ್ರಗಳ ಚಿತ್ರಣ, ಸಂಭಾಷಣೆಯ

ಸ್ವರೂಪ, ಸನ್ನಿವೇಶ ನಿರ್ಮಾಣ, ಹಾಗೂ ಶೈಲಿಯ ಕುಶಲತೆಯಿಂದಾಗಿ ಅವರ ಎಲ್ಲ ಕಾದಂಬರಿಗಳೂ ಶೋಭಾಯಮಾನವಾಗಿವೆ. "ತ.ರಾ.ಸು. ವಸ್ತುವಿನ ಆಯ್ಕೆಯಲ್ಲಿ ವೈವಿಧ್ಯತೆಯಿರುವಂತೆ ಎಚ್ಚರಿಕೆ ವಹಿಸಿದ್ದಾರೆ. ಐತಿಹಾಸಿಕ ಕಾದಂಬರಿ ಎಂದೊಡನೆ ಕೇವಲ ವೀರಜೀವನವನ್ನು ಚಿತ್ರಿಸುವುದಲ್ಲ, ಇತರ ಅಂಶಗಳೂ ಅಷ್ಟೇ ಮಹತ್ವದವು. ಇಲ್ಲದಿದ್ದರೆ ಎಲ್ಲ ಕಾದಂಬರಿಗಳೂ ಏಕತಾನತೆಯನ್ನು ಹೊಂದಿ, ಓದುಗರಿಗೆ ಬೇಸರವನ್ನುಂಟು ಮಾಡುತ್ತವೆ. ತ.ರಾ.ಸು. ಅವರ ಕಾದಂಬರಿಗಳಲ್ಲಿ ವೀರ ಜೀವನ ಜೊತೆಗೆ ಸಾಹಿತ್ಯ, ಕಲೆ, ಸಂಸ್ಕೃತಿ ಇವೂ ಸಮ್ಮಿಲಿತಗೊಂಡು ಓದುಗರನ್ನು ಸಾಮಾಜಿಕ ಕಾದಂಬರಿಗಳಂತೆಯೇ ರಂಜಿಸುತ್ತವೆ."[೫] ಎಂಬ ದಿಗಂಬರ ಜೋಶಿ ಅವರ ಮಾತು ಒಪ್ಪತಕ್ಕುದ್ದಾಗಿದೆ. ಇದು ತ.ರಾ.ಸು. ಅವರ ಚಾರಿತ್ರಿಕ ಕಾದಂಬರಿಯನ್ನು ಓದಿದಾಗ ಗೋಚರಿಸುವ ಸಂಗತಿಯಾಗಿದೆ. ಈ ಮೇಲಿನ ಎಲ್ಲ ಸಂಗತಿಗಳ ಹಿನ್ನೆಲೆಯಲ್ಲಿ ಈ ಸಂಶೋಧನ ಸಂಪ್ರಬಂಧವು ಫಲಪ್ರದವಾಗಿದೆ ಎಂದು ಭಾವಿಸಲಾಗಿದೆ. ಈ ಹಿನ್ನೆಲೆಯಲ್ಲಿ ಫಲಿತ ಅಂಶಗಳನ್ನು ಹೀಗೆ ಪಟ್ಟಿ ಮಾಡಬಹುದಾಗಿದೆ.

**ಕೊನೆ ಟಿಪ್ಪಣಿಗಳು**

೧. ಶಾ.ಮ.ಕೃಷ್ಣರಾಯ (ಸಂ): ತ.ರಾ.ಸು.: ಬದುಕು-ಬರಹ: ೨೦೦೮, ಮುನ್ನುಡಿ

೨. ತ.ರಾ.ಸು.: ಹೊಸಹಗಲು: ೨೦೦೭, ಮುನ್ನುಡಿ

೩. ಶ್ರೀಶೈಲ ಆರಾಧ್ಯ ಹೆಚ್ (ಸಂ.): ಗಿರಿಮಲ್ಲಿಗೆ : ೧೯೮೫ : ಪುಟ ೧೩೭

೪. ಗೌರಿ ಸುಂದರ್ (ಸಂ) : ತ.ರಾ.ಸು. ಕಾದಂಬರಿಗಳ ಕುರಿತು, ೨೦೧೫, ಪುಟ: ೧೧

೫. ಶಾ.ಮ.ಕೃಷ್ಣರಾಯ (ಸಂ.): ತ.ರಾ.ಸು. ಬದುಕು-ಬರಹ, ೨೦೦೮, ಪುಟ: ೩೧೬



## ಫಲಿತಗಳು

*** ತ.ರಾ.ಸು. ಚಾರಿತ್ರಿಕ ಕಾದಂಬರಿಗಳ ಮಹತ್ವ**

ತ.ರಾ.ಸು. ಅವರು ಕನ್ನಡನಾಡಿನ ಪ್ರಸಿದ್ಧ ಸಾಹಿತಿ, ಕಾದಂಬರಿಕಾರರೆನಿಸಿದ್ದಾರೆ. ಅವರ ಸಾಮಾಜಿಕ ಕಾದಂಬರಿಗಳಂತೆ ಐತಿಹಾಸಿಕ ಕಾದಂಬರಿಗಳಿಗೂ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ವಿಶೇಷ ಮಹತ್ವವಿದೆ. ಕನ್ನಡ ನಾಡಿನ ಗತವೈಭವದ ಬಗೆಗೆ ವಿಶೇಷ ಅಭಿಮಾನ ಹೊಂದಿದ್ದ ತ.ರಾ.ಸು. ಅವರು ಅದನ್ನು ಜೀವಂತವಾಗಿಡಲು, ನಾಡನ್ನು ಆಳಿದ ಅರಸುಮನೆತನಗಳ ಚರಿತ್ರೆಯನ್ನು ಆಧರಿಸಿ ಕಾದಂಬರಿಗಳನ್ನು ರಚಿಸಿದ್ದಾರೆ. ರಾಷ್ಟ್ರಕೂಟ ಅರಸುಮನೆತನದ ಪ್ರಸಿದ್ಧ ದೊರೆ ಅಮೋಘವರ್ಷ ನೃಪತುಂಗನನ್ನು ಕುರಿತು 'ನೃಪತುಂಗ' ಎಂಬ ಕಾದಂಬರಿಯನ್ನು ಅವರು ರಚಿಸಿದ್ದಾರೆ. ಆ ಮೂಲಕ ದೊರೆಯ ಕಾವ್ಯಾಸಕ್ತಿ, ಕಲಾಸಕ್ತಿ, ನಾಡಾಭಿಮಾನವನ್ನು ಕೊಂಡಾಡಿ, ಸಕಾರಣವಾಗಿ, ಆ ಕಾಲದ ಬದುಕನ್ನು ನಾಡಿನ ಜನತೆಗೆ ತಿಳಿಸುವ ಕಾರ್ಯವನ್ನು ತ.ರಾ.ಸು. ಅವರು ಮಾಡಿದ್ದಾರೆ. ಜೊತೆಗೆ ಕರ್ನಾಟಕದ ಇತಿಹಾಸದಲ್ಲಿ ತನ್ನ ವೀರತ್ವದಿಂದ, ಕಲಾಪ್ರೇಮದಿಂದ, ಸಾಹಿತ್ಯ ರಚನೆಯಿಂದ ಪ್ರಸಿದ್ಧಿಯನ್ನು ಪಡೆದ ಚಾವುಂಡರಾಯನ ವ್ಯಕ್ತಿತ್ವ ಪ್ರತಿಬಿಂಬನದಂತೆ ಕಂಡಿದೆ ತ.ರಾ.ಸು. ಅವರ 'ಶಿಲ್ಪಶ್ರೀ' ಕಾದಂಬರಿ. ಇದು ಕ್ರಿ.ಶ. ಸುಮಾರು ೯೮೨ರಲ್ಲಿ ನಿರ್ಮಾಣಗೊಂಡ ಶ್ರವಣಬೆಳಗೊಳದ ಭವ್ಯಕಲಾಕೃತಿ ಗೋಮ್ಮಟೇಶ್ವರನ ಉದಯದ ಇತಿಹಾಸವನ್ನು ಆಕರವಾಗಿಸಿಕೊಂಡಿದೆ. ಹೊಯ್ಸಳರ ಇತಿಹಾಸವನ್ನು ಆಧರಿಸಿ ಕೀರ್ತಿನಾರಾಯಣ, ಸಿಡಿಲಮೊಗ್ಗುವಿನಂಥ ಕಾದಂಬರಿಗಳನ್ನು ರಚಿಸಿದ ತ.ರಾ.ಸು. ಅವರು ಶರಣರ ಇತಿಹಾಸಕ್ಕೆ ಸಂಬಂಧಿಸಿದಂತೆ ಅದರಲ್ಲೂ ಅಲ್ಲಮ ಪ್ರಭುವಿನ ವ್ಯಕ್ತಿತ್ವ ಸಾರವನ್ನು ಸಾರಲು 'ಅಗ್ನಿರಥ–ಮುಕ್ತಿಪಥ' ಎಂಬ ಕಾದಂಬರಿ ಬರೆದದ್ದು ಗಮನಾರ್ಹವಾಗಿದೆ. ಇನ್ನು ಚಿತ್ರದುರ್ಗದ ಪಾಳೆಯಗಾರರ ವೀರ ಜೀವನಕ್ಕೆ ಸಂಬಂಧಿಸಿದಂತೆ ಒಟ್ಟು ಎಂಟು ಕಾದಂಬರಿಗಳನ್ನು ರಚಿಸಿ ತ.ರಾ.ಸು. ಅವರು ಗಮನಸೆಳೆದಿದ್ದಾರೆ. ಮೂಲ ಇತಹಾಸಕ್ಕೆ ದಕ್ಕೆಬಾರದಂತೆ ಇತಿಹಾಸದ ಹಿನ್ನೆಲೆಯಲ್ಲಿ ದೊರೆತ ಎಲ್ಲ ಆಕರಗಳನ್ನು ಸಂಗ್ರಹಿಸಿ, ಅಧ್ಯಯನ ಮಾಡಿ, ಪರಾಮರ್ಶಿಸಿ ತಮ್ಮದೇ ಆದ ಪ್ರತಿಭೆ, ಪಾಂಡಿತ್ಯ, ಕಲ್ಪನೆಯೊಂದಿಗೆ ಅವರು ತಮ್ಮ ಐತಿಹಾಸಿಕ ಕಾದಂಬರಿಗಳನ್ನು ರಚಿಸಿದ್ದು ಕಂಡುಬರುತ್ತದೆ. ಐತಿಹಾಸಿಕ ವಸ್ತು ಮತ್ತು ವ್ಯಕ್ತಿಗಳಿಗೆ ಜೀವ ತುಂಬುವ ಕಾಯಕವನ್ನು ತ.ರಾ.ಸು. ಮಾಡಿದ್ದಾರೆ. ಇದು ಇತಿಹಾಸದ ಪುನರ್ ಸೃಷ್ಟಿಯಂತೆ ಕಂಡಿದೆ ಇದಕ್ಕೆ ತ.ರಾ.ಸು. ರಚಿಸಿದ ಚಿತ್ರದುರ್ಗದ ಕುರಿತಾದ ಕಾದಂಬರಿಗಳೇ ಸಾಕ್ಷಿ.

*** ವಸ್ತು ವೈವಿಧ್ಯತೆ**

ತ.ರಾ.ಸು. ಚಾರಿತ್ರಿಕ ಕಾದಂಬರಿಗಳಲ್ಲಿ ವಸ್ತುವೈವಿಧ್ಯತೆಯೂ ವಿಶೇಷವಾಗಿದೆ. ಅವರು ತಮ್ಮ ಕಾದಂಬರಿಗಳಿಗೆ ಆಯ್ಕೆ ಮಾಡಿಕೊಳ್ಳುವ ವಸ್ತು ಎಲ್ಲಿಯೂ ಒಂದೇ ರೀತಿಯಾಗಿ

ಬಿಂಬಿತವಾಗುವುದಿಲ್ಲ. ಯಾಕೆಂದರೆ ತ.ರಾ.ಸು. ಅವರು ತಮ್ಮ ಸೃಜನಶೀಲತೆಯನ್ನು ಸಾಮಾಜಿಕ ಕಾದಂಬರಿಗಳಿಗಿಂತಲೂ ಚಾರಿತ್ರಿಕ ಕಾದಂಬರಿಗಳಲ್ಲಿ ವಿಶೇಷವಾಗಿ ದುಡಿಸಿಕೊಂಡಿದ್ದಾರೆ. ವಸ್ತು ಎಷ್ಟೇ ಚಿಕ್ಕದಾದರೂ ಅದನ್ನು ಹಿಗ್ಗಿಸಿಕೊಂಡು ಹೋಗುವ ಕಲ್ಪನಾ ಚಾತುರ್ಯ ಅವರಲ್ಲಿದೆ. ಯಾವುದೇ ಒಂದು ಸನ್ನಿವೇಶವಾಗಲಿ, ಪಾತ್ರಚಿತ್ರಣವಾಗಲಿ ಅದನ್ನು ರಸವತ್ತಾಗಿ ಬಿಂಬಿಸುವುದರೊಂದಿಗೆ ಓದುಗರ ಕುತೂಹಲವನ್ನು ಹೆಚ್ಚಿಸುತ್ತ ಹೋಗುತ್ತಾರೆ. ರಾಜ್ಯಕ್ಕಾಗಿ, ರಕ್ತಕ್ಕಾಗಿ ಹಾತೋರೆಯುವ ಪಾತ್ರಗಳಿಗೆ ಸ್ವಭಾವ ಸಹಜ ಸೇಡಿನ ಮನೋಭಾವನೆಯನ್ನು ಅವರು ತುಂಬುತ್ತಾರೆ. ಇಂತಹ ಪ್ರಸಂಗಗಳಲ್ಲಿ ರೌದ್ರರಸವು ಪ್ರಮುಖ ಪಾತ್ರ ವಹಿಸುತ್ತದೆ. ಇಂತಹ ಗುಣಕ್ಕೆ ತ.ರಾ.ಸು. ಅವರು ರಚಿಸಿದ ಚಿತ್ರದುರ್ಗದ ಪಾಳೆಯಗಾರರ ಕುರಿತು ಕಾದಂಬರಿಗಳು ಗಮನ ಸೆಳೆಯುತ್ತವೆ. ಕಾವ್ಯಮಯ ರಸವತ್ತಾದ ವರ್ಣನೆಗೆ 'ನೃಪತುಂಗ', 'ಶಿಲ್ಪಶ್ರೀ' ಹಾಗೂ 'ಸಿಡಿಲಮೊಗ್ಗು' ವಿನಂಥ ಕಾದಂಬರಿಗಳಲ್ಲಿ ಸಾಕಷ್ಟು ಪ್ರಸಂಗಗಳು ಕಾಣಸಿಗುತ್ತವೆ. ವೀರ ಗುಣಗಳೊಂದಿಗೆ ಇತರ ಅಂಶಗಳ ಕಡೆಗೂ ತ.ರಾ.ಸು. ಅವರು ಗಮನಹರಿಸಿದ್ದನ್ನು ಅವರ ಐತಿಹಾಸಿಕ ಕಾದಂಬರಿಗಳಲ್ಲಿ ಗುರುತಿಸಬಹುದಾಗಿದೆ.

*** ತ.ರಾ.ಸು. ಚಾರಿತ್ರಿಕ ಕಾದಂಬರಿಗಳ ವಿನ್ಯಾಸ**

ತ.ರಾ.ಸು. ಅವರ ಚಾರಿತ್ರಿಕ ಕಾದಂಬರಿಗಳ ರಚನಾ ವಿನ್ಯಾಸವು ವಿಶಿಷ್ಟವಾದುದ್ದಾಗಿದೆ. ಕಾದಂಬರಿಗೆ ಆಯ್ದುಕೊಳ್ಳುವ ವಸ್ತುವಿನ ಆಯ್ಕೆ, ಅದರ ವೈವಿಧ್ಯತೆ, ನಿರೂಪಣಾ ವಿಧಾನ, ಅದರ ಹರವು ಮತ್ತು ಅದರಲ್ಲಿ ಚಿತ್ರಿತವಾದ ಆಡಳಿತ ವ್ಯವಸ್ಥೆ, ವ್ಯವಸ್ಥೆಯೊಳಗೆ ಕಾಣುವ ಪ್ರಭುತ್ವ ಜೊತೆಗೆ ಪ್ರಭುತ್ವದ ಧ್ಯೇಯೋಧೋರಣೆಗಳು ಮತ್ತು ಯುದ್ಧ ಕುರಿತಾದ ವಿವರಗಳು ಇತ್ಯಾದಿ ಸಂಗತಿಗಳ ವಿವರಣಾತ್ಮಕ ಚರ್ಚೆಯನ್ನು ಇಲ್ಲಿ ನಡೆಸಲಾಗಿದೆ. ಜೊತೆಗೆ ಕಾದಂಬರಿಗಳಲ್ಲಿ ಚಿತ್ರಿತವಾದ ಸಾಮಾಜಿಕ ಹಾಗೂ ಧಾರ್ಮಿಕ ಬದುಕು, ಪುರುಷ ಮತ್ತು ಮಹಿಳೆಯರಿಗೆ ಇದ್ದಂತಹ ಸ್ಥಾನಮಾನಗಳ ವಿವೇಚನೆಯನ್ನು ಸಂಶೋಧನ ಸಂಪ್ರಬಂಧಗಳಲ್ಲಿ ಕಾಣಬಹುದಾಗಿದೆ. ತ.ರಾ.ಸು. ಅವರು ಬರೆದ ಪ್ರತಿಯೊಂದು ಚಾರಿತ್ರಿಕ ಕಾದಂಬರಿಯೂ ತನ್ನದೇ ಚಾರಿತ್ರಿಕ ವಿನ್ಯಾಸ ಪಡೆದುಕೊಂಡಿರುವುದನ್ನು ಗುರುತಿಸಲಾಗಿದೆ. ತ.ರಾ.ಸು. ಅವರು ತಮ್ಮ ಕಾದಂಬರಿಗಳು ವ್ಯಕ್ತಪಡಿಸುವ ಅಂದಿನ ಸಾಮಾಜವು ಇಂದಿನ ಸಮಾಜಕ್ಕೂ ಹತ್ತಿರವಾಗುವ ಪರಿಯನ್ನು ವಾಸ್ತವಿಕ ನೆಲೆಗಟ್ಟಿನಲ್ಲಿ ಚಿಂತಿಸುವ ಪ್ರಯತ್ನವನ್ನು ಅಲ್ಲಲ್ಲಿ ಮಾಡಲಾಗಿದೆ.

*** ಪಾತ್ರ ಚಿತ್ರಣ**

ತ.ರಾ.ಸು. ಚಾರಿತ್ರಿಕ ಕಾದಂಬರಿಗಳಲ್ಲಿ ಪಾತ್ರಗಳ ಜೀವಂತಿಕೆಯಿದೆ. ಯಾವುದೇ ಪಾತ್ರವನ್ನು ಚಿತ್ರಿಸುವಾಗ ಆ ಪಾತ್ರದ ಹೊರ ಮತ್ತು ಒಳ ಅರಿವು ಎದ್ದು ಕಾಣುತ್ತದೆ. ಆ ಮೂಲಕ ಆ ಪಾತ್ರ ಕಣ್ಣುಮುಂದೆ ಕಟ್ಟುತ್ತದೆ. 'ಕುಶಲ ಶಿಲ್ಪಿ ರೂಪಲಕ್ಷ್ಮೀಯನ್ನು ಕುರಿತು ತಪಸ್ಸು ಮಾಡಿ, ಆ ಆರಾಧನೆಯಿಂದ ಪುಟಗೊಂಡ ತನ್ನ ಪ್ರತಿಭೆಯೆಲ್ಲವನ್ನೂ ಧಾರೆ ಎರೆದು ಸೃಷ್ಟಿಸಿದಷ್ಟು

ರಮಣೀಯವಾಗಿತ್ತು ಶಾಂತಲೆಯು ಮುಖ, ಗೌರವ್ವ ನಾಗತಿ ಮದಕರಿ ನಾಯಕರ ಕಡೆಯ ಪತ್ನಿ, ಆಕೆಯ ರೂಪಕ್ಕೆ ಮೋಹಿಸಿ ಮದುವೆಯಾದ ನಾಯಕರು ಕಡೆಗಾಲದಲ್ಲಿ ಒಂದು ದಿನವೂ ಆಕೆಯನ್ನು ಬಿಟ್ಟು ಅಗಲಿರಲಿಲ್ಲ. ಇದ್ದೊಬ್ಬ ಮಗಳು ಕೈಲಾಸವಾಸಿಯಾದ ಬಳಿಕಲಂತೂ ಅವರಿಗೆ ಆಕೆಯ ಅಂತಃಪುರದಾಚೆಗೆ ಬೇರೆ ಜಗತ್ತೇ ಉಳಿಸಿರಲಿಲ್ಲ. `ಸಾಕು ಈಗಾದ ಹಗರಣವೇ ಸಾಕು, ಇನ್ನು ಹೆಚ್ಚಿನದು ಬೇಡ ಸಾಕು... ಸಾಕು .. ನಿಜ .... ನನಗೂ ಸಾಕಾಗಿದೆ ದೇಸಣ್ಣ. ಹಗರಣ ಸಾಕು. ಈಗ ಬೇಕಾಗಿರುವುದು ಹಗರಣವಲ್ಲ, ಮಾರಣಹೋಮ. ಅದಕ್ಕೆ ಮೊದಲ ಬಲಿ ನಿನ್ನ ತಲೆ! ಎಂಬಂತೆ ತ.ರಾ.ಸು. ಅವರು ರಸವತ್ತಾದ ಪಾತ್ರ ಚಿತ್ರಣದೊಂದಿಗೆ ಅವುಗಳ ಗುಣಸ್ವಭಾವದ ಚಿತ್ರಣವನ್ನು ಕೊಟ್ಟಿದ್ದಾರೆ.

*** ಭಾಷಾ ವೈಖರಿ ಮತ್ತು ಶೈಲಿ**

ಚಾರಿತ್ರಿಕ ಘಟನೆಗಳನ್ನು ನೈಜ ಘಟನೆಗಳೆಂಬಂತೆ ಚಿತ್ರಿಸುವ ಕಲೆ ತ.ರಾ.ಸು. ಅವರಲ್ಲಿದೆ. ಇದಕ್ಕೆ ಅವರ ಐತಿಹಾಸಿಕ ಕಾದಂಬರಿಗಳು ಜೀವಂತಸಾಕ್ಷಿಯೆನಿಸಿವೆ. ಅವರು ಕೊಡುವ ಪ್ರತಿಯೊಂದು ಪ್ರಸಂಗವೂ ನಮ್ಮ ಕಣ್ಣು ಮುಂದೆಯೇ ನಡೆಯುವಂತೆ ಚಿತ್ರಿಸಿದ್ದಾರೆ. ಈ ಸಂದರ್ಭದಲ್ಲಿ ತ.ರಾ.ಸು. ಅವರು ಪಾಂಡಿತ್ಯಪೂರ್ಣ ಭಾಷೆಯನ್ನು ಬಳಸಿದ್ದಾರೆ. ಸಂಭಾಷಣೆಯೇ ಅವರ ಕಾದಂಬರಿಗಳ ಜೀವಾಳವಾಗಿದೆ. ಅವರ ಕಾದಂಬರಿಗಳಲ್ಲಿನ ಪಾತ್ರಗಳು ತಮ್ಮ ಸ್ವಭಾವ ಮತ್ತು ಗುಣಧರ್ಮಕ್ಕೆ ಅನುಗುಣವಾಗಿ ಮಾತನಾಡಬಲ್ಲ ಸಾಮರ್ಥ್ಯ ಪಡೆದಿದೆ. ತ.ರಾ.ಸು. ಅವರು ಪ್ರೌಢ ಭಾಷೆ ಬಳಸಿದ್ದರೂ ಅಲ್ಲಲ್ಲಿ ಸಂದರ್ಭ ಸನ್ನಿವೇಶಕ್ಕನುಗುಣವಾಗಿ ಗ್ರಾಮ್ಯ ಪದಗಳನ್ನು ಬಳಸಿದ್ದಾರೆ. ಇನ್ನು ಸರಾಗವಾಗಿ ಓದಿಸಿಕೊಂಡು ಹೋಗುವ ಬರವಣಿಗೆಯ ಶೈಲಿ ತ.ರಾ.ಸು. ಅವರಲ್ಲಿದೆ. ಯಾವುದೇ ಪ್ರಸಂಗವನ್ನು ಚಿತ್ರಿಸುವಾಗ ಓದುಗರನ್ನು ಮಂತ್ರಮುಗ್ಧರನ್ನಾಗಿಸುತ್ತಾರೆ. ಅದರೊಂದಿಗೆ ಕುತೂಹಲವನ್ನು ಕೆರಳಿಸುತ್ತಾರೆ.

*** ಪ್ರಸ್ತುತ ಸಮಾಜಕ್ಕೆ ಇತಿಹಾಸದ ಪರಿಚಯ.**

ಪ್ರಸ್ತುತ ಸಮಾಜದಲ್ಲಿ ಓದುಗರ ಸಂಖ್ಯೆ ಕಡಿಮೆಯಾಗಿದೆ. ಇನ್ನು ಐತಿಹಾಸಿಕ ವ್ಯಕ್ತಿಗಳ ಅವರ ಆಡಳಿತ ವೈಖರಿಯನ್ನು ತಿಳಿದುಕೊಳ್ಳಲು ಬಲು ಅಪರೂಪ ಎಂದೇ ಹೇಳಬಹುದು. ಆದ್ದರಿಂದ ಇಂತಹ ಸಂಶೋಧನೆಗಳು ನಡೆದಾಗ ಜನರಲ್ಲಿ ಇತಿಹಾಸದ ಅರಿವನ್ನು ಮೂಡಿಸಬಹುದು.

*** ವಿಶಿಷ್ಟ ಕಲೆಯ ಪರಿಚಯ**

ತ.ರಾ. ಸುರವರ ಎಲ್ಲ ಐತಿಹಾಸಿಕ ಕಾದಂಬರಿಗಳಲ್ಲಿ ದೇವಾಲಯಗಳ ಚಿತ್ರಣ ಅದರ ರಚನಾಕ್ರಮ ಅದರ ವಿಶಿಷ್ಟತೆಯನ್ನು ಪರಿಚಯಮಾಡುವ ಪ್ರಯತ್ನ ಮಾಡಲಾಗಿದೆ. ಅದೇ ರೀತಿ ರಾಜಮನೆತನ ಕುರಿತು ವಿವರಿಸುವಾಗ ಅರಮನೆಯ ವೈಭವವನ್ನು ಅದರ ಚಿತ್ರಣವನ್ನು ನಮ್ಮ ಕಣ್ಣು ಮುಂದೆ ಕಟ್ಟುವಂತೆ ಚಿತ್ರಿಸುವ ರೀತಿಯಲ್ಲಿ ಗಮನಾರ್ಹವಾಗಿದೆ.

* **ಆದರ್ಶಗುಣಗಳ ಪರಿಚಯ**

ಐತಿಹಾಸಿಕ ವ್ಯಕ್ತಿಗಳಲ್ಲಿ ಇರುವಂತಹ ಆದರ್ಶಗುಣಗಳನ್ನು ಪರಿಚಯಿಸುವಂತಹ ಕಾರ್ಯ ಮಾಡಲಾಗಿದೆ. ಉದಾ: ನೃಪತುಂಗ ತನ್ನ ರಾಜ್ಯದ ಜನರ ಕ್ಷೇಮಕ್ಕಾಗಿ ತನ್ನ ಬೆರಳನ್ನೇ ದಾನ ಮಾಡುವಂತಹ ಸಂದರ್ಭ. ಹೋಯ್ಸಳೇಶ್ವರ ವಿಷ್ಣುವರ್ಧನ ತನಗೆ ಶರಣಾದ ಎದುರಾಳಿಗಳ ಕ್ಷಮಿಸುವಂತಹ ಕಾರ್ಯ ಅವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿವೆ.

* **ಅಧಿಕಾರ ದುರುಪಯೋಗ**

ಚಿತ್ರದುರ್ಗ ಇತಿಹಾಸದ ಹಿನ್ನೆಲೆಯಲ್ಲಿ ಬರೆದ ನಾಲ್ಕು ಕಾದಂಬರಿಗಳಲ್ಲಿ ದಳವಾಯಿ ಮುದ್ದಣನ ಪಾತ್ರ ವಿಶೇಷವಾಗಿದೆ. ತಾನು ಅರಸು ಮನೆತನಕ್ಕೆ ಮಾಡುತ್ತಿರುವ ತಪ್ಪಿನ ಅರಿವು ಅವನಿಗಿದ್ದರೂ ಕೆಟ್ಟ ಕೆಲಸಕ್ಕೆ ತನ್ನ ಅಧಿಕಾರವನ್ನು ಬಳಸಿಕೊಳ್ಳುತ್ತಾನೆ. ಅದರಿಂದ ಅವನು ಮಾನಸಿಕವಾಗಿ ತನ್ನ ಸ್ಥಿಮಿತತ್ವ ಕಳೆದುಕೊಂಡು ಕೊನೆಗೆ ಪ್ರಾಣಬಿಡಬೇಕಾಗುತ್ತದೆ. ಪ್ರಸ್ತುತ ಸಾಮಾಜಿಕ ಸಂದರ್ಭದಲ್ಲೂ ಅಧಿಕಾರದ ದುರುಪಯೋಗ ಎಷ್ಟಿದೆ ಎಂಬುದನ್ನು ಅರಿಯಲು ಹಲವಾರು ಉದಾಹರಣೆಗಳನ್ನು ಓದುಗರ ಮುಂದೆ ಇಡಲಾಗಿದೆ.

* **ಸಮಾಜ ಸುಧಾರಣಾ ನೀತಿ**

ಪ್ರಸ್ತುತ ದಿನಮಾನದಲ್ಲಿ ಯುದ್ಧದ ಕುರಿತು ಅದರ ಪರಿಣಾಮ ಎಷ್ಟು ಘೋರವಾಗಿರುತ್ತದೆ. ಎಂಬುದನ್ನು ತಿಳಿಸುವುದು ಅವಶ್ಯವಾಗಿದೆ. ತ.ರಾ.ಸು.ರವರ ಐತಿಹಾಸಿಕ ಕಾದಂಬರಿಯಲ್ಲಿ ನಡೆದ ಹಲವಾರು ಯುದ್ಧಗಳು ರಾಜರ ಮನಸ್ಸಿನ ಮೇಲೆ ಬೀರಿದ ಪರಿಣಾಮವನ್ನು ತಿಳಿಸುವದಾಗಿದೆ.

ಭರಮಣ್ಣನಾಯಕ ಅಧಿಕಾರ ಸ್ವಿಕರಿಸಿದ ಕೂಡಲೇ ಜನರಿಗೆ ಅನುಕೂಲ ಮಾಡುವಂತಹ ಹಲವಾರು ಸಮಾಜ ಸುಧಾರಣಾ ಕೆಲಸಗಳನ್ನು ಮಾಡಿ ಜನರ ಮೆಚ್ಚುಗೆಗೆ ಪಾತ್ರನಾಗುತ್ತಾನೆ ಯಾವುದೇ ರೀತಿಯ ರಾಜ್ಯಬೊಕ್ಕಸವನ್ನು ಸಂಗ್ರಹಿಸುವ ಕಾರ್ಯಕ್ಕೆ ಮುಂದಾಗಿದೆ ತನ್ನ ಅವಧಿಯ ಅರ್ಧಭಾಗವನ್ನು ಸಮಾಜ ಕಲ್ಯಾಣ ಕಾರ್ಯಕ್ಕಾಗಿ ಮೀಸಲಾಗಿಡುವಂತಹದ್ದು.

* **ಮಹಿಳೆಯರು ಬೆಳೆಸಿಕೊಳ್ಳಬೇಕಾದ ದಿಟ್ಟತನ**

ಆಧುನಿಕ ಯುಗದಲ್ಲಿ ಮಹಿಳೆಯರು ಧೈರ್ಯದಿಂದ ಮುನ್ನುಗುವಂತಹ ಕಾರ್ಯ ಮಾಡಬೇಕಾಗಿದೆ. ಆ ರೀತಿಯ ಗುಣಗಳನ್ನು ಬೆಳೆಸಿಕೊಳ್ಳಲು ಕಾದಂಬರಿಯಲ್ಲಿ ಕೆಲವು ಪಾತ್ರಗಳು ನಮಗೆ ಪ್ರೇರಣೆಯ ರೂಪದಲ್ಲಿ ವ್ಯಕ್ತವಾಗುತ್ತವೆ. ಉದಾ: ಗಿರಿಜೆಯ ಪಾತ್ರ ಮೂರು ಕಾದಂಬರಿಯಲ್ಲಿ ಬರುತ್ತದೆ. ಈ ಗಿರಿಜೆ ತನಗೆ ತನ್ನ ರಾಜಮನೆತನಕ್ಕೆ ಅನ್ಯಾಯವಾದುದ್ದರ ವಿರುದ್ಧ ಸೇಡು ತೀರಿಸಿಕೊಳ್ಳಲು ಹಗಲಿರುಳು ಎನ್ನದೆ ಅಲ್ಲೆದು ತನ್ನ ಕಾರ್ಯ ಸಾಧನೆ ಮಾಡಿಕೊಳ್ಳುತ್ತಾಳೆ.

ಅದೇ ರೀತಿ ಕಂಬನಿಯ ಕುಯಿಲು ಕಾದಂಬರಿಯಲ್ಲಿ ಕಿರಿಯ ನಾಗತಿ ತನ್ನ ತಮ್ಮನ ಪಟ್ಟಾಭಿಷೇಕಕ್ಕಾಗಿ ಹಾಗೂ ಚಿತ್ರದುರ್ಗದ ಅರಸುಮನೆತನದವರ ಪಟ್ಟದ ವಿಚಾರ ಕುರಿತು ತೀವ್ರ ವಾಗ್ವಾದ ಮಾಡಿ ಜಯ ಸಾಧಿಸುತ್ತಾಳೆ.

ಕೀರ್ತಿನಾರಾಯಣ ಎಂಬ ಕಾದಂಬರಿಯಲ್ಲಿ ಬರುವ ಶಾಂತಲೆಯು ಅವಕಾಶ ಒದಗಿ ಬಂದಾಗ ನಾವು ಯುದ್ಧಕ್ಕೆ ಸಿದ್ಧ ಎಂಬ ಮಾತನ್ನು ಹೇಳುವಂತಹುದು ಇವೆಲ್ಲ ಮಹಿಳೆಯರ ದಿಟ್ಟತನವನ್ನು ನಮಗೂ ಪರಿಚಯಿಸುತ್ತವೆ.

*** ಆಸೆಯೇ ದುಃಖಕ್ಕೆ ಮೂಲ**

ಚಿತ್ರದುರ್ಗದ ಇತಿಹಾಸ ಸಾರುವಂತಹ ನಾಲ್ಕು ಕಾದಂಬರಿಯಲ್ಲಿ ಅತಿಯಾದ ಆಸೆಯನ್ನು ಹೊಂದಿದಂತಹ ಮುದ್ದಣ್ಣನ ಪಾತ್ರ ನಮಗೆ ಪ್ರಮುಖವಾಗುತ್ತದೆ. ತಾನು ಅಧಿಕಾರ ಪಡೆಯಬೇಕೆಂಬ ಮಹದಾಸೆಯಿಂದ ಹಲವಾರು ಜನರ ಸಾವಿಗೆ ಕಾರಣನಾಗುತ್ತಾನೆ. ಅದರೊಂದಿಗೆ ತನ್ನ ನೆಮ್ಮದಿಯನ್ನು ಹಾಳು ಮಾಡಿಕೊಂಡು ಕೊನೆಗೆ ತಾನು ಕೂಡ ಯಾವ ಸುಖವನ್ನು ಅನುಭವಿಸದೆ ಸಾವನ್ನಪ್ಪುವಂತಹ ಪರಿಸ್ಥಿತಿ ತಂದುಕೊಳ್ಳುತ್ತಾನೆ. ಇದು ಇಂದಿನ ಸಮಾಜಕ್ಕೂ ಅನ್ವಯಿಸುವಂಥದ್ದಾಗಿದೆ.

*** ಮಹಿಳೆಯಲ್ಲಿರುವ ಉದಾರಗುಣದ ಚಿತ್ರಣ**

ಮಹಿಳೆಯಲ್ಲಿನ ಕ್ಷಮೆ, ಉದಾರತೆ ತೋರಿಸುವಂತಹ ಗುಣವನ್ನು ಪರಿಚಯಿಸುವ ಕೆಲಸ ಮಾಡಲಾಗಿದೆ. ಶಾನ್ತಲೆ (ಕೀರ್ತಿನಾರಾಯಣ)ಯು ತನ್ನ ಪತಿ ಯುದ್ಧಕ್ಕೆ ತೆರಳುವ ಸಂದರ್ಭದಲ್ಲಿ "ನೀವು ಗೆದ್ದ ರಾಜ್ಯದಲ್ಲಾಗಲಿ, ಯುದ್ದ ತೆರಳುವ ಮಾರ್ಗ ಮಧ್ಯದಲ್ಲಿ ಬರುವ ಗ್ರಾಮಗಳಲ್ಲಾಗಲಿ, ಯಾವ ಹೆಣ್ಣು ಮಕ್ಕಳಿಗೆ, ಚಿಕ್ಕ ಮಕ್ಕಳಿಗೆ ತೊಂದರೆ ನೀಡಬಾರದು ಎಂದು ಕೇಳಿಕೊಳ್ಳುವ ರೀತಿಯಲ್ಲಿ ಅವಳ ಉದಾರಗುಣದ ಪರಿಚಯ ನಮಗೆ ಆಗುತ್ತದೆ. ಅದೇ ರೀತಿ ತ.ರಾ.ಸು.ರವರ ಎಲ್ಲ ಐತಿಹಾಸಿಕ ಕಾದಂಬರಿಗಳಲ್ಲಿ ಬರುವ ರಾಣಿಯರು ತಮ್ಮ ಅರಮನೆಯಲ್ಲಿರುವ ಜನರ ಮೇಲೆ ತೋರುವ ಪ್ರೀತಿ, ವಾತ್ಸಲ್ಯ ನಮ್ಮನ್ನು ಆಕರ್ಷಿಸುವಂತಿವೆ.

*** ಚಿತ್ರದುರ್ಗದ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಕಾರ್ಯ**

ಕರ್ನಾಟಕವನ್ನು ಆಳಿದ ಅನೇಕ ಅರಸು ಮನೆತನಗಳಲ್ಲಿ ಚಿತ್ರದುರ್ಗದ ಪಾಳೆಯಗಾರರ ಮನೆತನವು ಒಂದಾಗಿದೆ. ಇಲ್ಲಿಯ ವರೆಗೆ ನಾವು ಐತಿಹಾಸಿಕವಾಗಿ ಚಿತ್ರದುರ್ಗವನ್ನು ಓದುವ ಕ್ರಮಕ್ಕೂ ಸಾಹಿತ್ಯಿಕವಾಗಿ ಚಿತ್ರದುರ್ಗದ ಇತಿಹಾಸವನ್ನು ಓದುವ ಕ್ರಮಕ್ಕೂ ಭಿನ್ನವಾಗಿದೆ. ನಮಗೆ ತಿಳಿಯದ ಹಲವಾರು ವಿಚಾರವನ್ನು ತ.ರಾ.ಸು.ರವರು ತಮ್ಮ ಐತಿಹಾಸಿಕ ಕಾದಂಬರಿಯಲ್ಲಿ ಚಿತ್ರಿಸುವಂತಹ ಪ್ರಯತ್ನ ಮಾಡಿದ್ದಾರೆ. ಅದರಲ್ಲೂ ಚಿತ್ರದುರ್ಗ ಇತಿಹಾಸಕ್ಕೆ ಸಂಬಂಧಿಸಿದಂತೆ ಹಲವಾರು ಕಾದಂಬರಿಗಳನ್ನು ರಚಿಸಿದ್ದಾರೆ. ಅವುಗಳನ್ನು ಒಂದು ಕಡೆ ಸಂಕ್ಷಿಪ್ತವಾಗಿ ಪರಿಚಯಿಸಿ

ಓದುಗರಿಗೆ ಚಿತ್ರದುರ್ಗವನ್ನು ಆಳಿದ ರಾಜರ, ರಾಜಮನೆತನದ ಇತಿಹಾಸ ತಿಳಿಸುವ ಪ್ರಯತ್ನ ಮಾಡಲಾಗಿದೆ.

*** ಪ್ರತಿಭಟನಾ ಸ್ವಭಾವದ ಚಿತ್ರಣ.**

ಐತಿಹಾಸಿಕ ಕಾದಂಬರಿಗಳಲ್ಲಿ ಕೇವಲ ರಾಜರ ಇತಿಹಾಸ ಮಾತ್ರವಿರದೇ, ಆಳಿಸಿಕೊಳ್ಳುವವರ ಕುರಿತು ನಮಗೆ ಮಾಹಿತಿ ದೊರೆಯುತ್ತದೆ. ನಮ್ಮನ್ನಾಳುವವರು ಸರಿಯಾದ ರೀತಿಯಲ್ಲಿ ಕಾರ್ಯ ನೆರವೇರಿಸದಿದ್ದಲ್ಲಿ ಅವರನ್ನು ಎಚ್ಚರಿಸುವಂತಹ ಕೆಲಸ ನಮ್ಮದಾಗಬೇಕು ಎಂಬ ವಿಚಾರಗಳು ಕಾದಂಬರಿಯಲ್ಲಿ ಕಾಣಸಿಗುತ್ತವೆ.

*** ನಾಡಾಭಿಮಾನದ ಅರಿವು**

ನಮ್ಮ ನಾಡಿನ ಚರಿತ್ರೆಯನ್ನು ತಿಳಿಸುವಂತಹ ಕಾದಂಬರಿಯ ಪರಿಚಯವನ್ನು ಮಾಡಿಕೊಡುತ್ತ ನಾಡಾಭಿಮಾನದ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸುವ ಕಾರ್ಯವನ್ನು ತ.ರಾ.ಸು ಹೇಗೆ ಮಾಡಿದ್ದಾರೆಂಬುದನ್ನು ಕಂಡುಕೊಳ್ಳಲಾಗಿದೆ. ಈ ಸಂದರ್ಭದಲ್ಲಿ ಸಾಮಾನ್ಯ ಜನರು, ಮಹಿಳೆಯರು, ರಾಜರು ತಮ್ಮ ನಾಡನ್ನು ಉಳಿಸಿಕೊಳ್ಳಲು ಹೋರಾಡಿದಂತಹ ಚಿತ್ರಣವನ್ನು ನಿದರ್ಶನ ರೂಪದಲ್ಲಿ ನೀಡಲಾಗಿದೆ.

ಈ ಮುಂತಾದ ಫಲಿತ ಅಂಶಗಳೊಂದಿಗೆ ಈ ಸಂಶೋಧನ ಸಂಪ್ರಬಂಧವು ತನ್ನ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ. ಆದರೂ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ತ.ರಾ.ಸು. ಅವರ ಕೊಡುಗೆ ಬಹುವಿಸ್ತೃತವಾದ್ದರಿಂದ ಅದನ್ನು ವಿವಿಧ ಮಗ್ಗಲುಗಳಿಂದ ಸಂಶೋಧಿಸುವ ಅವಕಾಶವಂತೂ ಇದ್ದೆ ಇದೆ. ಅವರ ಚಾರಿತ್ರಿಕ ಕಾದಂಬರಿಗಳಿಗೂ ಅನ್ವಯಿಸುವ ಮಾತಾಗಿದೆ.

- **ಆ ಕಾಲದ ವೈಭವ ಹಾಗೂ ವೀರ ಜೀವನವನ್ನು ಯಥಾವತ್ತಾಗಿ ಪ್ರತಿಬಂಬಸುವದು.**

  ತ.ರಾ.ಸುರವರ ಐತಿಹಾಸಿಕ ಕಾದಂಬರಿಗಳಲ್ಲಿ ಮೂಡಿ ಬಂದ ಆ ಕಾಲದ ರಾಜಮನೆತನಗಳ ವೈಭವ ಹಾಗೂ ರಾಜರಲ್ಲಿರುವ ವೀರತ್ವದ ಗುಣಗಳನ್ನು ಪರಿಚಯಿಸುವಂತಹ ಕಾರ್ಯ ಮಾಡಲಾಗಿದೆ.

  ರಾಜನಲ್ಲಿರಬೇಕಾದ ಮೂಲ ಗುಣ ವೀರಾವೇಷದಿಂದ ಹೋರಾಡುವಂತಹದ್ದು, ಅದೇ ರೀತಿ ಆ ಕಾಲದಲ್ಲಿ ಯಾವ ರೀತಿ ರಾಜ ಮನೆತಗಳನ್ನು ವೈಭವದಿಂದ ಕೂಡಿದ್ದವು ಎಂಬುದನ್ನು ತಿಳಿಸುವುದಾಗಿದೆ.

- **ಮಾನವ ಜೀವನದ ಸಾರ್ವಕಾಲಿಕ ಸಮಸ್ಯೆಗಳ ಚಿತ್ರಣ.**

  ಮನುಷ್ಯನ ಮನಸ್ಸಿನ ತಾಕಲಾಟವು ಇಂದಿನದಲ್ಲ, ಹಿಂದೆಯೂ ಕೂಡಾ ಇತ್ತು. ಹಾಗೆಂದ್ಮು ಆತ ಹೆದರದೇ ಮುನ್ನುಗಿದ್ದಕ್ಕಾಗಿ ಇಂದಿನ ದಿನ ಸಮಾಜದಲ್ಲಿ

ಮಾನವ ಸಮುದಾಯ ಇದೆ. ಸಮಸ್ಯೆ ಇಲ್ಲದೇ ಜೀವನವಿಲ್ಲ ಎಂಬುದನ್ನು ತಿಳಿಸುವದಾಗಿದೆ.

- **ಪ್ರಣಯ ಸಂಬಂಧಗಳ ಚಿತ್ರಣ**

ರಾಜ ಮಹಾರಾಜರು ವಿಲಾಸಿ ಜೀವನವನ್ನು ಅನುಭವಿಸುತ್ತಿದ್ದರು ಎಂಬುದು ನಮಗೆ ತಿಳಿದ ವಿಷಯವಾಗಿದೆ. ಇನ್ನು ಮುಂದುವರೆದು ಯುದ್ಧ, ರಾಜ್ಯ ಕಟ್ಟುವದು ಅವರ ಪ್ರಮುಖ ಗುರಿಯಾಗಿದ್ದರು, ಸಂತಂತಿ ಬೆಳೆಸುವುದು ಅವರ ಪ್ರಮುಖ ಗುರಿಗಳಲ್ಲಿ ಒಂದಾಗಿತು ಎಂಬುದು ಮರೆಯುವಂತಿಲ್ಲ.

- **ದೈವದೊಂದಿಗೆ ಸಂಬಂಧ ಬೆಳೆಸಿಕೊಂಡ ರೀತಿ.**

ರಾಜಮಹಾರಾಜರ ಕಾಲದಿಂದಲೂ ನಾವು ದೇವರೊಂದಿಗೆ ಉತ್ತಮ ಸಂಬಂಧ ಬೆಳೆಸಿಕೊಂಡ ಬಂದಿರುತ್ತೇವೆ. ಕಷ್ಠದ ಕಾಲದಲ್ಲಾಗಲಿ, ಸುಖದ ಸಂದರ್ಭದಲಾಗಲ್ಲಿ ದೈವದ ಮೋರೆ ಹೋಗುವುದು ಮನುಷ್ಯನ ಸಾಮಾನ್ಯ ಗುಣ ಈ ರೀತಿಯ ಅಂಶಗಳು ತ.ರಾ.ಸುರವರ ಐತಿಹಾಸಿಕ ಕಾದಂಬರಿಯಲ್ಲಿ ವ್ಯಕ್ತವಾಗಿರುವದನ್ನು ನಾವು ನೋಡಬಹುದು.

- **ಓಲಗದ ನಡತೆಗಳು.**

ಗುರು ಹಿರಿಯರೊಂದಿಗೆ ನಾವು ನಡೆದುಕೊಳ್ಳುವ ರೀತಿ ತಾನೇ ತಾನಾಗಿ ಬರುವಂತಹದು. ಅಂದಿನ ಕಾಲದ ಪದ್ದತಿಗಳು ಇಂದಿಗೂ ಪ್ರಚಲಿತವಿರುವದು ಹೆಮ್ಮೆಯ ಸಂಗತಿಯಾಗಿದೆ. ರಾಜರು ನಡೆಸುತ್ತಿರುವ ಓಲಗದಲ್ಲಿ ಯಾವ ರೀತಿಯಾಗಿ ವರ್ತಿಸಬೇಕು, ವಿನಯವನ್ನು ತೋರಿಸುತ್ತಿದರೂ ಎಂಬುದನ್ನು ತಿಳಿದುಕೊಳ್ಳುವುದು ಅಷ್ಟೆ ಮಹತ್ವದಾಗಿದೆ.

- **ಸಾಮಾನ್ಯ ಜನತೆಯಲ್ಲಿಯೂ ಕಳೆಗೊಳ್ಳುವ ದುರ್ಗದ ಅಭಿಮಾನ.**

ತ.ರಾ.ಸು ಐತಿಹಾಸಿಕ ಕಾದಂಬರಿಗಳನ್ನು ಅಭ್ಯಸಿಸಿದಾಗ ತಮ್ಮ ರಾಜ್ಯದ ವಿಷಯಕ್ಕೆ ಬಂದಾಗ ಸಾಮಾನ್ಯ ಜನರು, ಮಹಿಳೆಯರು ಕೂಡಾ ವ್ಯಕ್ತಪಡಿಸುವ ಹೋರಾಟದ ಮನೋಭಾವ, ಪ್ರೀತಿಯು ಆ ಮಣ್ಣಿನ ಮೇಲಿನ ಅಭಿಮಾನ ತಿಳಿಸುವದಾಗಿದೆ.

- **ಇತಿಹಾಸದ ಆಚೆಗಿರುವ ಚಿರಂತನ ಸತ್ಯದ ದರ್ಶನ ಮಾಡುವುದು.**

ಇತಿಹಾಸ ಸತ್ಯವಾದುದು. ನಾವು ಎಷ್ಟೇ ಮುಂದುವರೆದರೂ ಇತಿಹಾಸವನ್ನು ಮರೆಯವಂತಿಲ್ಲ.ಇತಿಹಾಸ ತಿಳಿಯದವ ಇತಿಹಾಸ ಸೃಷ್ಟಿಸಲಾರ ಎಂಬ ಮಾತು

ಸತ್ಯವಾಗಿದೆ. ಇತಿಹಾಸ ಸತ್ಯ ಸಂಗತಿಯನ್ನೆ ನಮಗೆ ಪರಿಚಯ ಮಾಡುತ್ತದೆ. ಇತಿಹಾಸದ ಆಚೆಗಿರುವ ಚಿರಂತನ ಸತ್ಯದ ದರ್ಶನವನ್ನು ತ.ರಾ.ಸು ಕಾದಂಬರಿಗಳು ಮಾಡುವುದು.

- **ಸಂಸ್ಕೃತಿಯನ್ನು ನಿರೂಪಿಸುವ ಪ್ರಯತ್ನ.**

ಕರ್ನಾಟಕ ಸಂಸ್ಕೃತಿಯ ತವರೂರು ಆಗಿದೆ. ಕನ್ನಡ ಸಾಹಿತ್ಯದ ಹಲವು ರೂಪಗಳು ಅದನ್ನು ನಿರೂಪಿಸುವ ಪ್ರಯತ್ನ ಹಿಂದಿನಿಂದಲೂ ಮಾಡುತ್ತ ಬಂದಿದೆ ಮತ್ತು ಈಗಲೂ ಮಾಡುತ್ತಿದೆ. ನಮ್ಮ ಸಂಸ್ಕೃತಿ ನಮ್ಮ ಜೀವಾಳ ಅದು ಸಾರ್ವಕಾಲಿಕ ಸತ್ಯ, ಸಂಸ್ಕೃತಿಯ ಬಿಂಬಿಸುವ ಹಲವಾರು ಉದಾಹರಣೆಗಳನ್ನು ನಾವು ಕಾದಂಬರಿಯಲ್ಲಿ ನೋಡಬಹುದು.

- **ವಾಸ್ತವತೆಯ ಚಿತ್ರಣ :**

ತ.ರಾ.ಸುರವರ ಐತಿಹಾಸಿಕ ಕಾದಂಬರಿಗಳು ವಾಸ್ತವವನ್ನೆ ಕಟ್ಟಿಕೊಡುವ ನಿಟ್ಟಿನಲ್ಲಿ ರಚನೆಯಾಗಿರುವಂತಹದು. ಇಂದಿನ ಮನುಷ್ಯನ ಬದುಕಿನ, ಸಮಾಜದ ವ್ಯವಸ್ಥೆಯ ಮೇಲೆ ಬೀರುವ ಪ್ರಾಭಾವ ಚಿತ್ರಿಸಲಾಗಿದೆ. ಹಾಗೂ ಅಂದಿನ ವಾಸ್ತವ ನಮ್ಮ ಕಣ್ಣು ಮುಂದೆ ತೆರೆಸುವಂತಹ ಕಾರ್ಯ ಮಾಡಲಾಗಿದೆ.

- **ರಾಜಕೀಯ ತಂತ್ರ – ಪ್ರತಿತಂತ್ರಗಳ ಸಂಧಾನ.**

ಐತಿಹಾಸಿಕ ಕಾದಂಬರಿಗಳ ಮೂಲ ರಾಜಕೀಯ ವ್ಯವಸ್ಥೆಯನ್ನು ನಮಗೆ ಪರಿಚಯಿಸುವುದಾಗಿದೆ. ಎದುರಾಳಿ ರಾಜ ತಮ್ಮ ರಾಜ್ಯದ ವಿರುದ್ಧ ಹುಡುವ ತಂತ್ರಕ್ಕೆ ಪ್ರತಿಯಾಗಿ ಪ್ರತಿ ತಂತ್ರಗಳನ್ನು ಯಾವರೀತಿ ಬುದ್ಧಿವಂತಿಕೆಯಿಂದ ಹುಡಿದಾಗ ಸಫಲವಾಗಿದ್ದಾರೆ ಎಂಬುದನೇ ತಿಳಿಸುವದಾಗಿದೆ. ಹಲವಾರು ಕಾದಂಬರಿಗಳಲ್ಲಿ ಇದರ ಕುರಿತು ನೋಡಬಹುದು.

- **ಪ್ರಕೃತಿಯ ಮೇಲೆ ಇರುವ ನಿತಾಂತ ಪ್ರೀತಿ**

ವಾತಾವರಣ ಸುಂದರವಾಗಿದ್ದರೆ ಮನಸ್ಸು ಹುಮಸ್ಸಿನಿಂದ ಕೂಡಿರುತ್ತದೆ. ಪ್ರಕೃತಿಯ ಪ್ರಭಾವ ಅಂದಿನ ಕಾಲದ ರಾಜದ ಮೇಲೆ, ಸಾಮಾನ್ಯರ ಮೇಲೆ ಯಾವ ರೀತಿಯ ಪ್ರಭಾವ ಬೀರಿತು ಮತ್ತು ಪ್ರಕೃತಿ ಸೌಂದರ್ಯವನ್ನು ಹೆಚ್ಚಿಸಲು ಅವರು ಮಾಡಿರುವ ಕೆಲಸ ಮಹತ್ವದಾದದು. ಪ್ರಕೃತಿಯಲ್ಲಿ ಸಿಗುವ ಹಲವಾರು ವಸ್ತುಗಳು ಇಂದಿಗೂ ಮನುಷ್ಯನ ಜೀವನಾಧಾರವಾಗಿವೆ.

- **ಜೀವನೋತ್ಸಾಹ.**

ಜೀವನದಲ್ಲಿ ಉತ್ಸಾಹ ಇದ್ದಾಗ ಮಾತ್ರ ನಾವು ಏನನ್ನಾದರೂ ಸಾಧಿಸಲು ಸಾಧ್ಯ. ಅಂದಿನ ಕಾಲದ ರಾಜರು ಯಾವಾಗಲೂ ಚಟುವಟಿಕೆಯಿಂದ ಕಾರ್ಯ ನಿರ್ವಹಿಸುತ್ತಾ ಹಲವಾರು ಜನರಿಗೆ ಮಾದರಿಯಾಗಿದ್ದರು ಎಂದು ತಿಳಿಯುತ್ತದೆ. ಯಾವ ರಾಜ ಸೋಮಾರಿಯಾಗಿದ್ದ ಅವನು ಹೆಚ್ಚು ಕಾಲ ಆಳ್ವಿಕೆ ಮಾಡಿಲ್ಲವೆಂದು ನಮಗೆ ತಿಳಿದು ಬರುತ್ತದೆ. ಯಾವುದಾದರೂ ಆಸಕ್ತಿ ಕ್ಷೇತ್ರದಲ್ಲಿ ಉತ್ಸಾಹದಿಂದ ನಮ್ಮನ್ನು ನಾವು ತೋಡಗಿಸಿಕೊಂಡರೆ ಏನನ್ನಾದರೂ ಸಾಧಿಸಬಹುದು ಎಂಬುದು ಸಾರ್ವಕಾಲಿಕ ಸತ್ಯವಾಗಿದೆ.

- **ಸಮರಸವೇ ಜೀವನ.**

ಐತಿಹಾಸಿಕ ಕಾದಂಬರಿಗಳು ಕೇವಲ ಯುದ್ಧ, ಆಡಳಿತವನ್ನು ಮಾತ್ರ ಪರಿಚಯಿಸದೇ ಜೀವನದ ಹಲವಾರು ಪ್ರಮುಖ ಘಟನೆಗಳನ್ನು ನಮ್ಮ ಕಣ್ಣು ಮುಂದೆ ತೆರೆದಿಡುತ್ತವೆ. ಹೊಂದಾಣಿಕೆಯಿಂದ ಜೀವನ ನಡೆಸಿದಾಗ ಮಾತ್ರ ಅದಕ್ಕೊಂದು ಬೆಲೆ ಬರುತ್ತದೆ.

- **ಸಾಮಾಜಿಕತೆಯ ಅರಿವು.**

ಐತಿಹಾಸಿಕ ಕಾದಂಬರಿಗಳಲ್ಲಿ ಸಾಮಾಜಿಕ ವ್ಯವಸ್ಥೆಯು ಕೂಡಾ ಮಹತ್ವದಾಗಿದೆ. ಸಾಹಿತ್ಯಕವಾಗಿ ನೋಡುವುದಾದರೆ ಸಮಾಜದಲ್ಲಿ ವ್ಯಕ್ತಿಯ ಸಂಬಂಧ ಉತ್ತಮವಾದಾಗ ಮಾತ್ರ ಆ ವ್ಯಕ್ತಿಗೆ ಒಂದು ಬೆಲೆ ಸಿಗುತ್ತದೆ. ಅದೇ ರೀತಿ ಸಮಾಜದ ಜನರೊಂದಿಗೆ ಉತ್ತಮ ಬಾಂಧವ್ಯ ಹೊಂದಿದಾಗ ನಾವು ಏನನ್ನಾದರೂ ಸಾಧಿಸಬಹುದು. ರಾಜಮಹಾರಾಜರು ಸಾಮಾನ್ಯ ಜನರನ್ನು ಪರಿಗಣಿಸಿ ಆಡಳಿತ ನಡೆಸುತ್ತಿದ್ದರು ಅದಕ್ಕಾಗಿಯೇ ಅವರ ಆಳ್ವಿಕೆಯು ಸುಲಲಿತವಾಗಿ ನಡೆಯುತ್ತಿತ್ತು ಎಂಬುದು ತಿಳಿದು ಬರುತ್ತದೆ.

- **ಕಾದಂಬರಿ ಜೀವಂತ ಅನುಭವಗಳ ಆಗರವಾಗಿದೆ.**

ರಾಜಮಹಾರಾಜರ ಜೀವನ ಅನುಭವಗಳು ಇಂದಿಗೂ ಸಾರ್ವಕಾಲಿಕವಾಗಿವೆ. ಅವರನ್ನು ಸೃಷ್ಟಿಸುವ ಕಲೆ ಕಾದಂಬರಿಕಾರರಿಗೆ ಅದ್ಭುತವಾಗಿ ತಿಳಿದಾಗ ಮಾತ್ರ ಅವರ ಜೀವನದ ಅನುಭವಗಳು ನಮಗೆ ಮುಟ್ಟಲಿಕೆ ಸಾಧ್ಯವಾಗುತ್ತದೆ. ಈ ರೀತಿಯ ಪ್ರಯತ್ನ ಇಲ್ಲಿ ಮಾಡಲಾಗಿದೆ.

- **ವಿನೋದಪರತೆ.**

ತ.ರಾ.ಸುರವರ ಐತಿಹಾಸಿಕ ಕಾದಂಬರಿಗಳು ವಿನೋದವನ್ನು ವ್ಯಕ್ತಪಡಿಸುವಂತಹವದಾಗಿದೆ. ಸಾಮಾನ್ಯ ಜನರ ಮೇಲೆ ರಾಜರಿಗೆ ಇರುವ ಪ್ರೀತಿ, ವಿಶ್ವಾಸ ಹಾಗೇ ಸಾಮಾನ್ಯ ವರ್ಗದವರು, ಆಡಳಿತ ವರ್ಗದವರ ನಡುವಿನ ಸಂಬಂಧ ಕೂಡಾ ಮಹತ್ವದಾಗಿದೆ. ಅವುಗಳನ್ನು ಕಂಡುಕೊಳ್ಳುವ ಮಾರ್ಗ ವಿಶೇಷವಾದದ್ದು.



# ಅನುಬಂಧ

## ತ.ರಾ.ಸು. ಅವರ ಬದುಕಿನ ಪ್ರಮುಖ ಘಟ್ಟಗಳು

| | | |
|---|---|---|
| ೧೯೨೦ ಏಪ್ರಿಲ್ ೨೧ | : | ಜನನ–ಮಲೆಬೆನ್ನೂರಿನಲ್ಲಿ, ಹರಿಹರ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಈಗಿನ ದಾವಣಗೆರೆ ಜಿಲ್ಲೆ. ವಂಶಸ್ಥರ ಸ್ಥಳ – ತಳುಕು, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ. |
| ೧೯೩೭ | : | ಧ್ವಜ ಸತ್ಯಾಗ್ರಹದಲ್ಲಿ ಪಾಲ್ಗೊಂಡು ಸೆರೆವಾಸ. |
| ೧೯೩೯ | : | ಅರಣ್ಯ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದು. |
| ೧೯೪೧ | : | ತಾಯಿ ಸೀತಮ್ಮನವರ ನಿಧನ. |
| ೧೯೪೨ | : | 'ಚಲೇಜಾವ್ ಚಳವಳಿ'ಯಲ್ಲಿ ಪಾಲ್ಗೊಂಡು ಸೆರೆವಾಸ. |
| ೧೯೪೩ | : | ಅಂಬುಜಾ ಅವರೊಂದಿಗೆ ವಿವಾಹ |
| ೧೯೪೪ | : | ಮೊದಲ ಕಾದಂಬರಿ 'ಮನೆಗೆ ಬಂದ ಮಹಾಲಕ್ಷ್ಮೀ' ಪ್ರಕಟ |
| ೧೯೪೭ | : | ಜವಾಬ್ದಾರಿ ಸರ್ಕಾರಿ ಚಳವಳಿಯಲ್ಲಿ ಭಾಗವಹಿಸಿದ್ದು |
| ೧೯೪೩–೫೦ | : | ಪ್ರಗತಿಶೀಲ ಚಳುವಳಿಯಲ್ಲಿ ಭಾಗವಹಿಸಿದ್ದು |
| ೧೯೪೨–೪೪ | : | 'ವಿಶ್ವ ಕರ್ನಾಟಕ' ಪತ್ರಿಕೆಯಲ್ಲಿ ಸೇವೆ |
| ೧೯೪೪–೪೫ | : | "ಪ್ರಜಾಮತ' ಪತ್ರಿಕೆಯಲ್ಲಿ ಸೇವೆ |
| ೧೯೪೫–೪೭ | : | "ವಾಹಿನಿ' ಪತ್ರಿಕೆಯಲ್ಲಿ ಸೇವೆ |
| ೧೯೪೭–೪೮ | : | "ನವೋದಯ' ಪತ್ರಿಕೆಯಲ್ಲಿ ಸೇವೆ |
| ೧೯೪೮–೪೯ | : | "ಚೇತನ'ದಲ್ಲಿ ಪತ್ರಿಕೆಯಲ್ಲಿ ಸೇವೆ |
| ೧೯೪೯–೫೦ | : | "ಪ್ರಜಾವಾಣಿ'ಪತ್ರಿಕೆಯಲ್ಲಿ ಸೇವೆ |
| ೧೯೫೭ | : | ಇಪ್ಪತ್ತೈದನೆಯ ಕಾದಂಬರಿ 'ಸಿಡಿಲ ಮೊಗ್ಗು'ಪ್ರಕಟ |
| ೧೯೬೦ | : | ಐವತ್ತನೆ ಕೃತಿ ರಾಜೇಶ್ವರಿಯ ಪ್ರಕಟಣೆ |
| ೧೯೬೦–೮೪ | : | ಕನ್ನಡ ಚಳುವಳಿಯಲ್ಲಿ ಸಕ್ರೀಯ ಸೇವೆ |
| ೧೯೬೩ | : | ರಾಜ್ಯ ಸಾಹಿತ್ಯ ಅಕ್ಯಾಡೆಮಿ ಬಹುಮಾನ – 'ಯಕ್ಷ ಪ್ರಶ್ನೆ' ಕೃತಿಗೆ |
| ೧೯೬೯ | : | ಪಶ್ಚಿಮ ಜರ್ಮನಿ, ಸೋವಿಯೆಟ್ ರಷ್ಯಾ ಪ್ರವಾಸ |
| ೧೯೭೦ | : | ಡಿಸೆಂಬರ ೨೭, ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ |

| | | |
|---|---|---|
| | | ಮಹೋತ್ಸವದ ಸಂದರ್ಭದಲ್ಲಿ 'ಶ್ರೇಷ್ಠ ಕಾದಂಬರಿಕಾರ' ಪ್ರಶಸ್ತಿ |
| ೧೯೭೧ | : | ಜುಲೈ ೨೧ ರಿಂದ ೧೯೭೫ರ ಮೇ ವರೆಗೆ ಮೈಸೂರ ವಿಶ್ವವಿದ್ಯಾಲಯ ಸೆನೆಟ್ ಸಭೆಯ ಸದಸ್ಯತ್ವ |
| ೧೯೭೪ | : | ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ |
| ೧೯೭೮ | : | ಅಕ್ಟೋಬರ್ ೨೮, ಚಿತ್ರದುರ್ಗದಲ್ಲಿ ಮೊದಲ ಸನ್ಮಾನ |
| ೧೯೮೧ | : | ಸಾಹಿತ್ಯ ರತ್ನ ಪ್ರಶಸ್ತಿ – ಭಾರತೀ ಧರ್ಮ ಸಮ್ಮೇಳನದ ಅಂಗವಾಗಿ (ಚಿತ್ರದುರ್ಗ) |
| ೧೯೮೨ | : | ಸಪ್ಟೆಂಬರ್ ೧, ತ.ರಾ.ಸು. ಬದುಕು–ಬರಹ (ಅಭಿನಂದನ ಗ್ರಂಥ) ಸಮರ್ಪಣೆ |
| ೧೯೮೩ | : | ರಾಜ್ಯ ಸಾಹಿತ್ಯ ಅಡಾಡಮಿ ವಿಶೇಷ ಪುರಸ್ಕಾರ |
| ೧೯೮೪ | : | ಮಾರ್ಚ, ೧೫ ಕೊನೆಯ ಬರವಣಿಗೆ, ಶ್ರೀ ಚಕ್ರೇಶ್ವರಿ |
| ೧೯೮೪ | : | ಏಪ್ರೀಲ್ ೧೦ ರಂದು ನಿಧನ. |
| ೧೯೮೫ | : | 'ಗಿರಿಮಲ್ಲಿಗೆ' (ಸ್ಮರಣ ಸಂಪುಟದ ಬಿಡುಗಡೆ) |
| ೧೯೮೫ | : | ಮರಣೋತ್ತರವಾಗಿ 'ದುರ್ಗಾಸ್ತಮಾನ' ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ |



# ಗ್ರಂಥ ಸೂಚಿ

* ಆಕರ ಗ್ರಂಥಗಳು

**ತ.ರಾ.ಸು.ರವರ ಐತಿಹಾಸಿಕ ಕಾದಂಬರಿಗಳು**


- ಶಿಲ್ಪಶ್ರೀ, ೧೯೬೦, ಪ್ರ.ಕೆ. ಸೀತಾರಾಮಶೆಟ್ಟಿ, ಬೆಂಗಳೂರು.
- ಅಗ್ನಿರಥ-ಮುಕ್ತಿಪಥ, ೧೯೬೬, ಗಂಗಾತರಂಗ, ಮೈಸೂರು.
- ವಿಜಯೋತ್ಸವ, ೧೯೯೭, ರಾಜರಾಜೇಶ್ವರಿ ಪ್ರಕಾಶನ, ಬೆಂಗಳೂರು.
- ರಕ್ತರಾತ್ರಿ, ೨೦೦೧, ಕಾವ್ಯಾಲಯ, ಪ್ರಕಾಶಕರು, ಮೈಸೂರು.
- ರಾಜ್ಯದಾಹ, ೨೦೦೧, ತಾ.ರಾ.ನಾಗರಾಜ್, (ಪ್ರ) ಬೆಂಗಳೂರು.
- ಕೀರ್ತಿನಾರಾಯಣ, ೨೦೦೨, ರಾಜರಾಜೇಶ್ವರಿ ಪ್ರಕಾಶನ, ಬೆಂಗಳೂರು.
- ಹೊಸಹಗಲು, ೨೦೦೭, ಸಾಹಿತ್ಯನಂದನ, ಬೆಂಗಳೂರು.
- ನೃಪತುಂಗ, ಮೊದಲ ಮುದ್ರಣ ೨೦೦೫, ಹೇಮಂತ ಸಾಹಿತ್ಯ, ಬೆಂಗಳೂರು.

  ಮೂರನೆಯ ಮುದ್ರಣ ೨೦೦೮, ಹೇಮಂತ ಸಾಹಿತ್ಯ, ಬೆಂಗಳೂರು.
- ತಿರುಗುಬಾಣ, ೨೦೦೮, ಹೇಮಂತ ಸಾಹಿತ್ಯ, ಬೆಂಗಳೂರು.
- ದುರ್ಗಾಸ್ತಮಾನ, ೨೦೧೦, ಹೇಮಂತ ಸಾಹಿತ್ಯ, ಬೆಂಗಳೂರು.
- ಕಸ್ತೂರಿನ ಕಂಕಣ, ೨೦೧೨, ಹೇಮಂತ ಸಾಹಿತ್ಯ, ಬೆಂಗಳೂರು.
- ಕಂಬನಿಯ ಕುಯಿಲು, ೨೦೧೩, ಹೇಮಂತ ಸಾಹಿತ್ಯ, ಬೆಂಗಳೂರು.
- ಸಿಡಿಲ ಮೊಗ್ಗು, ೨೦೧೪, ಹೇಮಂತ ಸಾಹಿತ್ಯ, ಬೆಂಗಳೂರು.

**ಪರಾಮರ್ಶನ ಗ್ರಂಥಗಳು**

೧. ಆಮೂರ. ಜಿ.ಎಸ್.,

- ಸಮಕಾಲೀನ ಕಥೆ, ಕಾದಂಬರಿ, ಹೊಸ ಪ್ರಯೋಗಗಳು, ೧೯೮೬, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

- ಕನ್ನಡ ಕಾದಂಬರಿ ಬೆಳವಣಿಗೆ, ೧೯೮೩, ಪ್ರಸಾರಾಂಗ ಬೆಂಗಳೂರು, ವಿಶ್ವವಿದ್ಯಾಲಯ, ಬೆಂಗಳೂರು.

- ಕನ್ನಡ ಕಥನ ಸಾಹಿತ್ಯ : ಕಾದಂಬರಿ, ೧೯೯೪, ಶ್ರೀಹರಿ ಪ್ರಕಾಶನ, ಧಾರವಾಡ

೨. ಆರಾಧ್ಯ ಶ್ರೀಶೈಲ. ಹೆಚ್.(ಸಂ) ಗಿರಿಮಲ್ಲಿಗೆ, ೧೯೮೫, ತ.ರಾ.ಸು. ಸ್ಮರಣ ಸಂಪುಟ ಸಮಿತಿ, ಚಿತ್ರದುರ್ಗ.

೩. ಉತ್ನಾಳ. ಬಿ. ಸಿದ್ದಣ್ಣ, ಕನ್ನಡ ಕಾದಂಬರಿಗಳಲ್ಲಿ ಪ್ರಾದೇಶಿಕತೆ, ೧೯೯೦, ಅನುಪಮ ಪ್ರಕಾಶನ, ಅಥಣಿ.

೪. ಕರ್ನಾಟಕದ ಪರಂಪರೆ, ಸಂಪುಟ – ೧, ೧೯೯೨. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೫. ಕರ್ನಾಟಕದ ಪರಂಪರೆ, ಸಂಪುಟ – ೨, ೧೯೯೨. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೬. ಕಳಕಣ್ಣವರ ಎಸ್.ಆಯ್, ಕನ್ನಡದಲ್ಲಿ ಮುಸ್ಲಿಂ ಲೇಖಕರ ಕಥಾಸಾಹಿತ್ಯ ಒಂದು ಅಧ್ಯಯನ, ೨೦೦೩, ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೭. ಕುರ್ತಕೋಟಿ ಕೀರ್ತಿನಾಥ, ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ೨೦೦೫, ಕುರ್ತಕೋಟಿ ಮೊಮೊರಿಯಲ್ ಟ್ರಸ್ಟ್, ಧಾರವಾಡ.

೮. ಕೋಮಲವಲ್ಲಿ. ಹು.ರಾ., ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳು ಒಂದು ಅಧ್ಯಯನ, ೨೦೦೮, ಕನ್ನಡ ಸಾಹಿತ್ಯ ಪರಿಷತ್ತು,ಬೆಂಗಳೂರು.

೯. ಕೃಷ್ಣರಾಯ. ಅ.ನ, ಸಾಹಿತ್ಯ ಮತ್ತು ಯುಗಧರ್ಮ, ೨೦೦೭, ಸಾಗರ್ ಪ್ರಕಾಶನ, ಬೆಂಗಳೂರು.

೧೦. ಕೃಷ್ಣರಾಯ ಶಾ.ಮಂ. (ಸಂ), ತ.ರಾ.ಸು. ಬದುಕು ಬರಹ, ೨೦೦೮, ಹೇಮಂತ ಸಾಹಿತ್ಯ, ಬೆಂಗಳೂರು.

೧೧. ಗೋವಿಂದರಾಜ ಗಿರಡ್ಡಿ,

- ಕಾದಂಬರಿ ವಸ್ತು ಮತ್ತು ತಂತ್ರ, ೧೯೮೭, ಸ್ನೇಹ ಪ್ರಕಾಶನ, ಬೆಂಗಳೂರು.
- ಸಣ್ಣಕಥೆಯ ಹೊಸ ಒಲವುಗಳು, ೧೯೭೮, ಸಾಹಿತ್ಯ ಭಂಡಾರ, ಹುಬ್ಬಳ್ಳಿ.

೧೨. ಗೋವಿಂದರಾಜು, ಸಿ.ಆರ್.

- ನವಚಾರಿತ್ರವಾದ, ಮಂಟಪ ಮಾಲೆ – ೧೬೩, ೨೦೦೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಚರಿತ್ರೆ ಅಧ್ಯಯನ, ಸಂಪುಟ ೨, ಸಂಚಿಕೆ ೨, ೨೦೦೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ಗೌರಿ ಸುಂದರ್ (ಸಂ.), ತ.ರಾ.ಸು. ಕಾದಂಬರಿಗಳ ಕುರಿತು, ೨೦೧೫, ಸುಂದರ ಪ್ರಕಾಶ, ಬೆಂಗಳೂರು.

೧೪. ತಿಪ್ಪೇಸ್ವಾಮಿ. ಜಿ.ಆರ್., ಆಧುನಿಕತೆ ಮತ್ತು ಬಂಡಾಯ ಕಾದಂಬರಿ, ೨೦೧೦ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ತೆಲಗಾವಿ ಲಕ್ಷ್ಮಣ,

- ಚಿತ್ರದುರ್ಗ ಜಿಲ್ಲಾ ಇತಿಹಾಸ ಅಧ್ಯಯನ ವ್ಯಾಪಕತೆ ಮತ್ತು ಸಾಧ್ಯತೆ ಒಂದು ಶತಮಾನ, ೨೦೦೪, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.
- ಚಿತ್ರದುರ್ಗದ ಒನಕೆ ಓಬವ್ವ ಚಾರಿತ್ರಿಕ ನಿವೇಚನೆ, ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- (ಸಂ) ಸ್ಥಳೀಯ ಚರಿತ್ರೆ ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ, ೨೦೦೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ದೊಡ್ಡೇರಿ ಕದನ ಚರಿತ್ರೆ ಮತ್ತು ಜನಪದಗಳ ನೆಲೆಯಲ್ಲಿ, ಮಂಟಪಮಾಲೆ, ೧೮೪,೨೦೧೦ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

• ಚಿತ್ರದುರ್ಗ ನಾಯಕ ಅರಸರು ರಾಜಕೀಯ ಚಿತ್ರ, ೨೦೦೯, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೧೬. ದೇಸಾಯಿ ಶಾಂತಿನಾಥ, ಕನ್ನಡ ಕಾದಂಬರಿ ನಡೆದು ಬಂದ ರೀತಿ, ೧೯೮೯, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೭. ನಾಗಭೂಷಣಸ್ವಾಮಿ. ಓ.ಎಲ್., ವಿಮರ್ಶೆಯ ಪರಿಭಾಷೆ, ೨೦೦೧, ಅಂಕಿತ ಪುಸ್ತಕ, ಬೆಂಗಳೂರು.

೧೮. ನಾರಾಯಣ ಕೆ.ವಿ.

• (ಸಂ) ಸಾಹಿತ್ಯ ವಿಮರ್ಶೆ – ೧೯೮೧, ೧೯೮೩, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.

• (ಸಂ) ಭಾಷೆ, ೨೦೦೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೯. ಪ್ರಭಾಕರ್.ನಾ,

• ತ.ರಾ.ಸು.ಕುರಿತು, ೧೯೯೭, ತ.ರಾ.ಸು. ಪ್ರತಿಷ್ಠಾನ, ಯಾದವಗಿರಿ ಮೈಸೂರು.

• ಅ.ನ.ಕೃ. – ತ.ರಾ.ಸು. ೧೯೯೭, ತ.ರಾ.ಸು. ಪ್ರತಿಷ್ಠಾನ, ಮೈಸೂರು.

• ತ.ರಾ.ಸು. ೨೦೦೫, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೨೦. ಪಾವಟೆ ಚೆನ್ನಕ್ಕ, ರಾಷ್ಟ್ರಕೂಟ ಸಾಮಂತ ಚಲ್ಲಕೇತನರು, ೧೯೯೯, ಚೆನ್ನಗಂಗಾ ಪ್ರಕಾಶನ, ಧಾರವಾಡ.

೨೧. ಪಾಟೀಲ.ಎಮ್.ಎಸ್,

• ತ.ರಾ.ಸು ಹಾಗೂ ಅವರ ಕಾದಂಬರಿಗಳು, ೧೯೯೩, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

• ತ.ರಾ.ಸು, ೨೦೦೮. ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೨. ಪುಟ್ಟಣ್ಣ. ಎಂ.ಎಸ್., ಚಿತ್ರದುರ್ಗದ ಪಾಳೆಯಗಾರರು, ೧೯೯೭, ಪ್ರಕಾಶಕರು ಕಾವ್ಯಾಲಯ, ಬೆಂಗಳೂರು.

೨೩. ಪೂಜಾರಹಳ್ಳಿ ವಿರೂಪಾಕ್ಷ (ಸಂ), ಚರಿತ್ರೆ ಅಧ್ಯಯನ, ಸಂಪುಟ-೪, ಸಂಚಿಕೆ-೧, ೨೦೦೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೪. ಬರಗೂರು ರಾಮಚಂದ್ರಪ್ಪ.

- (ಸಂ) ಸಾಹಿತ್ಯ ಮತ್ತು ಪ್ರಭುತ್ವ, ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
- (ಸಂ) ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ, ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು.

೨೫. ಮಹಂತೇಶ. ಎನ್. ಎಸ್., ಚಿತ್ರದುರ್ಗದ ಕೋಟೆ ಪರಿಸರದ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ, ೨೦೦೮, ರೇಣುಕ ಪ್ರಕಾಶನ, ಚಿತ್ರದುರ್ಗ.

೨೬. ಮಹೇಶ್, ಎಂ.ಎನ್., ತ.ರಾ.ಸು. ಸಾಹಿತ್ಯ : ಒಂದು ಅಧ್ಯಯನ, ೨೦೦೯, ಹೇಮಂತ ಸಾಹಿತ್ಯ, ಬೆಂಗಳೂರು.

೨೭. ಮೊಹನ ಕೃಷ್ಣ ರೈ ಕೆ.

- (ಸಂ) ಚರಿತ್ರೆ ಅಧ್ಯಯನ, ೨೦೦೭ ಸಂಪುಟ ೧ ಸಂಚಿಕೆ_೧ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಚರಿತ್ರೆ ಕಥನ, ೨೦೦೯, ಪಲ್ಲವ ಪ್ರಕಾಶನ, ಬಳ್ಳಾರಿ.
- ಚರಿತ್ರೆ ಅಧ್ಯಯನ, ೨೦೦೭, ಸಂಪುಟ ೩ ಸಂಚಿಕೆ ೧, ಪ್ರಸಾರಾಂಗ ,ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಚರಿತ್ರೆ ಅಧ್ಯಯನ, ೨೦೦೭, ಸಂಪುಟ ೩ ಸಂಚಿಕೆ ೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೮. ಯೋಗಿಶ್ವರಪ್ಪ.ಡಿ.ಎನ್. ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರು, ೨೦೦೯, ಧಾತ್ರಿ ಪುಸ್ತಕ, ಬೆಂಗಳೂರು.

೨೯. ರವೀಂದ್ರನಾಥ.ಕೆ, ಮಾನ್ಯ, ೧೯೯೭, ಮಂಗಳಾ ಪ್ರಕಾಶನ, ಹೊಸಪೇಟ.

೩೦. ರಾಘವೇಂದ್ರರಾವ್. ಎಚ್.ಎಸ್.

- ಪ್ರಗತಿಶೀಲತೆ, ೧೯೯೦, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
- (ಸಂ.) ಶತಮಾನದ ಸಾಹಿತ್ಯ ವಿಮರ್ಶೆ, ೨೦೦೧, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು..

೩೧. ರಾಜಶೇಖರಪ್ಪ ಬಿ,

- ಇತಿಹಾಸ ಕಥನ, ೨೦೦೧, ಸಿ.ವಿ.ಜಿ. ಪಬ್ಲಿಕೇಶನ್, ಬೆಂಗಳೂರು,
- ದುರ್ಗಶೋಧನ, ೨೦೦೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೨. ಲಕ್ಕಪ್ಪಗೌಡ. ಎಚ್. ಜಿ. ಸಾಹಿತ್ಯ ಶೋಧನೆ, ೨೦೦೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೩. ವೇಣು ಬಿ.ಎಲ್, ರಾಜಾಬಿಚ್ಚುಗತ್ತಿ ಭರಮಣ್ಣನಾಯಕ, ೨೦೧೫, ಗೀತಾಂಜಲಿ ಪುಸ್ತಕ ಪ್ರಕಾಶನ, ಶಿವಮೊಗ್ಗ.

೩೪. ಶಾಮರಾಯ.ತ.ಸು, ಕನ್ನಡ ಸಾಹಿತ್ಯ ಚರಿತ್ರೆ, ೨೦೧೦, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗಂಥಮಾಲೆ, ಮೈಸೂರು.

೩೫. ಶಿರೂರು ಬಿ.ವ್ಹಿ, ಸಂಶೋಧನಾ ವ್ಯಾಸಂಗ, ೧೯೯೦, ಅನ್ನಪೂರ್ಣ ಪ್ರಕಾಶನ, ಹುಬ್ಬಳ್ಳಿ.

೩೬. ಶಿವರಾಮಯ್ಯ, ಸಾಹಿತ್ಯ ಮತ್ತು ಚರಿತ್ರೆ, ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೩೭. ಶೇಷಗಿರಿರಾವ್, ಎಲ್. ಎಸ್.,

- (ಸಂ).ಸ್ವಾತಂತ್ರೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ, ೧೯೯೩, ಉದಯಬಾನು ಕಲಾ ಸಂಘ, ಬೆಂಗಳೂರು.
- ಕಾದಂಬರಿ ಮತ್ತು ಸಾಮಾನ್ಯ ಮನುಷ್ಯ, ೧೯೯೦, ಶಾರಧಾ ಪ್ರಕಾಶನ, ಬೆಂಗಳೂರು.
- ಹೊಸಗನ್ನಡ ಸಾಹಿತ್ಯ, ೧೯೮೮, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೮. ಶ್ಯಾಮಲ ಸಿ.ಆರ್., ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ, ೨೦೦೮, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೯. ಸದಾಶಿವ ಕೆ., ಸಮಗ್ರ ಭಾರತದ ಇತಿಹಾಸ, ೨೦೦೮, ಪ್ರಿಯದರ್ಶಿನಿ ಪ್ರಕಾಶನ, ಮೈಸೂರು.

೪೦. ಹಾಮಾ ನಾಯಕ (ಸಂ.), ಚಿನ್ನದ ಗರಿ, ೧೯೭೦, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೪೧. ಹುಲ್ಲೂರ ಶ್ರೀನಿವಾಸ ಜೋಯ್ಸರು, ಚಿತ್ರದುರ್ಗದ ಬಖೈರು, ೨೦೦೯, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು.



